







928.K08
BMS
2014

# ಸಾಹಿತ್ಯೋಪಾಸಕರು

ರಾಷ್ಟ್ರಕವಿ ಎಂ. ಗೋವಿಂದ ಪೈ
ಡಾ. ಡಿ.ವಿ. ಗುಂಡಪ್ಪ
ದೇವಮಾನವ ಪ್ರೊ. ಟಿ.ಎಸ್. ವೆಂಕಣ್ಣಯ್ಯ
ಹೊಸಗನ್ನಡಕ್ಕೆ ಹೊಸಕೆರೆ ಚಿದಂಬರಯ್ಯನವರ ಕೊಡುಗೆ

‘ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ’ವನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಮುಖ್ಯರು. ಅವರು ಅದನ್ನು ೦೬ ಮೇ, ೧೯೭೯ರಲ್ಲಿ ಸ್ಥಾಪಿಸಿದರು. ಈ ಪ್ರತಿಷ್ಠಾನವನ್ನು ರಾಷ್ಟ್ರಕವಿ ಕುವೆಂಪು ಅವರು ೧೦ ಮಾರ್ಚ್, ೧೯೮೦ರಂದು ಉದ್ಘಾಟಿಸಿದರು. ಕರ್ನಾಟಕ ಸರ್ಕಾರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಸಾರ್ವಜನಿಕರ ಸಹಕಾರ, ಸಹಾಯಗಳಿಂದ ಬೆಂಗಳೂರಿನ ನರಸಿಂಹರಾಜ ಕಾಲೋನಿಯಲ್ಲಿ ‘ಬಿ.ಎಂ.ಶ್ರೀ. ಕಲಾಭವನ’ ನಿರ್ಮಾಣವಾಗಿದೆ. ಪ್ರತಿಷ್ಠಾನದ ‘ಪ್ರೊ. ಎಂ.ವಿ. ಸೀತಾರಾಮಯ್ಯ ಸಂಶೋಧನಾ ಕೇಂದ್ರ’ದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆಯನ್ನು ಪಡೆದ ಪಿಎಚ್.ಡಿ., ಹಾಗೂ ಎಂ.ಫಿಲ್ ತರಗತಿಗಳು ನಡೆಯುತ್ತಿವೆ. ಪ್ರತಿಷ್ಠಾನ ಅಪರೂಪದ ಹಸ್ತಪ್ರತಿ ಭಂಡಾರ ಹಾಗೂ ಉತ್ತಮ ಗ್ರಂಥಭಂಡಾರವನ್ನು ಹೊಂದಿದೆ. ಹಸ್ತಪ್ರತಿ ವಿಜ್ಞಾನ ಮತ್ತು ಹಳಗನ್ನಡ ಅಧ್ಯಯನ ತರಗತಿಗಳನ್ನು ಪ್ರತಿಷ್ಠಾನ ನಡೆಸುತ್ತಿದೆ. ಪ್ರತಿಷ್ಠಾನ ತ್ರೈಮಾಸಿಕ ‘ವಾರ್ತಾಪತ್ರ’ ಹಾಗೂ ದ್ವೈವಾರ್ಷಿಕ ವಿದ್ವತ್ ಪತ್ರಿಕೆ ‘ಕರ್ನಾಟಕ ಲೋಚನ’ವನ್ನು ಪ್ರಕಟಿಸುತ್ತಿದೆ. ಕಾಲಕಾಲಕ್ಕೆ ಉತ್ತಮ ಗ್ರಂಥಗಳನ್ನು ಪ್ರಕಟಿಸುತ್ತಿದೆ. ನಿರಂತರವಾಗಿ ಸಂಶೋಧನಾತ್ಮಕ ಮತ್ತು ಸಾಂಸ್ಕೃತಿಕ ಕಾರ್ಯಗಳನ್ನು ಪ್ರತಿಷ್ಠಾನ ನಡೆಸಿಕೊಂಡು ಬರುತ್ತಿದೆ. ೨೦೦೪ರಲ್ಲಿ ಪ್ರತಿಷ್ಠಾನ ರಜತ ಮಹೋತ್ಸವವನ್ನು ಆಚರಿಸಿತು.



ಸಾಹಿತ್ಯೋಪಾಸಕರು ಮಾಲೆ-೩

# ಸಾಹಿತ್ಯೋಪಾಸಕರು

ರಾಷ್ಟ್ರಕವಿ ಎಂ. ಗೋವಿಂದ ಪೈ
ಡಾ. ಡಿ.ವಿ. ಗುಂಡಪ್ಪ
ದೇವಮಾನವ ಪ್ರೊ. ಟಿ.ಎಸ್. ವೆಂಕಣ್ಣಯ್ಯ
ಹೊಸಗನ್ನಡಕ್ಕೆ ಹೊಸಕೆರೆ ಚಿದಂಬರಯ್ಯನವರ ಕೊಡುಗೆ

ಸಂಪಾದಕರು
ಡಾ. ಪಿ.ವಿ. ನಾರಾಯಣ
ಎಸ್.ವಿ. ಶ್ರೀನಿವಾಸರಾವ್
ಪ್ರೊ. ಜಿ. ಅಬ್ದುಲ್‌ಬಷೀರ್


25439
21.8.24
ಬೆಂಗಳೂರು-19



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು - ೫೬೦ ೦೧೯
ದೂರವಾಣಿ : ೦೮೦-೨೬೬೧೫೮೭೭, ೨೬೬೬೭೬೭೭೩
Email : bmsritrust@gmail.com

**SAHITYOPASAKARU LEKHANA MALE - 3 :** by different Authors, Published by B.M.Sri Smaraka Prathisthana, 3rd Main Road, N.R. Colony, Bangalore - 560 019.

928.K08
BMS
2014

First Impression : 2014
Pages : viii + 152 = 160
Copies : 500
Price : **Rs. 90/-**
© : Reserved
Book size : 1/8 demy
Paper used : 80 gsm N.S. Maplitho

ಪ್ರಥಮ ಮುದ್ರಣ : ೨೦೧೪
ಪುಟಗಳು : viii + ೧೫೨ = ೧೬೦
ಪ್ರತಿಗಳು : ೫೦೦
ಬೆಲೆ : ರೂ. ೯೦/-
ಹಕ್ಕು : ಕಾಯ್ದಿರಿಸಿದೆ
ಪುಸ್ತಕದ ಆಕಾರ : ೧/೮ ಡೆಮಿ
ಬಳಸಿದ ಕಾಗದ : ೮೦ ಜಿಎಸ್‌ಎಂ ಎನ್.ಎಸ್. ಮ್ಯಾಪ್‌ಲಿಥೊ

**ಗ್ರಂಥ ಪ್ರಕಟಣ ಸಲಹಾ ಸಮಿತಿ**
**ಪ್ರೊ. ಎಂ.ಎಚ್. ಕೃಷ್ಣಯ್ಯ** (ಗೌರವ ಅಧ್ಯಕ್ಷರು)
**ಡಾ. ಪಿ.ವಿ. ನಾರಾಯಣ** (ಅಧ್ಯಕ್ಷರು)
**ಪ್ರೊ. ಜಿ. ಅಬ್ದುಲ್ ಬಷೀರ್** (ಗೌರವ ಕಾರ್ಯದರ್ಶಿ)
**ಶ್ರೀ ಬಿ.ಆರ್. ರವೀಂದ್ರನಾಥ್** (ಗೌರವ ಕಾರ್ಯದರ್ಶಿ)
**ಶ್ರೀ ಎಂ.ಎಸ್. ರಾಮಪ್ರಸಾದ್** (ಕೋಶಾಧಿಕಾರಿ)
**ಡಾ. ಕೆ.ಆರ್. ಗಣೇಶ** (ಸದಸ್ಯರು)
**ಡಾ. ಆರ್. ಲಕ್ಷ್ಮೀನಾರಾಯಣ** (ಸದಸ್ಯರು)
**ಡಾ. ಎನ್.ಆರ್. ಲಲಿತಾಂಬ** (ಸದಸ್ಯರು)

915567

ಮುದ್ರಣ
ಇಳಾ ಮುದ್ರಣ
ಬೆಂಗಳೂರು - ೫೬೦ ೦೨೬
ದೂರವಾಣಿ : ೨೬೭೫೭೧೫೯

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಗ್ರಂಥ ಭಂಡಾರ
ಕ್ರಮ ಸಂ. ೨೩೪೭೭
ವರ್ಗ.............
ವರ್ಗ ಸಂಖ್ಯೆ.............
ಬಂದ ತಾ॥.............
ಬೆಲೆ.............

# ಮುಮ್ಮಾತು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಮೂರು ದಶಕಗಳಿಗೂ ಮೀರಿದ ಅವಧಿಯಿಂದ ಕಾರ್ಯನಿರ್ವಹಿಸುತ್ತ ಕನ್ನಡ ಸಾಂಸ್ಕೃತಿಕ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುತ್ತ ಬಂದ ಸಂಸ್ಥೆ. ಇದರ ಬಗ್ಗೆ ನಾಡಿನ ಎಲ್ಲ ವಿದ್ವಾಂಸರೂ ಆದರಾಭಿಮಾನಗಳನ್ನು ಹೊಂದಿ ಸಂಸ್ಥೆಯೊಂದಿಗೆ ಸಹಕರಿಸುತ್ತಿದ್ದಾರೆ. ಹಾಗಾಗಿಯೇ ಅದರ ಪ್ರಕಟಣ ಕಾರ್ಯವೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ. ತಮ್ಮ ಹೊಚ್ಚ ಹೊಸ ಕೃತಿಗಳನ್ನು ಪ್ರಕಟಿಸಲು ನಮಗೆ ಅನುವು ಮಾಡಿಕೊಡುತ್ತಿದ್ದಾರೆ.

ಪ್ರತಿಷ್ಠಾನದ ಮೂಲ ನೆಲೆ ಸಂಶೋಧನೆ. ಸಂಶೋಧನೆಯೆಂಬುದು ಹಿಂದಿನದನ್ನು ಕೆದಕುವುದಕ್ಕೆ ಮಾತ್ರ ಸೀಮಿತವಾದದ್ದೇನಲ್ಲ. ಎಲ್ಲ ಕಾಲದ ಸಂದರ್ಭ, ಸನ್ನಿವೇಶ, ಕೃತಿ, ಕಾರ್ಯ ಇವುಗಳಲ್ಲಿ ಅಂತರ್ಗತವಾದ ಸತ್ಯವನ್ನು ಗುರುತಿಸುವ ಕೆಲಸವೇ ಸಂಶೋಧನೆಯೆನ್ನಬಹುದೆಂದು ನನ್ನ ತಿಳಿವಳಿಕೆ. ಹಾಗಾಗಿ ಸಮಕಾಲೀನವಾದದ್ದರ ಬಗ್ಗೆಯೂ ಶಾಶ್ವತದ ಜೊತೆಗೆ ಸದ್ಯದ ಬಗ್ಗೆಯೂ ಸಂಶೋಧನೆ ನಡೆಯಬೇಕಾದುದು, ಅವಶ್ಯಕ. ಸಂಶೋಧನೆಯ ಅರ್ಥ ಹುಡುಕಾಟ ಎಂದಲ್ಲವೇ? ಆಗಲೇ ಹೇಳಿದಂತೆ 'ಸತ್ಯ'ವನ್ನು ಶೋಧಿಸುವುದು. ಆದರೆ ಸತ್ಯ ಎಂದರೇನೆಂಬುದನ್ನೇ ಯಾರೂ ಖಚಿತವಾಗಿ ನಿರ್ವಚಿಸಲಾಗುವುದಿಲ್ಲ! ಒಂದು ಕಾಲಕ್ಕೆ ಸತ್ಯ ಎನ್ನಿಸಿಕೊಳ್ಳುವಂಥದು ಮತ್ತೊಂದು ಕಾಲಕ್ಕೆ ಹಾಗೆ ಕಾಣದೇ ಹೋಗಬಹುದು; ಅಥವಾ ಒಬ್ಬ ವ್ಯಕ್ತಿಗೆ ಸತ್ಯವೆನಿಸಿದ್ದು ಮತ್ತೊಬ್ಬನಿಗೆ ಹಾಗನ್ನಿಸದೇ ಇರಬಹುದು; ಅಷ್ಟೇಕೆ, ಒಬ್ಬನೇ ವ್ಯಕ್ತಿಗೆ ಒಮ್ಮೆ ಸತ್ಯವೆನ್ನಿಸಿದುದು ಕಾಲ ಸರಿದಂತೆ ತನ್ನ ಅನಿಸಿಕೆಯ ಬಗ್ಗೆ ಅವನಿಗೆ ಅನುಮಾನವುಂಟಾಗಬಹುದು. ಅಂದರೆ ಸತ್ಯ ಎಂಬುದು ಅನಂತಮುಖಿ; ಅದಕ್ಕನುಗುಣವಾಗಿ ಸಂಶೋಧನೆಯೂ ಹಳೆಯದನ್ನು ಹಾಗೂ ಹೊಸದನ್ನು ಹೊಸದೃಷ್ಟಿಯಿಂದ ನೋಡುವ, ವಿಶ್ಲೇಷಿಸುವ, ಪರಿಭಾವಿಸುವ, ವ್ಯಾಖ್ಯಾನಿಸುವ, ಅದರ ಪ್ರಸ್ತುತತೆಯನ್ನು ವಿವೇಚಿಸುವ ಎಲ್ಲ ಬೌದ್ಧಿಕ ಸಾಹಸಗಳೂ ಸಂಶೋಧನೆಗಳೇ.

ಇಂತಹ ಸಂಶೋಧನೆ ಹೆಚ್ಚಾಗಬೇಕು, ಅರಿಯುವ, ಬಗೆಯುವ ಪ್ರಕ್ರಿಯೆ ಮೊನಚಾಗಬೇಕು, ಆಳವಾಗಬೇಕು. ಅದಕ್ಕಾಗಿ ಹಿರಿಯರ ಮಾರ್ಗದರ್ಶನ ಬೇಕು, ಕಿರಿಯರ ಉತ್ಸಾಹ ಬೇಕು. ಪ್ರತಿಷ್ಠಾನವು ತಾನು ಆರಂಭಗೊಂಡ ಕಾಲದಿಂದ ಮೊದಲುಗೊಂಡ ಇಂತಹ ಕಾರ್ಯಗಳಿಗೆ ವೇದಿಕೆಯಾಗಿದೆ; ಉಪನ್ಯಾಸಗಳು, ವಿಚಾರ

ಸಂಕಿರಣಗಳು, ಸಂವಾದಗಳು ಇವುಗಳ ಜೊತೆಗೆ ಎಂ.ಫಿಲ್ ಮತ್ತು ಪಿಎಚ್.ಡಿ. ಅಭ್ಯರ್ಥಿಗಳಿಗೆ ತರಬೇತಿ ಮತ್ತು ಮಾರ್ಗದರ್ಶನಗಳು, ಪುಸ್ತಕ ಪ್ರಕಟಣೆ ಇವುಗಳ ಮೂಲಕ ಇಂಥ ಸಂಶೋಧನೆಗೆ ಪ್ರತಿಷ್ಠಾನವು ವೇದಿಕೆಯಾಗಿದೆ. ಈ ಕಾರ್ಯದಲ್ಲಿ ಎಲ್ಲರ ನೆರವು ಮತ್ತು ಪ್ರೋತ್ಸಾಹಗಳು ಅವಶ್ಯಕ.

ಸಾಹಿತ್ಯೋಪಾಸಕರು ಲೇಖನಮಾಲೆಯಡಿ ಉಪನ್ಯಾಸಗಳನ್ನು ಮಾಡಿ ಅವನ್ನು ಬರೆವಣಿಗೆಯ ರೂಪದಲ್ಲಿ ನೀಡಿ ಉಪಕರಿಸಿದ ಡಾ. ಪ್ರಮೀಳಾ ಮಾಧವ್, ಡಾ. ವಿಜಯಾ ಸುಬ್ಬರಾಜ್, ಪ್ರೊ. ಎಸ್. ಬಿಳಿಗಿರಿವಾಸನ್ ಮತ್ತು ಪ್ರೊ. ಜಿ. ಅಶ್ವತ್ಥನಾರಾಯಣ ಅವರಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತದೆ. ಈ ಕೃತಿಯನ್ನು ಪ್ರತಿಷ್ಠಾನವು ಪ್ರೀತಿಯಿಂದ ಹೊರತರುತ್ತಿದೆ. ಓದುಗರು ಇದನ್ನು ಬರಮಾಡಿಕೊಳ್ಳುವರೆಂಬ ನಂಬಿಕೆ ನಮ್ಮದು.

ಹಸ್ತಪ್ರತಿಯ ಲೇಖನಗಳನ್ನು ಪರಿಶೀಲಿಸಿ, ಪ್ರಕಟಣೆಗೆ ಸಿದ್ಧಪಡಿಸಿ, ಅಂತಿಮ ಕರಡನ್ನು ತಿದ್ದಿ ಉಪಕರಿಸಿದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಈ ಗ್ರಂಥವನ್ನು ಸುಂದರವಾಗಿ, ಶೀಘ್ರವಾಗಿ ಮುದ್ರಿಸಿಕೊಟ್ಟ 'ಇಳಾ ಮುದ್ರಣ'ದ ಮಾಲೀಕರಿಗೆ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಡಾ. ಪಿ.ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

# ಪರಿವಿಡಿ

# ರಾಷ್ಟ್ರಕವಿ ಎಂ. ಗೋವಿಂದ ಪೈ

❖

ಡಾ. ಪ್ರಮೀಳಾ ಮಾಧವರಾವ್*

## ಪೀಠಿಕೆ

ರಾಷ್ಟ್ರಕವಿ ಗೋವಿಂದಪೈಯವರು ಕನ್ನಡ ನಾಡು ಕಂಡ ಅತಿ ಶ್ರೇಷ್ಠ ಸಾಹಿತ್ಯ ತಪಸ್ವಿ. ಇವರನ್ನು ಮಹಾಪುರುಷ, ಕಾವ್ಯರ್ಷಿ, ಸಂಶೋಧನ ಪಟು, ಇತಿಹಾಸ ತಜ್ಞ, ಬಹುಭಾಷಾ ಕೋವಿದ, ಪ್ರಕಾಂಡ ಪಂಡಿತ, ಉಜ್ವಲ ರಾಷ್ಟ್ರಪ್ರೇಮಿ, ಅಪ್ರತಿಮ ದೈವಭಕ್ತ–ಎಂದೆಲ್ಲ ಸಾರಸ್ವತ ಪ್ರಪಂಚ ಗುರುತಿಸಿದೆ. ಕನ್ನಡ ಸಾಹಿತ್ಯಾಕಾಶದ ಈ ಧ್ರುವತಾರೆಯ ಬದುಕು, ಬರಹಗಳಿಗೆ ಸಂಬಂಧಿಸಿದಂತೆ ಅಸಂಖ್ಯಾತ ಕೃತಿಗಳು, ಲೇಖನಗಳು ಪ್ರಕಟವಾಗಿವೆ. ಜಿ.ಪಿ. ರಾಜರತ್ನಂ ಅವರ 'ಕವಿ ಗೋವಿಂದ ಪೈ,' (೧೯೪೯) ವಿ.ಎಂ. ಇನಾಂದಾರರ 'ಗೋವಿಂದ ಪೈಗಳ ಕಾವ್ಯ' (೧೯೬೫) ಗೋವಿಂದ ಪೈಯವರ ಕುರಿತಾದ ಪರಿಚಯಾತ್ಮಕ ಕೃತಿಗಳಾದರೆ ೧೯೬೬ರಲ್ಲಿ ಪ್ರಕಟವಾದ ಶ್ರೀನಿವಾಸ ಹಾವನೂರ ಮತ್ತು ಮ.ವಿ. ನಾಯಕರು ಸಂಪಾದಿಸಿದ 'ಗೋವಿಂದ ಪೈ ವಾಙ್ಮಯ ದರ್ಶನ' (೧೯೬೬), ಗೋವಿಂದ ಪೈಯವರ ಕೈಬರಹವನ್ನೂ ಒಳಗೊಂಡಂತೆ ಅವರ ಸಂಶೋಧನೆ, ಇಂಗ್ಲಿಷ್ ಬರಹಗಳು, ಧರ್ಮ–ತತ್ವಜ್ಞಾನ, ಹಳಗನ್ನಡ ಕವಿ–

---

* ಶ್ರೀ ಧಾಮ್, ನಂ. ೧೧೪, ವಿಠಲರಾವ್ ಹೌಸಿಂಗ್ ಬೋರ್ಡ್ ಸೊಸೈಟಿ ಲೇಔಟ್ (ಇಸ್ರೋ ಲೇಔಟ್ ಸಮೀಪ) ಬಿಕಾಸಿಪುರ, ಬೆಂಗಳೂರು – ೫೬೦ ೦೭೮. ಮೊ.: ೯೮೪೫೯೩೧೬೧೦.

ಕಾವ್ಯ, ಹೊಸಗನ್ನಡ ನಾಟಕ, ಸಾಹಿತ್ಯ, ಕವಿತೆ, ಅನುವಾದಗಳ ಸಂಪೂರ್ಣ ವಿವರ, ವಿಚಾರ ವಿಮರ್ಶೆ ಮತ್ತು ಸಂಕಲನ ಗ್ರಂಥವಾಗಿದ್ದು ಗೋವಿಂದ ಪೈಯವರ ಸಾಹಿತ್ಯವನ್ನು ಅರಿಯ ಬಯಸುವವರಿಗೆ ಕಾಮಧೇನುವೆನಿಸಿದೆ. ಈ ಕೃತಿಯನ್ನು ಕುರಿತು ಪ್ರೊ. ಕು.ಶಿ. ಹರಿದಾಸ ಭಟ್ಟರು 'ಗೋವಿಂದ ಪೈ ವಾಙ್ಮಯ ದರ್ಶನ'ದ ಯೋಜನೆ ಕನ್ನಡ ಸಂಶೋಧನ ಇತಿಹಾಸದಲ್ಲಿ ಪ್ರಾರಂಭವಾಗುತ್ತಿರುವ ನೂತನ ಶಕೆಗೆ ನಾಂದಿಯಾಗಿದೆ... ಬಹುಶಃ ಯಾವ ಭಾರತೀಯ ಸಾಹಿತ್ಯದಲ್ಲಿಯೂ ಇಂಥ ಯೋಜನೆ ಕಾರ್ಯರೂಪಕ್ಕೆ ಬಂದಂತೆ ಕಾಣುವುದಿಲ್ಲ" ಎಂದು ದೇಜಗೌರವರ ಮಾತನ್ನು ಉಲ್ಲೇಖಿಸಿ ಪ್ರಶಂಸಿಸಿದ್ದಾರೆ. ೧೯೮೩ರಲ್ಲಿ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ 'ಗೋವಿಂದಪೈ' ಶತಮಾನದ ಸ್ಮರಣೆ ಗ್ರಂಥದಲ್ಲಿ ಪೈಯವರ ಕಾವ್ಯ, ಶಾಸ್ತ್ರ, ಸಂಶೋಧನ ಕೃತಿಗಳ ಗಂಭೀರವಾದ ಚರ್ಚೆ, ಒಳನೋಟ, ಮೌಲ್ಯಮಾಪನಗಳಿದ್ದು ರಾಷ್ಟ್ರಕವಿಯ ಸಾಧನೆ, ಸಿದ್ಧಿಗಳನ್ನು ಅರಿತುಕೊಳ್ಳಬಯಸುವ ಸಂಶೋಧನ ವಿದ್ಯಾರ್ಥಿಗಳಿಗೆ ಒಂದು ಅಮೂಲ್ಯ ವಾದ ಆಕರ ಗ್ರಂಥವೆನಿಸಿದೆ. ಕುಂದಾಪುರದ ಭಂಡಾರ್ಕರ್ಸ್ ಕಾಲೇಜಿನವರು ಪ್ರಕಟಿಸಿದ ಗೋವಿಂದ ಪೈ ಸ್ಮಾರಕ ಗ್ರಂಥ 'ದೀವಿಗೆ' ಪೈಯವರ ಬದುಕು, ಬರಹ, ವ್ಯಕ್ತಿತ್ವಗಳಿಗೆ ಸಂಬಂಧಿಸಿದಂತೆ ಒಂದು ಅತ್ಯಮೂಲ್ಯ ಸಹೃದಯ ಸ್ಪಂದನವಾಗಿದೆ. ಪುತ್ತೂರಿನ ಬೋಳಂತಕೋಡಿ ಈಶ್ವರ ಭಟ್ಟರು ಸಂಪಾದಿಸಿದ 'ಗೋವಿಂದ ಪೈ ನೋಟ,' ಕಯ್ಯಾರ ಕಿಞ್ಞಣ್ಣ ರೈಯವರ 'ಗೋವಿಂದ ಪೈ : ಸ್ಮೃತಿ–ಕೃತಿ'ಪೈಯವರ ಪರಿಚಯಾತ್ಮಕ ದರ್ಶನವನ್ನು ನೀಡುತ್ತವೆ. ಇವಲ್ಲದೆ ಅಮ್ಮೆಂಬಳ ಶಂಕರನಾರಾಯಣ ನಾವಡ, ಕು.ಶಿ. ಹರಿದಾಸ ಭಟ್ಟ, ಹಂಪನಾ, ಎಸ್. ಶಂಕರನಾರಾಯಣ ಭಟ್ಟ ಮೊದಲಾದ ಅನೇಕ ವಿದ್ವಾಂಸರೂ, ಅಭಿಮಾನಿಗಳೂ ಪೈಯವರ ವ್ಯಕ್ತಿತ್ವ, ಸಾಧನೆ, ಕೊಡುಗೆಗಳ ಬಗ್ಗೆ ಬಹುವಿಧವಾದ ಗೌರವ, ಪ್ರಶಂಸೆ, ಅಭಿಮಾನಗಳನ್ನು ಸಲ್ಲಿಸಿದ್ದಾರೆ.

೧೯೯೫ರಲ್ಲಿ ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಗೋವಿಂದ ಪೈಯವರ ಸಮಸ್ತ ಬರಹಗಳನ್ನು 'ಹಳಗನ್ನಡ ನಡುಗನ್ನಡ ಸಾಹಿತ್ಯ,' 'ಹೊಸಗನ್ನಡ ಸಾಹಿತ್ಯ,' 'ತುಳುನಾಡಿನ ಇತಿಹಾಸ,' 'ಕರ್ನಾಟಕದ ಇತಿಹಾಸ,' 'ಭಾರತದ ಇತಿಹಾಸ,' 'ವಾಗರ್ಥ, ಧರ್ಮ, ತತ್ತ್ವಜ್ಞಾನ,' 'ಭಾಷಾಂತರ,' 'ಮುನ್ನುಡಿಗಳು (ಸ್ವತಂತ್ರ ಮತ್ತು ಇತರರ ಕೃತಿಗಳು),' 'ಪುಸ್ತಕ ವಿಮರ್ಶೆಗಳು' 'ಸಂಕೀರ್ಣ' ಹೀಗೆ ಹತ್ತು ಖಂಡಗಳಲ್ಲಿ ವಿಭಾಗಿಸಿ 'ಗೋವಿಂದ ಪೈ ಸಂಶೋಧನ ಸಂಪುಟ' ಎಂಬ ಕೃತಿಯನ್ನು ಪ್ರಕಟಿಸಿರುವುದು ಕನ್ನಡನಾಡಿನ, ಕನ್ನಡಿಗರ ಪುಣ್ಯವೆಂದೇ ಹೇಳಬಹುದು. ಎಲ್ಲೆಲ್ಲೋ ಚೆಲ್ಲಿ ಹೋದಂತಿದ್ದ ಗೋವಿಂದ ಪೈಯವರ ಸಮಗ್ರ ಕೃತಿಗಳನ್ನೂ ಏಕತ್ರ ಸಂಚಯಿಸಿ ಸು. ೧೪೦೦ ಪುಟಗಳ ಈ ಬೃಹತ್ ಸಂಪುಟವನ್ನು ಪ್ರಕಟಿಸಿರುವುದು ಒಂದು ಸ್ತುತ್ಯರ್ಹ ವಾದ ಸಾಧನೆಯಾಗಿದೆ.

ಗೋವಿಂದ ಪೈಯವರನ್ನು ಕುರಿತು ಕನ್ನಡದಲ್ಲಿ ಮಾತ್ರವಲ್ಲ ಇಂಗ್ಲಿಷ್‌ನಲ್ಲೂ ಕೃತಿಗಳು ಪ್ರಕಟವಾಗಿವೆ. 'Kannada writers and their works' ಮಾಲಿಕೆಯಲ್ಲಿ ಪ್ರಕಟವಾದ ವಿ.ಎಂ. ಇನಾಂದಾರರ ಇಂಗ್ಲಿಷ್ ಕೃತಿ 'ಗೋವಿಂದ ಪೈ' ಅತ್ಯಂತ

ಮೌಲಿಕವಾದ ಕೃತಿಯೆಂದು ಗುರುತಿಸಲ್ಪಟ್ಟಿದೆ. ಗೋವಿಂದ ಪೈಯವರ ಬದುಕು ಬರಹಗಳನ್ನು ವಸ್ತುನಿಷ್ಠವಾಗಿ ವಿವೇಚಿಸಿರುವ ಈ ಕೃತಿ 'ಪೈಯವರ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವುದಕ್ಕೆ ಒಂದು ಉತ್ತಮ ಪ್ರವೇಶ'[೪]ವೆಂದು ರಾಗೌರವರು ಅಭಿಪ್ರಾಯಿಸಿದ್ದಾರೆ.

**ಗೋವಿಂದ ಪೈ ಬದುಕು**

೧೮೮೩ ಮಾರ್ಚ್ ೨೩ರಂದು ದ.ಕ. ಜಿಲ್ಲೆಯ ಭಾಗವಾಗಿದ್ದ ಪಶ್ಚಿಮ ಕಡಲತೀರದ ಮಂಜೇಶ್ವರದಲ್ಲಿ ಮಂಗಳೂರಿನ ಆಗರ್ಭ ಶ್ರೀಮಂತರಾದ ಸಾಹುಕಾರ ತಿಮ್ಮ ಪೈ ಮತ್ತು ದೇವಕಿಯಮ್ಮನವರ ನಾಲ್ಕು ಗಂಡು ಮೂರು ಹೆಣ್ಣುಮಕ್ಕಳಲ್ಲಿ ಹಿರಿಯ ಮಗನಾಗಿ ಜನಿಸಿದವರು ಎಂ. ಗೋವಿಂದ ಪೈಯವರು. ಗುಲ್ವಾಡಿ ವೆಂಕಟರಾವ್, ಬಿ. ವೆಂಕಟಾಚಾರ್ಯ, ಎಂ.ಎಸ್. ಪುಟ್ಟಣ್ಣ, ಗಳಗನಾಥ, ಕೇರೂರ ವಾಸುದೇವಾಚಾರ್ಯ. ಎಂ.ಎನ್. ಕಾಮತ್, ಮಾಸ್ತಿ, ಬಿ.ಎಂ.ಶ್ರೀ., ಬೇಂದ್ರೆ, ಶಂ.ಬಾ. ಜೋಶಿ ಮುಂತಾದ ಸಾಹಿತ್ಯ ಶಿರೋಮಣಿಗಳು ಇವರ ಸಮಕಾಲೀನರು. ಪಂಜೆಮಂಗೇಶರಾಯರಿಗಿಂತ ೯ ವರ್ಷಕ್ಕೆ ಕಿರಿಯರಾದಪೈಯವರು ಪಂಜೆಯವರ ಖಾಸಾ ಶಿಷ್ಯರು. ತಮಗಿಂತ ೧೩ ವರ್ಷಕ್ಕೆ ಹಿರಿಯರಾದ ಕವಿ ಮುದ್ದಣನೊಂದಿಗೆ ಪೈಯವರಿಗೆ ಪತ್ರವ್ಯವಹಾರವಿತ್ತು.

ಅತ್ಯಂತ ಎಳೆಯ ವಯಸ್ಸಿನಲ್ಲೇ ಸರಸ್ವತಿಯ ಅನುಗ್ರಹಕ್ಕೆ ಪಾತ್ರರಾದ ಗೋವಿಂದ ಪೈಯವರು ೧೦ ವರ್ಷದ ಬಾಲಕನಾಗಿದ್ದಾಗಲೇ ಯಕ್ಷಗಾನ ಪ್ರಸಂಗಗಳಿಂದಲೂ ಮಂಗಳೂರಿಗೆ ಬಂದು ಆಡುತ್ತಿದ್ದ ಮರಾಠಿ ನಾಟಕ ಮಂಡಳಿಯ ನಾಟಕಗಳಿಂದಲೂ ಪ್ರಚೋದಿತರಾಗಿ ಮನಸ್ಸಿನಲ್ಲೇ ಹಾಡು ಕಟ್ಟಿ ಗುಣುಗುತ್ತಿದ್ದರು. ದೈವಾನುಗ್ರಹವೋ ಎಂಬಂತೆ ತಮ್ಮ ೧೨ನೆಯ ವಯಸ್ಸಿನಲ್ಲಿ ಇದ್ದಕ್ಕಿದ್ದಂತೆ ಕನಸು ಸಾಕಾರಗೊಂಡು ಅವರು ಬರಹಗಾರರಾದರು. ಅದು ೧೮೯೫ ಫೆಬ್ರವರಿ ತಿಂಗಳ ಕೊನೆಯ ವಾರದ ಒಂದು ರಜಾದಿನ. ಮನೆಯಲ್ಲಿ ಎಲ್ಲರೂತಮ್ಮನ ಮುಂಜಿಯ ಸಂಭ್ರಮದಲ್ಲಿ ಮುಳುಗಿದ್ದಾಗ ಅಣ್ಣ ಗೋವಿಂದನಿಗೆ ಎಲ್ಲಿಂದಲೋ ಒಂದು ಹಾಡು ಕೇಳಿಸಿತು. 'ಅಡವಿಗೆ ಪೋಪರೆನೆ ಕಂದಯ್ಯಾ, ಅಡವಿಯೊಳಗೆ ಬಲು ಕಡುಖೂಳ ಮೃಗಗಳು ಬಿಡದೆ ಬಾಧಿಪವೋ ನನ್ನ. ಅಷ್ಟೇ, ಕಿವಿಗೆ ಬಿದ್ದ ಆ ಹಾಡಿನ ಭಾವ ಹೃದಯಕ್ಕೆ ತಟ್ಟಿತು. ಆ ಕ್ಷಣದಲ್ಲೇ ಏನನ್ನೋ ಬರೆಯಬೇಕೆಂಬ ಒತ್ತಡ ಹುಟ್ಟಿತು. ಮನೆಯ ಸದ್ದು ಸಡಗರಗಳೆಲ್ಲ ಮನಸ್ಸಿನಿಂದ ಮರೆಯಾಯ್ತು. ತಮ್ಮನಿಗೆ ಬ್ರಹ್ಮೋಪದೇಶ, ಅಣ್ಣನಿಗೆ ಅಜ್ಞಾತಶಕ್ತಿಯ ದಿವ್ಯೋಪದೇಶ. ಹೊತ್ತುಗೊತ್ತಿನ ಪರಿವೆಯಿಲ್ಲದೆ ಸಂಜೆಯವರೆಗೂ ಕುಳಿತು ಆ ಹಾಡಿನ ಭಾವಕ್ಕೆ ಸಂಬಂಧಿಸಿದ ಒಂದು ನಾಟಕವನ್ನು ಬರೆದು ಮುಗಿಸಿದರು. ಈ ವಿಶಿಷ್ಟ ಅವಿಸ್ಮರಣೀಯ ಅನುಭವವನ್ನು ಪೈಯವರು ತಮ್ಮ ಆತ್ಮಕಥನದಲ್ಲಿ ಬಿಚ್ಚಿಟ್ಟದ್ದು ಹೀಗೆ: 'ಸಾಹಿತ್ಯ ಮಂದಿರದ ಹೊಸ್ತಿಲಲ್ಲಿ ಅಕಾಂಡವಾಗಿ ಎಡವಿದೆ, ಮುಚ್ಚುಕದಕ್ಕೆ ಡಿಕ್ಕಿ ಹೊಡೆದೆ, ಅಗಳಿ ಇಲ್ಲದ ಬಾಗಿಲು ಹಾರಿತು, ಒಳಹೊಕ್ಕೆ. ನನ್ನ ಜೀವಮಾನದಲ್ಲಿ ಅದೊಂದು 'ಅಮಗ.' ನೆನಹಿನ ಪಚ್ಚೆ ಚುಚ್ಚಿದಂತಿರುವ ಆ ದಿನವನ್ನು ಎಂದಿಗೂ ಮರೆಯುವಂತಿಲ್ಲ.'[೫]

ಅವರ ಮನೆಯಲ್ಲಿ ಬರಹಕ್ಕೆ ವಿರೋಧವಿತ್ತು. ಮನೆಯವರ ಕಣ್ತಪ್ಪಿಸಿ ಕದ್ದು ಮುಚ್ಚಿ ಬರೆಯಬೇಕು. ಏನಾದರೂ ಮನಸ್ತಾಪವಾದರೆ ಅಮ್ಮನಿಗೆ ದೂರು ಹೋಗುತ್ತಿದ್ದುದು ಅಣ್ಣನ ಬರಹದ ವಿಚಾರ. ಅದಕ್ಕಾಗಿ ಏಟುತಿಂದ ಅನುಭವ ಕೂಡ ಪೈಯವರಿಗಿದೆ. ಬರೆಯುವುದರಿಂದ ಹುಚ್ಚು ಹಿಡಿಯುತ್ತದೆ ಎಂಬ ಸಂಶಯ ತಾಯಿಗಿದ್ದುದೇ ಅದಕ್ಕೆ ಕಾರಣ. ಏಟು ತಿಂದರೂ ಪೈಯವರ ಬರೆಯುವ ಕ್ರಿಯೆ ಮಾತ್ರ ನಿರಂತರವಾಗಿ ಮುಂದುವರಿಯಿತು. ಯಕ್ಷಗಾನ, ನಾಟಕಗಳನ್ನು ರಚಿಸುವುದು, ವೃತ್ತ, ಕಂದಗಳಿರುವ ಕವನಗಳನ್ನು ಬರೆಯುವುದು, ಬರೆದುದು ಸರಿಯಾಗಲಿಲ್ಲವೆಂದರೆ ಹರಿದು ಮತ್ತೆ ಬರೆಯುವುದು. ೧೮೯೯ರಲ್ಲಿ ವಿದ್ಯಾರ್ಥಿ ಗೆಳೆಯರೊಂದಿಗೆ ಎಂಬ ಕೈಬರಹದ ಇಂಗ್ಲಿಷ್ ಪತ್ರಿಕೆಯನ್ನು ಹೊರಡಿಸಿ ಅದರ ಮೂಲಕ ಲೇಖನಗಳನ್ನು ಪ್ರಕಟಿಸುತ್ತಿದ್ದುದು ಅವರ ಕ್ರಿಯಾಶೀಲತೆಗೆ ದ್ಯೋತಕ. ೧೯೦೦, ಜುಲಾಯಿಯಲ್ಲಿ ಮಂಗಳೂರಿನಿಂದ 'ಸುವಾಸಿನಿ' ಎಂಬ ಮಾಸಪತ್ರಿಕೆ ಪ್ರಾರಂಭವಾದಾಗ ಆ ಪತ್ರಿಕೆಯನ್ನು ಕುರಿತು ಬರೆದವರಿಗೆ ೫ ರೂಪಾಯಿ ಬಹುಮಾನವಿರುವ ಪ್ರಕಟಣೆಯನ್ನು ಓದಿ ಉತ್ಸಾಹಿತರಾಗಿ ಮೂರು ಕಂದಪದ್ಯಗಳನ್ನು ಬರೆದು ಬಹುಮಾನ ಪಡೆದುದು ಅವರ ಮೊತ್ತಮೊದಲ ಪ್ರಕಟಿತ ದಾಖಲೆ.

ಚಿಕ್ಕಂದಿನಿಂದಲೇ ಪೈಯವರು ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು. ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಮಂಗಳೂರಿನಲ್ಲಿ ಮುಗಿಸಿ ಉನ್ನತ ಶಿಕ್ಷಣಕ್ಕಾಗಿ ಮದರಾಸಿಗೆ ತೆರಳಿದ ಗೋವಿಂದ ಪೈಯವರು ತರಗತಿಯಲ್ಲೇ ಮೊತ್ತ ಮೊದಲಿಗರಾಗಿದ್ದರು. ಡಾ. ಸರ್ವಪಲ್ಲಿ ರಾಧಾಕೃಷ್ಣನ್ (೧೮೮೮–೧೯೭೫) ಅವರು ಪದವೀ ತರಗತಿಯಲ್ಲಿ ಗೋವಿಂದ ಪೈಯವರ ಸಹಪಾಠಿಯಾಗಿದ್ದರು. ದುರದೃಷ್ಟವಶಾತ್ ಪದವಿ ಮುಗಿಸುವ ಮುನ್ನವೇ ಪೈಯವರಿಗೆ ಪಿತೃವಿಯೋಗವಾಯ್ತು. ಮನೆಯ ಹಿರಿಯ ಪುತ್ರನಾಗಿ ಸಂಸಾರದ ಜವಾಬ್ದಾರಿಯನ್ನು ಹೆಗಲಿಗೇರಿಸುವ ಅನಿವಾರ್ಯತೆಯಿಂದ ಓದು ನಿಂತಿತು. ಮುಂದೆ ಕೃಷ್ಣಾಯಾನೆ ಲಕ್ಷ್ಮೀದೇವಿ ಎನ್ನುವ ಹುಡುಗಿಯೊಂದಿಗೆ ಅವರ ವಿವಾಹವೂ ಆಯ್ತು.

ಲಕ್ಷ್ಮೀಪುತ್ರರಾದ ಪೈಯವರಿಗೆ ಓದಿ ಉದ್ಯೋಗವನ್ನು ಅವಲಂಬಿಸುವ ಅಗತ್ಯವಿರಲಿಲ್ಲ. ವೃತ್ತಿಯನ್ನು ನೆಚ್ಚದುದರಿಂದ ಅವರಿಗೆ ಪ್ರವೃತ್ತಿಯಲ್ಲೇ ತಮ್ಮನ್ನು ಪೂರ್ಣಾಂಗವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಯ್ತು. ಮೊದ ಮೊದಲು ಪ್ರಾಸಬದ್ಧವಾಗಿ ನಾಟಕ, ಕವನಗಳನ್ನು ಬರೆದು ಸ್ವದೇಶಾಭಿಮಾನಿ, ಸುವಾಸಿನಿ ಮುಂತಾದ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದವರಿಗೆ ೧೯೦೦ರಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವ, ಪ್ರೇರಣೆಗಳಿಂದ ಕನ್ನಡದಲ್ಲೂ ಪ್ರಾಸೋಲ್ಲಂಘನ ಮಾಡಬೇಕೆಂಬ ಯೋಚನೆ ಬಂತು. ಪೈಯವರು ತಮ್ಮ ಇಂಗ್ಲಿಷ್ ವ್ಯಾಮೋಹಕ್ಕೆ ಕಾರಣವನ್ನು ತಿಳಿಸಿದ್ದು ಹೀಗೆ: 'ಕನ್ನಡಕ್ಕೆ ಈವಾಗ ಇರುವಷ್ಟು ಆದರಣೆ ಆವಾಗ ಇದ್ದಿಲ್ಲ. ಇಂಗ್ಲಿಷು ಭಾಷೆಯೇ ಭಾಷೆ. ಅದರಿಂದಲೇ ಜ್ಞಾನಸಿದ್ಧಿ. ಅದರಲ್ಲಿಯೇ ಸಾಹಿತ್ಯಾಭಿವೃದ್ಧಿ. ಅತೇವ ಇಂಗ್ಲಿಷಿನಲ್ಲಿಯೇ ನಿಕ್ಷೂಣವಾಗಿ ಬರೆಯಲೂ ಬೇಕು. ಮಾತನಾಡಲೂ ಬೇಕು. ಬಲ್ಲವರು ಇಂಗ್ಲಿಷಿನಲ್ಲಿ ಕವನಿಸಲೂ ಬೇಕು, ಎಂದೇ ಆಗಣ ವಿದ್ಯಾರ್ಥಿಗಳ ಆಕಾಂಕ್ಷೆ, ನಮ್ಮ ಲಾಲಸೆ.' ಇಂಗ್ಲಿಷ್ ಭಾಷೆಯಲ್ಲಿ ಅತ್ಯುತ್ತಮ

ಅಂಕಗಳನ್ನು ಗಳಿಸುತ್ತಿದ್ದ ಪ್ರತಿಭಾವಂತರಾದ ಪೈಯವರಿಗೆ ಇಂಗ್ಲಿಷ್ ಭಾಷಾ ಪ್ರಭುತ್ವ ತನ್ಮೂಲಕ ಅಲ್ಲಿನ ಕಾವ್ಯಪ್ರಕಾರಗಳು. ಅವುಗಳ ಛಂದೋವೈವಿಧ್ಯ ಸಹಜವಾಗಿಯೇ ಪ್ರಿಯವಾದುವು. ಆದರೆ ಬಲ್ಲವರು ಬೆನ್ನುತಟ್ಟಿ ಪ್ರೋತ್ಸಾಹಿಸದೆ ಪ್ರಾಸೋಲ್ಲಂಘನೆಯಂಥ ಸಾಹಸಕ್ಕೆ ಧೈರ್ಯವಾಗಿರಲಿಲ್ಲ. ಗುರುಗಳಾದ ಪಂಜೆಯವರ ಮುಂದೆ ಅರುಹಿದರೆ ಪ್ರಾಸಪ್ರಿಯರಾದ ಅವರಿಂದ ಸರಿಯಾದ ಉತ್ತೇಜನ ದೊರಕಲಿಲ್ಲ. ಗುರುಮುಖೇನ ಫಲಕಾರಿಯಾಗದೆ ಯೋಚನೆ ತಟಸ್ಥವಾಯ್ತು. ಮನಸ್ಸಿನ ಇಚ್ಛೆಯನ್ನು ಒತ್ತಟ್ಟಿಗೆ ಸರಿಸಿ ಪ್ರಾಸಬದ್ಧವಾಗಿಯೇ ಬರಹವನ್ನು ಮುಂದುವರಿಸಿದರು. ಆದರೆ ೧೯೧೧ರ ಏಪ್ರಿಲ್ ತಿಂಗಳಿನಲ್ಲಿ ಒಂದು ದಿನ ಬರೋಡಾದ ನವಸಾರಿಯಂಬಲ್ಲಿದ್ದಾಗ ಪ್ರಾಸೋಲ್ಲಂಘನೆಯ ಯೋಚನೆ ದೃಢವಾಯ್ತು. 'ಆಗೋದು ಹೋಗೋದು ದೈವೇಚ್ಛೆ, ಹೂಡೋದು ಬಿತ್ತೋದು ನನ್ನಿಚ್ಛೆ, ಪ್ರಾಸವನೀಗಲೆ ತೊರೆಯುವುದೆ ಲೇಸು'[೫] ಎಂದು ತೀರ್ಮಾನಿಸಿ ಆಗಲೇ ರವೀಂದ್ರನಾಥ ಟಾಗೂರರ ಎರಡು ಬಂಗಾಳಿ ಗೀತೆಗಳನ್ನೂ, ಶೇಖ್ ಮಹಮ್ಮದ್ ಇಕ್ಬಾಲ್‌ರ ಉರ್ದೂಗೀತೆಯನ್ನೂ ಅನುವಾದಿಸಿದರು. ಮೇ ತಿಂಗಳಲ್ಲಿ ಆ ಕವನಗಳು 'ಸ್ವದೇಶಾಭಿಮಾನ' ಪತ್ರಿಕೆಯಲ್ಲಿ ಪ್ರಕಟವೂ ಆದುವು. ಅದೇ ವರ್ಷದ ಸೆಪ್ಟೆಂಬರ್ ತಿಂಗಳಲ್ಲಿ ಮತ್ತೆ ಸ್ವದೇಶಾಭಿಮಾನ ಪತ್ರಿಕೆಯಲ್ಲಿ ಅವರ ಪ್ರಾಸರಹಿತ 'ಹೊಲೆಯನಾರು?' ಎಂಬ ಕವನ ಪ್ರಕಟವಾದ ಕೂಡಲೇ ಕನ್ನಡ ಕಾವ್ಯಮಾರ್ಗದಲ್ಲಿ ಹುಲಿ! ಹುಲಿ! ಎಂಬ ಹುಯಿಲೆದ್ದಿತು. ಪೈಯವರು ಕನ್ನಡ ತಾಯಿಗೆ ಮಾಡುವ ದ್ರೋಹವಿದೆಂಬ ರೀತಿಯಲ್ಲಿ ಅನೇಕ ಲೇಖನಗಳು ಪ್ರಕಟವಾದುವು. ಪ್ರಾಸಪ್ರಿಯರ ಪ್ರತಿರೋಧಗಳ ಮಧ್ಯೆಯೂ ಪೈಯವರು ಧೈರ್ಯಗೆಡದೆ ಕ್ರಾಂತಿಕವಿಯೆನಿಸಿದರು. 'ಕನ್ನಡಕ್ಕೆ ಪ್ರಾಸವೇನೂ ವೇದ ವಾಕ್ಯವೂ ಅಲ್ಲ ಶಾಸ್ತ್ರವೂ ಅಲ್ಲ. ಅದನ್ನು ಬೇಕಾದಂತೆ ಬೇಕಾದಾಗ ಬಿಟ್ಟುಬಿಡಬಹುದು. ಆತ ಏವಕಾಲಕ್ಕೆ ತಕ್ಕಂತೆ ರಚನೆಯನ್ನೇ ಅಲ್ಲ, ಛಂದಸ್ಸನ್ನೂ, ವ್ಯಾಕರಣವನ್ನೂ ತನಗೆ ಬೇಕಾದಂತೆ ಮಾರ್ಪಡಿಸಿಯೂ ನೇರ್ಪಡಿಸಿಯೂಕೊಳ್ಳಲಿಕ್ಕೆ ಕವಿಗೆ ಅಧಿಕಾರವಿದೆ. ಬೇಕಾದವರು ಈ ಹೊಸಹಾದಿಯನ್ನು ಹಿಡಿಯಲಿ. ಬೇಡದವರು ಹಳೆಯ ಹಾದಿಯಲ್ಲೇ ನಡೆಯಲಿ. ಇಂದು ಒಬ್ಬನೇ ನಡೆಯುವ ಮೇಕೆದಾರಿಯೇ ಮುಂದೆ ತೇರು ಎಳೆಯುವ ಹೆದ್ದಾರಿ'[೬] ಎಂದು ಹಟತೊಟ್ಟರಲ್ಲದೆ ಆಂಗ್ಲ ಸಾಹಿತ್ಯದಲ್ಲಿ ಅಂತ್ಯ ಪ್ರಾಸೋಲ್ಲಂಘನೆ ಮಾಡಿದ ಸರ್ರೆ ಮತ್ತು ವಾಯಟ್ ಕವಿಗಳ ಹಾಗೂ ಶೇಕ್ಸ್‌ಪಿಯರ್, ಮಿಲ್ಟನ್ ಮುಂತಾದ ನಾಟಕಕಾರರ ನಿದರ್ಶನಗಳನ್ನು ನೀಡಿ ತಮ್ಮನ್ನು ಸಮರ್ಥಿಸಿಕೊಂಡರು.

ಕನ್ನಡದ ಆದಿಪ್ರಾಸತ್ಯಾಗದ ಬಗ್ಗೆ ಅಷ್ಟೊಂದು ಉತ್ಸುಕರಾದ ಪೈಯವರು ಇಂಗ್ಲಿಷಿನ ಅಂತ್ಯಪ್ರಾಸದ ಬಗ್ಗೆ ಅಷ್ಟೇ ವ್ಯಾಮೋಹಿತರಾಗಿದ್ದರು. ಅವರ ಅನೇಕ ಕವನಗಳಲ್ಲಿ ಅಂತ್ಯಪ್ರಾಸ ಸರ್ವಸಾಮಾನ್ಯ. ೫೧೦ ಸಾಲುಗಳ ಅವರ 'ಸೈರಂಧ್ರಿ'ಯೆಂಬ ಅಪೂರ್ಣ ಕೃತಿ ಅಂತ್ಯ ಪ್ರಾಸದ ವೀರದ್ವಿಪದಿಯಲ್ಲಿವೆ. ಹಾಗೆಯೇ ಇಂಗ್ಲಿಷ್‌ನ ಅಷ್ಟಷಟ್ಪದಿಯು ಕೂಡ ಅವರ ಅಚ್ಚುಮೆಚ್ಚಿನ ಛಂದೋಬಂಧ. ಇಂಗ್ಲಿಷ್ ಸಾಹಿತ್ಯದ ಬ್ಲ್ಯಾಂಕ್‌ವರ್ಸ್‌ಗೆ ಮನಸೋತ ಪೈಯವರು ತಮ್ಮ ಮಹತ್ವವಾದ ಖಂಡಕಾವ್ಯಗಳನ್ನು ಸರಳರಗಳೆಯಲ್ಲಿ ರಚಿಸಿದುದೂ ಗಮನಾರ್ಹ.

ಮಕ್ಕಳ ಭಾಗ್ಯವಿಲ್ಲದ ಗೋವಿಂದ ಪೈಯವರಿಗೆ ೧೯೨೭ನೆಯ ಸೆಪ್ಟೆಂಬರ್‌ನಲ್ಲಿ ಪತ್ನೀ ವಿಯೋಗವೂ ಆಯ್ತು. ಬದುಕಿನಲ್ಲಿ ತೀವ್ರ ಹತಾಶ ಸ್ಥಿತಿಯನ್ನು ಅನುಭವಿಸಿದ ಗೋವಿಂದಪೈಯವರಿಗೆ ಮಡದಿಯ ಅಗಲಿಕೆಯಿಂದ 'ತಾನು ಒಡಲಿಲ್ಲದ ನರಳಾದೆ' ಎನ್ನುವ ಭಾವನೆ ಕಾಡತೊಡಗಿತು. ತಮ್ಮ ವಿರಹದ ನೋವನ್ನು ಬರಹದ ಕಾವಾಗಿ ಪರಿವರ್ತಿಸಿಕೊಂಡ ಅವರು ಮಡದಿಯ ೪೫ ವರ್ಷಗಳ ನೆನಪಿಗೆ ಮೊದಲು ರಚಿಸಿದ ಕೃತಿ ಪ್ರಾಸರಹಿತ ೩೫ ವೃತ್ತಗಳ ಗೊಮ್ಮಟ ಸ್ತುತಿ. ಅದು ೧೯೨೮ರ ಜನವರಿಯಲ್ಲಿ ಪ್ರಕಟವಾಯ್ತು. ಅನಂತರ ತಮ್ಮ ಕವನಸಂಕಲನ 'ನಂದಾದೀಪ'ದಲ್ಲಿ 'ನನ್ನ ಸಹಧರ್ಮಿಣಿಯ ನೆನಪಿಗೆ ಭಾಷ್ಪಾಂಜಲಿಯಾಗಿ ನಮ್ಮನ್ನು ಅಗಲಿಸಿದ ವಿಧಾತ್ರನಿಗೆ ಶ್ರದ್ಧಾಂಜಲಿಯಾಗಿ ಕೆಲವು ಕವಿತೆಗಳನ್ನು ರಚಿಸಬೇಕೆಂದು ಅದೇ ಮೇ ತಿಂಗಳಿನಿಂದ ಬರೆಯತೊಡಗಿದೆ. ಅಂದು ಅವಳ ಅಗಲಿಕೆಯಿಂದ ನನ್ನಲ್ಲಿ ಹೊತ್ತಿ ಮುಂದೆ ನಾನು ಇದ್ದಿರುವನಕಾ ನಂದದ ಶೋಕಾನಲವಾಗಿ ದೇವರ ಮುಂದೆ ಹಚ್ಚಿರಿಸಿದ ದೀಪ ಎಂಬರ್ಥದಲ್ಲಿ ಆ ಕವಿತೆಗಳನ್ನು 'ನಂದಾದೀಪ' ಎಂದೆ' ಎನ್ನುತ್ತಾರೆ. ಲೌಕಿಕ ವಿರಹವನ್ನು ಅಲೌಕಿಕ ಭಕ್ತಿಯಾಗಿ ಪರಿವರ್ತಿಸಿದ ಪೈಯವರು ಆ ಕವನಗಳನ್ನು 'ನನ್ನ ಕೃಷ್ಣೆಗೋ ಕೃಷ್ಣನಿಗೋ. ವ್ಯಕ್ತಿ ದ್ವಯಿಗಳ ದ್ವಯಿಕೋ ಕೃಷ್ಣಾರ್ಪಣ' ಮಾಡಿದ್ದಾರೆ. (ಅದು ಅವರ ಜೀವಿತಾವಧಿಯವರೆಗೂ ನಂದಾದೀಪವಾಗಿಯೇ ಉಳಿದು ಆಮೇಲೆ ಪ್ರಕಟವಾಯ್ತು) ವೈಯಕ್ತಿಕ ಬದುಕಿನಲ್ಲಿ ಏಕಾಂಗಿಯಾದ ಪೈಯವರು ಮರುಮದುವೆಯ ಯೋಜನೆಯನ್ನು ಮಾಡದೆ ಜೀವಮಾನ ಪರ್ಯಂತ ನಿರಂತರವಾದ ಸಾಹಿತ್ಯ ಸೇವೆಗೆ ತಮ್ಮನ್ನು ಸಮರ್ಪಿಸಿದರು.[೪]

೧೯೩೦ರ ವರೆಗೂ ಗೋವಿಂದ ಪೈಯವರು ತಮ್ಮ ಬರಹಗಳನ್ನು ಬಿಡಿಬಿಡಿಯಾಗಿ ಪ್ರಕಟಿಸುತ್ತಿದ್ದರಲ್ಲದೆ ಸಂಕಲನವಾಗಿ ತರುವ ಯೋಚನೆಯನ್ನು ಮಾಡಿರಲಿಲ್ಲ. ಸಂಶೋಧನೆಯ ಕಡೆಗೂ ಅಷ್ಟು ಗಂಭೀರವಾಗಿ ತಮ್ಮನ್ನು ತೊಡಗಿಸಿಕೊಳ್ಳಲಿಲ್ಲ. ೧೯೩೦ರಲ್ಲಿ ಪಂಜೆ ಮಂಗೇಶರಾಯರ ಒತ್ತಾಸೆಯ ಮೇರೆಗೆ ೨೦ ವರ್ಷಗಳಿಂದ ರಚಿಸುತ್ತ ಬಂದ ಪೈಯವರ ಸು. ೪೫ ಕವನಗಳು ಉಮರ್ ಖಯಾಮಿನ ೫೦ ಅನುವಾದ ಕವನಗಳೊಂದಿಗೆ 'ಗಿಳಿವಿಂಡು' ಎಂಬ ಹೆಸರಿನಲ್ಲಿ ೧೯೩೧ರಲ್ಲಿ ಮೊತ್ತ ಮೊದಲ ಕೃತಿಯಾಗಿ ಬಾಲಸಾಹಿತ್ಯ ಮಂಡಲದಿಂದ ಪ್ರಕಟಗೊಂಡಿತು. ರಾಜ್ಯದ ಪ್ರತಿಯೊಂದು ಪತ್ರಿಕೆಗಳಲ್ಲೂ ತಮ್ಮ ಲೇಖನಗಳನ್ನು ಬಿಡಿಬಿಡಿಯಾಗಿ ಪ್ರಕಟಿಸುತ್ತಿದ್ದ ಪೈಯವರು ಅವುಗಳನ್ನು ಇಡಿಯಾಗಿ ಪ್ರಕಟಿಸುವ ವಿಚಾರದಲ್ಲಿ ಎಂದೂ ಆಸಕ್ತರಾಗಿರಲಿಲ್ಲವೆಂಬುದಕ್ಕೆ ಅವರ ಬಹುತೇಕ ಕೃತಿಗಳು ಮರಣೋತ್ತರವಾಗಿ ಪ್ರಕಟಗೊಂಡುದೇ ಸಾಕ್ಷಿ.

ಗೌಡ ಸಾರಸ್ವತ ಕುಟುಂಬದಲ್ಲಿ ಜನಿಸಿದ ಪೈಯವರ ಮಾತೃಭಾಷೆ ಕೊಂಕಣಿ. ಸರಸ್ವತೀ ನದೀ ತೀರದ ನಿವಾಸಿಗಳೆನ್ನಲಾದ ಇವರ ಪೂರ್ವಿಕರು ಸಾವಿರಾರು ವರ್ಷಗಳಿಂದ ನೆಲಸಿದ್ದು ಗೋವೆಯಲ್ಲಿ. ಕ್ರಿ.ಶ. ೧೫೬೦ರ ಸುಮಾರಿನಲ್ಲಿ ಪೋರ್ಚುಗಿಸ ರಿಂದ ಮತಾಂತರದ ಪ್ರಕ್ರಿಯೆ ನಡೆದಾಗ ಗೋವೆಯಿಂದ ದೇಶಾಂತರಗೊಂಡು ದಕ್ಷಿಣ

ಕನ್ನಡ ಜಿಲ್ಲೆಗೆ ವಲಸೆ ಬಂದ ತಮ್ಮವರ ಮೂಲ ನೆಲೆಯನ್ನು ಅರಸುತ್ತ ಹೋದ ಗೋವಿಂದ ಪೈಯವರಿಗೆ ಪೂರ್ಣ ಸ್ವರೂಪದ ಸಂಶೋಧಕರಾಗಲು ಅದೇ ಮೂಲವಾಯ್ತು. ಆಗಲೇ ಅವರು ಪೋರ್ಚುಗೀಸ್ ಭಾಷೆಯನ್ನೂ ಕಲಿತರು. ಗೋವಿಂದ ಪೈಯವರ ಬಹುಭಾಷಾ ಪ್ರಾವೀಣ್ಯತೆ ಅಚ್ಚರಿ ಹುಟ್ಟಿಸುತ್ತದೆ. ಸುಮಾರು ೨೦ಕ್ಕಿಂತಲೂ ಅಧಿಕ ಭಾರತೀಯ ಹಾಗೂ ವಿದೇಶೀಯ ಭಾಷೆಗಳು ಇವರಿಗೆ ಕರತಲಾಮಲಕ ವಾಗಿದ್ದುವು. ಅವರ ಗ್ರಂಥ ಭಂಡಾರದಲ್ಲಿ ೩೬ ಭಾಷೆಗಳ ಸು. ೫೦೦೦ ಪುಸ್ತಕ ಗಳಿದ್ದುವೆಂದು ತಿಳಿದುಬರುತ್ತದೆ. ಅವರ ಮನೆಗೆ ಭೇಟಿಯಿತ್ತವರಿಗೆ ಅವರ ಮನೆಯ ಗೋಡೆಗಳು ಪುಸ್ತಕಗಳಿಂದಲೇ ನಿರ್ಮಾಣವಾಗಿವೆಯೇನೋ ಎನಿಸುವಷ್ಟು ಪುಸ್ತಕ ಪ್ರೇಮಿಗಳಾಗಿದ್ದರು ಅವರು.

ತಮ್ಮ ಜನಾಂಗವಾದ ಗೌಡ ಸಾರಸ್ವತ ಬ್ರಾಹ್ಮಣರ ಬೇರುಗಳನ್ನು ಅರಸುತ್ತ ಗೋವೆಗೆ ಬಂದವರು ಶಾಸನಗಳನ್ನು ಜಾಲಾಡಿಸಿ ಎಂಬ ಮೊತ್ತಮೊದಲ ಸಂಶೋಧನ ಲೇಖನವನ್ನು ಬರೆದು ಕೇರಳದ ಆಲಪ್ಪುಳೆಯಿಂದ ಹೊರಡುತ್ತಿದ್ದ 'ಸಾರಸ್ವತ ಬೋಧಿನಿ' ಎಂಬ ಇಂಗ್ಲಿಷ್ ಮಾಸಪತ್ರಿಕೆಯಲ್ಲಿ ಪ್ರಕಟಿಸಿದರು. ಆದರೆ ಮುಂದೆ ಶಾಸನಗಳಲ್ಲಿ ಸಾರಸ್ವತರು ಯಾರು ಇತರರು ಯಾರು ಎಂಬುದನ್ನು ಶೋಧಿಸಲಿಕ್ಕಾಗದೆ ಜನಾಂಗದ ಮೂಲವನ್ನು ಹುಡುಕುವ ಅವರ ಉತ್ಸಾಹವೂ ಇಂಗಿತು. ಆದರೆ ಆ ಕ್ಷಣ ಅವರಿಗೆ ಅದೇನನ್ನಿಸಿತೋ 'ವೃಥಾ ಬಾವಿಯಲ್ಲಿ ಗಾಳಹಾಕಿ ಲಾಭವೇನು? ಹಾಕಿದರೆ ಸಮುದ್ರಕ್ಕೆ ಹಾಕಬೇಕು ಬೀಸುಬಲೆ'ಯೆಂದು ತೀರ್ಮಾನಿಸಿ ಇಡೀ ಭಾರತೀಯ ಚರಿತ್ರೆಗೆ ಸಂಬಂಧಪಟ್ಟಂತೆ ಸಂಶೋಧನೆಯ ಸಾಗರಕ್ಕೆ ಧುಮುಕಿದರು. ಬದುಕಿನಲ್ಲಿ ಸಂಭವಿಸಿದ ಇಂಥ ಅನೇಕ ಆಕಸ್ಮಿಕಗಳ ಟಂಕಸಾಲೆಯಲ್ಲಿ ಗೋವಿಂದ ಪೈಯೆಂಬ ಚಿನ್ನದ ಅದುರು ಸುವರ್ಣದ ಪುತ್ಥಳಿಯಾಯ್ತು.

ಪಾಂಡಿತ್ಯ, ಪ್ರತಿಭೆಗಳೆರಡೂ ಹಾಸುಹೊಕ್ಕಾಗಿದ್ದ ಗೋವಿಂದ ಪೈಯವರು ಸಂಶೋಧನೆ ಮತ್ತು ಸೃಜನಶೀಲ ಸಾಹಿತ್ಯವೆರಡರಲ್ಲೂ ಅಸಾಧಾರಣವಾದ ಸಾಧನೆ ಯನ್ನು ಮಾಡಿದ್ದಾರೆ. ಅವರು ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರಗಳೆರಡರಲ್ಲೂ ಸವ್ಯಸಾಚಿಯಾದ ವಿಚಾರವನ್ನು ತುಂಬ ಸ್ವಾರಸ್ಯವಾಗಿ ತಮ್ಮ ಆತ್ಮಕಥನದಲ್ಲಿ ನಿರೂಪಿಸಿದ್ದಾರೆ. 'ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು. ವಿಶಿಷ್ಟವಾದ ದೈವಕೃಪೆಯುಳ್ಳವರು ಅವೆರಡನ್ನು ಕೈಕೊಂಡು ಹೊತ್ತನ್ನು ಹಿಡಿತದಿಂದ ಬಳಸಿದರೆ ಸವ್ಯಸಾಚಿಸಬಹುದಾದರೂ ನನ್ನ ಬಗೆಗಾದರೋ ಅವು ಮುಳುವಾಗಿವೆ. ಹಾಲು ಕಾಸಲಿಕ್ಕೂ ಹುರುಳಿ ಹುರಿಯಲಿಕ್ಕೂ ಸರಿಯಾಗದೆ ಅವನ್ನು ಸವಡಿಸಲಿಕ್ಕೆ ಯತ್ನಿಸುವಲ್ಲಿ ಒಂದು ಒರೆಯಲ್ಲಿ ಎರಡು ಕತ್ತಿಯನ್ನು ಸಿಕ್ಕಿಸಿಡಲಿಕ್ಕೆ ಪೇಚಾಡುತ್ತಿದ್ದೇನೆ...' ೧೯೦೦ರಿಂದ ಸೃಜನಶೀಲ ಸಾಹಿತ್ಯ ರಚನೆಯಲ್ಲಿ ತೊಡಗಿದ ಪೈಯವರು ೧೯೨೬ರಿಂದ ಸಂಶೋಧನೆಗೆ ಹೊರಳಿದ ಬಳಿಕ ಅವರ ಸೃಜನಶೀಲ ರಚನೆ ಕೊಂಚ ಬಳಸುದಾರಿಯಲ್ಲಿ ಸಾಗಿ ಸಂಶೋಧನೆಯೇ ಅವರ ಹೆದ್ದಾರಿಯಾದುದು ಸತ್ಯ. ಆದರೆ ಅವರು ಸಂಚಯನ ಮಾಡಿರುವ ಸಾಹಿತ್ಯ ರಾಶಿಯನ್ನು ಗಮನಿಸಿದರೆ ಅಂಥ ಸವ್ಯಸಾಚಿಗೆ ಎಂದಾದರೂ

ಯಾವ ಪೇಚಾಟಕ್ಕಾದರೂ ಆಸ್ಪದವಿತ್ತೆಂದು ಯಾರಿಗೂ ಅನಿಸದು. ೧೯೩೦ರ ಬಳಿಕ ಸಂಶೋಧನೆಯೇ ಅವರ ಉಸಿರಾಯ್ತು, ಪ್ರೀತಿಯ ಹವ್ಯಾಸವಾಯ್ತು. ಪೈಯೆಂದರೆ ಸಂಶೋಧನೆಯೇ ಸೈ ಎನ್ನುವಷ್ಟು ಅವರ ಸಂಶೋಧನೆಯ ಕ್ಷೇತ್ರ ಬೆಳೆಯಿತು.

ಸು. ೩೦೦ಕ್ಕಿಂತಲೂ ಅಧಿಕ ಬರಹಗಳ ಒಡೆಯರಾದ ಗೋವಿಂದಪೈಯವರು ತಮ್ಮನ್ನು ದೊಡ್ಡ ಮೈಗಳ್ಳನೆಂದು ಹೇಳಿಕೊಂಡಿರುವುದು ಅವರ ಸೌಜನ್ಯತೆಗೂ ಹಿರಿತನಕ್ಕೂ ಸಾಕ್ಷಿ. ೧೯೩೦ರಿಂದ ಪೈಯವರ ಸಾಹಿತ್ಯ ಕೃಷಿ ನಿರಂತರವಾಗಿ ಮುಂದುವರಿದರೂ ತಾವು ಬರೆಯಬೇಕಾದಷ್ಟು ಬರೆಯಲಿಲ್ಲವೆಂಬ ಕೊರಗು ಅವರಿಗಿತ್ತು. ಅದನ್ನು ನಿವಾರಿಸುವುದಕ್ಕಾಗಿ '...ನಾನು ಜನ್ಮಾಂತರದಲ್ಲಿ ತುಂಬ ನಂಬುಗೆಯುಳ್ಳವ. ಆ ನಂಬುಗೆ ದಿನ ಹೋದಂತೆ ಹೆಚ್ಚುತ್ತಲಿದೆ. ಹಿಂದಣ ಜನ್ಮಗಳಲ್ಲಿ ಹಾಡಿ ನಿಲ್ಲಿಸಿದ ಹಾಡು ಅಲ್ಲಿಂದ ಸಾಗಿ ಈ ಜನ್ಮದಲ್ಲಿ ಹಾಡಿಸುತ್ತದೆ. ಇಲ್ಲಿಂದ ಮುಂದುವರಿಸಿ ಮುಂದಣ ಜನ್ಮದಲ್ಲಿಯೂ ಹಾಡಿಸಬೇಕು; ಹೀಗೆಯೇ ಸಾಗುಸಾಗುತ್ತ ಮುಂದೆ ಯಾವುದೋ ಒಂದು ಜನ್ಮದಲ್ಲಿ ಅದು ಪೂರ್ಣತಾನವಾಗಬೇಕು. ಅದುವರೆಗೆ ಜಂಪು ಹತ್ತಿದವನು ಬಾಜಿಸುವ ವೀಣೆಯಂತೆ ಬಿಟ್ಟಾಡುತ್ತ ನನ್ನನ್ನು ನುಡಿಸುತ್ತಿರಬೇಕು ಎಂದೇ ನನ್ನ ನಂಬುಗೆ.'[೧೧] ಎನ್ನುತ್ತಾರೆ. ಪೈಯವರ ಸಾಹಿತ್ಯ ಸೇವೆಯನ್ನು ಪುರಸ್ಕರಿಸಿದ ಮದ್ರಾಸು ಸರಕಾರ ೧೯೪೯ರಲ್ಲಿ ರಾಷ್ಟ್ರಕವಿ ಬಿರುದನ್ನಿತ್ತು ಅವರನ್ನು ಸನ್ಮಾನಿಸಿತು. ಮುಂದೆ ೧೯೫೦ರಲ್ಲಿ ಮುಂಬೈಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿಯೂ ಅವರು ಆಯ್ಕೆಯಾದರು.

ಇಂಗ್ಲಿಷ್, ಕೊಂಕಣಿ ಭಾಷೆಗಳಲ್ಲಿ ಲೇಖನಗಳನ್ನು ಬರೆಯುತ್ತಿದ್ದರೂ ಪೈಯವರ ಪ್ರತಿಭೆ, ಪಾಂಡಿತ್ಯಗಳು ಪೂರ್ಣವಾಗಿ ಪ್ರವಹಿಸಿದುದು ಕನ್ನಡ ಭಾಷೆಯಲ್ಲಿ. ಇದರ ಹಿನ್ನೆಲೆಯನ್ನು ಅವರ ಮಾತುಗಳಲ್ಲೇ ಕೇಳೋಣ. 'ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತತಾಯಿ. ಕನ್ನಡ ಸಾಕುತಾಯಿ... ಫ್ರಾನ್ಸ್ ದೇಶದ ಪ್ರೊವಾನ್ಸ್‌ನ ಫ್ರೆಡರಿಕ್ ಮಿಸ್ತ್ರಾಲ್ ಎಂಬ ಕವಿ ಫ್ರೆಂಚ್ ಭಾಷೆಯಲ್ಲಿ ವಿಪುಲವೂ ಜಗದ್ವಿಖ್ಯಾತವೂ ಆದ ಸಾಹಿತ್ಯವಿದ್ದರೂ ತನ್ನ ತಾಯಿನುಡಿಯಾದ ಪ್ರೊವೆಂಸಾಲ್ ಭಾಷೆಯಲ್ಲಿ ತಾನೆ ಕೃತಿಗಳನ್ನು ರಚಿಸಿದಂತೆ ನಾನೂ ನನ್ನ ತಾಯಿನುಡಿಯಲ್ಲಿ ತಾನೆ ರಚಿಸುತಿದ್ದೆನೇನೋ ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ. ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗೆ ನನ್ನನ್ನು ಕನ್ನಡದ ಮೊರೆಯಲ್ಲಿ ಹಾಕಿದಳು. ಈ ದಾಯಿಯಾದರೆ ಪಯಸ್ವಿನ ಎಷ್ಟು ಕಾಲದಿಂದ ಎಷ್ಟೋ ಕವಿಗಳನ್ನು ಊಡಿಸಿಯೂ ಮತ್ತೂ ಬತ್ತದ. ದೇವರ ದಯೆಯಿಂದ ಸರ್ವದಾ ಬತ್ತಬಾರದ. ಸದಾಸ್ನುಹಿ. ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಕ್ಕರೆಯಿಂದ ನನಗೆ ಉಣಿಸಿದಳು. ಆಕೆಯ ಆ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೂ ತೆತ್ತು ತೀರಿಸಲಾರೆ.'[೧೨] ಕನ್ನಡದ ಬಗ್ಗೆ ಅಂಥ ಅಭಿಮಾನ, ಹೆಮ್ಮೆಗಳನ್ನುತಾಳಿರುವ ಪೈಯವರು ೧೯೫೬, ನವೆಂಬರ್ ೧ರಂದು ಭಾಷಾವಾರು ಪ್ರಾಂತ್ಯ ರಚನೆಯ ಸಮಯದಲ್ಲಿ ಕಾಸರಗೋಡು ಕೇರಳಕ್ಕೆ ಸೇರಿದಾಗ ಇನ್ನಿಲ್ಲದಷ್ಟು ದುಃಖಿತರಾದರು. ಕನ್ನಡಿಗರಿಗೆ ಮಾಡಿದ ಈ ವಂಚನೆಯಲ್ಲಿ ಸರ್ದಾರ್ ಫಣಿಕ್ಕರ್ ಶಾಮೀಲಾಗಿದ್ದರೆಂಬ ಕಾರಣಕ್ಕೆ ಅವರು ಕುಲಪತಿಗಳಾಗಿದ್ದ ಮೈಸೂರು ವಿ.ವಿ. ನೀಡಿದ ಗೌರವ ಡಾಕ್ಟರೇಟ್ ಪದವಿಯನ್ನು ಕೂಡ

ತಿರಸ್ಕರಿಸಿದರಂತೆ. ಕವಿ ಕಯ್ಯಾರ ಕಿಞ್ಞಣ್ಣ ರೈಯವರಿಗೆ ಬರೆದ ಪತ್ರವೊಂದರಲ್ಲಿ ಅವರು ತಮ್ಮ ಅಳಲನ್ನು ತೋಡಿಕೊಂಡುದು ಹೀಗೆ: '... ನನ್ನ ಕರುಳಿನ ಕೊರಗು ಎಂದರೆ ನಮ್ಮ ದ.ಕ. ಜಿಲ್ಲೆಯನ್ನು ಜೀವಂತ ಸಿಗಿದು ಅದರ ಪಂಚಪ್ರಾಣಗಳಲ್ಲಿ ಒಂದಂತಿರುವ ಕಾಸರಗೋಡು ತಾಲೂಕನ್ನು ಅದರಿಂದ ಸೆಳೆತೆಗೆದ ನೃಶಂಸತೆ. ಕಣ್ಣಿನಲ್ಲಿ ನೆತ್ತರು ತೋರದ ನೃಶಂಸತೆ!... ಒಬ್ಬನ ಕಣ್ಣನ್ನು ಬಲಾತ್ಕಾರದಿಂದ ಕಿತ್ತು ಮತ್ತೊಬ್ಬನಿಗೆ ತೊಡಿಸುವ ದುರುಳತನವಲ್ಲದೆ ಮತ್ತೇನಂತೆ? ಇದು ನೀತಿಯೇ? ಮಹಾತ್ಮಾಗಾಂಧಿಯವರು ಇದನ್ನು ಒಪ್ಪುತ್ತಿದ್ದರೇ?' ಪೈಯವರ ಈ ದುಃಖ ಇವತ್ತಿಗೂ ಕಾಸರಗೋಡಿನ ಪ್ರತಿಯೊಬ್ಬ ಕನ್ನಡಿಗನ ದುಃಖವಾಗಿದೆ ಎನ್ನುವುದನ್ನು ಮರೆಯುವಂತಿಲ್ಲ.

ಗೋವಿಂದ ಪೈಯವರದು ಮಗುವಿನಂಥ ಮುಗ್ಧತನ; ಮೋಸ, ವಂಚನೆಗಳಿಲ್ಲದ ಪ್ರಾಮಾಣಿಕ ನಿಷ್ಕಲ್ಮಷ ಮನಸು; ಯಾವ ಹಮ್ಮುಬಿಮ್ಮುಗಳಿಲ್ಲದ ವರ್ತನೆಯೆಂಬುದು ಬಲ್ಲವರ ಹೇಳಿಕೆ. ಅವರ ಬಳಿಗೆ ಬಂದವರು ಯಾರೇ ಆಗಿರಲಿ ಎಲ್ಲರನ್ನೂ ಏಕಭಾವದಿಂದ ಪ್ರೀತಿಸಿ ಗೌರವಿಸುವುದು ಅವರ ನೀತಿ. 'ಪೈಯವರೊಂದಿಗೆ ಸಂಭಾಷಿಸಲು ಮಹಾವಿದ್ವಾಂಸರೇ ಬೇಕಿಲ್ಲ. ಒಬ್ಬ ವಿದ್ಯಾರ್ಥಿ ಬಂದರೂ ಅವರ ಉತ್ಸಾಹ ತಗ್ಗುವುದಿಲ್ಲ. ಪಂಡಿತರೊಂದಿಗೆ ಮಾತನಾಡುವ ಉತ್ಸಾಹ ಭರದಿಂದಲೇ ಅವನಿಗೆ ತಿಳಿಯಹೇಳುತ್ತಾರೆ. ಅದೇ ಪ್ರೀತಿ, ಆದರವನ್ನು ತೋರಿಸುತ್ತಾರೆ. ತಾನೊಬ್ಬ ಹಿರಿಯ, ಬಲ್ಲಿದ ಎಂಬ ನಾಟಕವನ್ನು ಎಂದೂ ಆಡಿದವರಲ್ಲ.' ಡಾ. ಶಿವರಾಮ ಕಾರಂತರು ಪೈಯವರ ವಿಶಾಲ ಮನಸ್ಸಿನ ಅನಾವರಣವನ್ನು ಮಾಡಿದ್ದು ಹೀಗೆ.

ತಮ್ಮ ಬರಹದ ವಿಚಾರದಲ್ಲಿ ಪೈಯವರದು ಆರೆಕೊರೆಯಿಲ್ಲದ ನಿಲವು. 'ಪೈಗಳ ಲೇಖನ ಸ್ವಾಮ್ಯತೆಯ ಮುದ್ರೆ, ಅವರ ಪದ್ಯಗಳಿಗೆ ಅವರೇ ಶಬ್ದಾರ್ಥ ಬರೆಯುವ ಪದ್ಧತಿ, ಬಹಳಷ್ಟು ಲೇಖನಗಳಿಗೆ ಕೊಡುವ ಟೀಪು, ಟಿಪ್ಪಣಿ, ಇವು ನಮ್ಮ ಸಾಹಿತ್ಯಕ ಸರಸರದಲ್ಲಿ ಅವರನ್ನು 'ಟೀಪುಸುಲ್ತಾನ' ಪದವಿಗೇರಿಸಿದ್ದುವು' ಎಂದು ನೆನಪಿನ ಬುತ್ತಿ ಬಿಚ್ಚಿದ್ದಾರೆ ದ.ರಾ. ಬೇಂದ್ರೆಯವರು. ತಮ್ಮ ತೀರ್ಮಾನವನ್ನು ಯಾರಾದರೂ ಅಲ್ಲಗಳೆದರೆ ಅವರು ಎಂಥ ವಿದ್ವಾಂಸರೇ ಆಗಿರಲಿ ಒಪ್ಪಿಕೊಳ್ಳುವ ಜಾಯಮಾನ ಅವರದಲ್ಲ. ಅದನ್ನು ತಾವೇ ಸತ್ಯದ ನಿಕಷಕ್ಕೆ ಒಡ್ಡಿ ಪರಿಶೀಲಿಸಿ ಅನಂತರವಷ್ಟೇ ತಲೆಬಾಗುವ ಜಾಯಮಾನ. ತಪ್ಪು ನಡೆದಿದ್ದರೆ ಅದು ಯಾರೇ ಹೇಳಿರಲಿ ಅದನ್ನು ಒಪ್ಪಿಕೊಳ್ಳಬಲ್ಲ ಔದಾರ್ಯವೂ ಅವರಲ್ಲಿ ಧಾರಾಳವಾಗಿದ್ದಿತು.

ಪೈಯವರಿಗೆ ಅಸಾಮಾನ್ಯವಾದ ಸ್ಮರಣ ಶಕ್ತಿಯಿತ್ತೆಂಬುದನ್ನು ಅವರ ಆತ್ಮೀಯ ವಲಯದಲ್ಲಿ ಪ್ರತಿಯೊಬ್ಬರೂ ಅರಿತಿದ್ದರು. 'ಅತ್ಯದ್ಭುತವಾದ ಸ್ಮೃತಿಶಕ್ತಿ ಇದ್ದ ಅವರಿಗೆ ಸಂಗತಿಗಳು–ಪುಸ್ತಕಗಳು, ಪುಟಗಳು, ತಿಥಿ, ವಾರ, ನಕ್ಷತ್ರ, ಇಸವಿ, ತಿಂಗಳು ಹಗಲಿರುಳು ಗಂಟೆ ಕೂಡ ಅಚ್ಚಾಗಿ, ವಾಚೋವಿಧೇಯವಾಗಿದ್ದುವು.' ಎಂದಿದ್ದಾರೆ ವಿ. ಸೀತಾರಾಮಯ್ಯನವರು.

ಪೈಯವರು ಉದಾರಿಗಳೂ, ಕರುಣಾಳುವೂ, ದಾನಿಗಳೂ ಆಗಿದ್ದರು. ಅವರ ಮನೆ ಸಾಹಿತ್ಯಾಭಿಮಾನಿಗಳಿಗೆ ಒಂದು ಯಾತ್ರಾಸ್ಥಳವಾಗಿತ್ತೆಂದೂ ತಮ್ಮ ಮನೆಗೆ ಬರುವವರನ್ನು

ಪಂಢರಪುರದ ವಿಠೋಬನು ಭಕ್ತರ ನಿರೀಕ್ಷಣೆಯಿಂದ ಕಾದು ನಿಂತಿದ್ದಂತೆ ದಾರಿ ಕಾಯುತ್ತಿದ್ದರೆಂದೂ, ಎಲ್ಲರನ್ನೂ ಹಿರಿಯಣ್ಣನಂತೆ ಬಹುಪ್ರೀತಿ ವಿಶ್ವಾಸಗಳಿಂದ ನಡೆಸುತ್ತಿದ್ದರೆಂದೂ ಹಾಗೆಯೇ ಅವರ ಮಾತು ಹೊರಗೆ ಕಟುವಾಗಿ ಕಾಣಿಸಿದರೂ ಅಂತರಂಗದಲ್ಲಿ ಮಧುರವೂ, ಶುದ್ಧವೂ ಆಗಿತ್ತೆಂದೂ ಅವರನ್ನು ಬಲ್ಲವರೆಲ್ಲರ ಅನಿಸಿಕೆ.

**ಗೋವಿಂದ ಪೈಯವರ ಸಾಹಿತ್ಯ**

ಗೋವಿಂದ ಪೈಯವರ ಒಟ್ಟು ಸಾಹಿತ್ಯದಲ್ಲಿ ಸೃಜನಶೀಲವೆನಿಸಿದ ಕಾವ್ಯ, ನಾಟಕ, ಅನುವಾದ, ಪ್ರಬಂಧ, ವ್ಯಕ್ತಿಚಿತ್ರಣ, ಆತ್ಮಕಥನ, ಮುನ್ನುಡಿ, ಪತ್ರಗಳು ಒಂದು ಭಾಗವಾದರೆ ನಾಡು, ನುಡಿ, ಸಾಹಿತ್ಯ, ಇತಿಹಾಸ, ಧರ್ಮಗಳಿಗೆ ಸಂಬಂಧಿಸಿದ ಸಂಶೋಧನೆಗಳು ಇನ್ನೊಂದು ಭಾಗವಾಗಿದೆ.

## ಭಾಗ – ೧ : ಸೃಜನಶೀಲ ಸಾಹಿತ್ಯ

**ಕವನ ಸಂಕಲನಗಳು**

ಪೈಯವರ ಕವನಗಳು ಗಿಳಿವಿಂಡು (೧೯೩೧), ನಂದಾದೀಪ (೧೯೪೮), ಹೃದಯ ರಂಗ (೧೯೪೯) ಮತ್ತು ಇಂಗಡಲು – ಹೀಗೆ ನಾಲ್ಕು ಸಂಕಲನಗಳಲ್ಲಿ ಪ್ರಕಟವಾಗಿವೆ. ವಾಲ್ಮೀಕಿ ಮಹರ್ಷಿಗೆ ಶೋಕವೇ ಶ್ಲೋಕವಾಗಿ ರಾಮಾಯಣ ರಚನೆಗೆ ಪ್ರೇರಕವಾದಂತೆ ಪೈಯವರ ಸೃಜನಶೀಲ ಸಾಹಿತ್ಯಕ್ಕೆ ಪ್ರಚೋದಕ ಶಕ್ತಿ ನೋವು ಮತ್ತು ಸಾವು. ನೋವನ್ನು ಮರೆಸಲೋಸುಗವೇ ತಾನು ಬರೆಯುವುದಲ್ಲದೆ ಪರರನ್ನು ಮೆಚ್ಚಿಸಲಲ್ಲ. ತಾನು ವಿಧಾತನ ಕೈಯಲ್ಲಿಯ ಒಂದು ಲೆಕ್ಕಣಿಕೆಯೆಂಬುದನ್ನು ಪೈಯವರು ತಮ್ಮ ಆತ್ಮಕಥನದಲ್ಲಿ ನಿರೂಪಿಸಿದ್ದಾರೆ. ಅವರ ಮಾತಿನಲ್ಲೇ ಹೇಳುವುದಿದ್ದರೆ 'ಕವಿತೆ ಗಡ ಮರುಕಂ.' ಅಂತರಂಗದ ಕುದಿಯುವ ನೋವು ಕಾವಾಗಿ, ಕಾವು ಭಕ್ತಿಯಾಗಿ, ಭಕ್ತಿ ಶಕ್ತಿಯಾಗಿ ಅವರ ಕಾವ್ಯಕುಂಚವನ್ನು ಮುನ್ನಡೆಸಿದೆ. ಪೈಯವರ ಮಾನಸಿಕ ಪರಿವ್ರಾಜಕತ್ವ ಸರ್ವಶಕ್ತನೂ, ಸರ್ವವ್ಯಾಪ್ತನೂ, ಸರ್ವಾಂತರ್ಯಾಮಿಯೂ ಆದ ಭಗವಂತನಲ್ಲಿ ಸಂಪೂರ್ಣವಾಗಿ ಸಮರ್ಪಿತವಾಗಿರುವುದನ್ನು ಕವನ ಸಂಕಲನಗಳೂ ಸೇರಿದಂತೆ ಅವರ ಸೃಜನಶೀಲ ಸಾಹಿತ್ಯ ಸ್ಪಷ್ಟಪಡಿಸಿದೆ.

ದೇಶಭಕ್ತಿ, ದೈವಭಕ್ತಿ, ಮಾನವೀಯತೆ, ವಿಭೂತಿಸ್ತುತಿ, ಪ್ರಕೃತಿಪ್ರೇಮ, ಬಡತನ, ಅಸ್ಪೃಶ್ಯತೆಯೇ ಮೊದಲಾದ ಸಂಕೀರ್ಣ ವಿಚಾರಗಳಿಗೆ ಸಂಬಂಧಿಸಿರುವ ಅವರ ಕಾವ್ಯ ಗಂಗೆ ತುಳುನಾಡಿನಿಂದ ಹೊರಟು ಕನ್ನಡ ನಾಡಿನ ಮೂಲಕ ಪ್ರವಹಿಸಿ ಭಾರತದಾದ್ಯಂತ ವ್ಯಾಪಿಸಿದೆ. ತುಳುನಾಡಿನ ಬಗ್ಗೆ ಅಪಾರವಾದ ಗೌರವ, ಅಭಿಮಾನಗಳುಳ್ಳ ಕವಿ 'ತೌಳವ ಮಾತೆ' ಎಂಬ ಕವನದಲ್ಲಿ ತಮ್ಮ ತಾಯ್ನಾಡಿನ ಕುರಿತಾದ ಐತಿಹ್ಯಗಳನ್ನೂ, ಐತಿಹಾಸಿಕ ಮತ್ತು ಸಾಂಸ್ಕೃತಿಕ ವಿಚಾರಗಳನ್ನೂ ಮನಮುಂಜಿ ವರ್ಣಿಸುತ್ತಾರೆ. 'ಬೇಡುವೆನವ್ವಾ – ಬೀಳ್ಕೊಡುವಂದೆನ್ನನೆತ್ತಿದಂಕದಿ ನನ್ನ, ಮರಳಿಬಾರ ಕಂದಾ ನನ್ನುದರದಿ, ಎಂದು ತಬ್ಬಿ ಹರಸೆನ್ನ' ಎಂದು ಪ್ರಾರ್ಥಿಸುವಮನಸ್ಸು 'ತನ್ನ ತಾಯ್ನುಡಿಯಿಂದ ದುಡಿದ ಬಿಜ್ಜೆಯೇ

ಜಿಜ್ಞೆ। ಹೆರರ ನಾಲಗೆಯೆಂಜಲೆನ್ನಗಂ ಸವಿಯೇ?' ಎಂದು ಪ್ರಶ್ನಿಸುತ್ತದೆ. ಪೈಯವರ ಸುಪ್ರಸಿದ್ಧ ಕವನ 'ಕನ್ನಡಿಗರ ತಾಯಿ' ಆಬಾಲವೃದ್ಧರಾಗಿ ಪ್ರತಿಯೊಬ್ಬ ಕನ್ನಡಿಗರೂ ಹೆಮ್ಮೆ ಪಡುವಂತಿದೆ. ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವ ಅನೇಕ ಆಯಾಮಗಳಲ್ಲಿ ಅರ್ಥವಿಸ ಬಹುದಾದ ಈ ಕವನದ ವಸ್ತು, ಭಾವ, ಲಯ, ಗತಿ ಪ್ರತಿಯೊಂದೂ ಓದುಗರನ್ನು ನವಿರೇಳಿಸುತ್ತದೆ. ಕನ್ನಡನಾಡಿನ ಸಂಸ್ಕೃತಿ, ಸಂಪತ್ತು, ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆ, ಸಾಹಿತ್ಯ ಸಾಧನೆ, ಧಾರ್ಮಿಕ ಸಮನ್ವಯತೆ, ವಾಸ್ತುಶಿಲ್ಪ, ಭಾಷಾಭಿಮಾನ, ದೇಶಪ್ರೇಮ, ವಿವೇಕ, ವಿಚಾರ ಎಲ್ಲ ಗತವೈಭವಗಳನ್ನೂ ಕವಿ ಇದರಲ್ಲಿ ಎರಕ ಹೊಯ್ದಿದ್ದಾರೆ. 'ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೇ?' ಎಂದು ಅಚ್ಚರಿ, ಅಭಿಮಾನಗಳಿಂದ ಉದ್ಗರಿಸಿ ಪುಲಕಗೊಳ್ಳುವ ಕವಿಗೆ 'ತನು ಕನ್ನಡ, ಮನ ಕನ್ನಡ, ಧನ ಕನ್ನಡ ವೆಮ್ಮದು...' ಎಂದು ಸರ್ವಸ್ವವೂ ಕನ್ನಡಮಯವಾಗುತ್ತದೆ. ಕನ್ನಡ ಭಾಷೆ ನಮ್ಮ ಭಾಷೆ. ಅದು ಸರ್ವರೀತಿಯಲ್ಲೂ ವಿಕಾಸಗೊಳ್ಳಬೇಕೆಂದರೆ ಅದಕ್ಕೆ ಪ್ರಾಚೀನ ಪರಂಪರೆ ಮಾತ್ರ ಇದ್ದರೆ ಸಾಲದು, ವರ್ತಮಾನ, ಭವಿಷ್ಯಗಳೂ ಸಮೃದ್ಧವಾಗಿರ ಬೇಕೆಂಬುದು ಕವಿಯ ಮನದಾಳದ ಹಂಬಲ. 'ತನ್ನ ಮರೆಯ ಕಂಪನರಿಯದವನೆ ಹೊರಗೆ ಹುಡುಕುವ ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ. ಕನ್ನಡ ಕಸ್ತೂರಿಯನ್ನ ಹೊಸತು ಸುರಿಂತೀಡವನ್ನ ಸುರಭಿ ಎಲ್ಲಿ? ನೀನದನ್ನ ನವಶಕ್ತಿಯಿನ್ನೆಬ್ಬಿಸು– ಹೊಸ ಸುಗಂಧಮೊಸಗೆಯಿಂದ ಜಗದಿ ಹೆಸರ ಹಬ್ಬಿಸು.' ಎಂಬ ಸಾಲುಗಳು ಕವಿಯ ಈ ಆಶಯವನ್ನು ಅದ್ಭುತವಾಗಿ ಕಂಡರಿಸಿವೆ.

ಗೋವಿಂದ ಪೈಯವರ 'ಹೃದಯರಂಗ' ಸಂಕಲನದಲ್ಲಿ ಸಮ್ಮಿಶ್ರ ಕವನಗಳಿವೆ. ದೇಶ, ಧರ್ಮ, ಮನುಕುಲದ ಬಗೆಗಿನ ತಮ್ಮ ಅಪಾರವಾದ ಪ್ರೀತಿ, ಕಾಳಜಿಗಳನ್ನು ಎರಕ ಹೊಯ್ದು ಪೈಯವರು ಈ ಕೃತಿಯನ್ನು ನಿರ್ಮಿಸಿದ್ದಾರೆ. 'ಭಾರತಾಂಬೆಯ ಮಹಿಮೆ,' 'ಭಾರತ ಸ್ವಾತಂತ್ರ್ಯದ ಗಾಯತ್ರಿ,' 'ರಾಹುವನು ತೊಲಗಿಸಿದೆಯೊ ಕೇತುವನು ತಂದೆ' 'ಶ್ರೀ ಮಾತೃಭೂಮೀಶ್ವರಾಷ್ಟಕ' ಮುಂತಾದ ಕವನಗಳು ಅವರ ಉತ್ಕಟವಾದ ದೇಶಾಭಿಮಾನವನ್ನು ಹೃದಯಂಗಮವಾಗಿ ನಿರೂಪಿಸಿವೆ: 'ಬೇಡೆಂ ಕೀರ್ತಿಯ, ಬೇಡೆ ನಾ ಪ್ರಭುತೆಯನ್ ಐಶ್ವರ್ಯಮಾಯುಷ್ಯಮಂ, ನಾನಾ ಕೌತುಕವ ಬೇಡೆ, ಮೋಕ್ಷವನೆ ... ಜನ್ಮ ಜನ್ಮಂಗಳೊಳ್ ಹಿಂದೂ ಧರ್ಮದೊಳೆನ್ನ ಭಾರತದೊಳೆನ್ನಂ ಪುಟ್ಟಿಸೈ, ಬೇಡುವೆಂ ಕಾಯೆಮ್ಮೊಳ್ ಜನನೀ ಸ್ತನಂಧಯತೆಯಂ! ಶ್ರೀ ಮಾತೃಭೂಮೀಶ್ವರಾ.' (ಶ್ರೀ ಮಾತೃ ಭೂಮೀಶ್ವರಾಷ್ಟಕ') ಎಂದು ಮೊರೆಯಿಡುವ ಕವಿಗೆ ಭಾರತಾಂಬೆಯನ್ನು ಎಷ್ಟು ವರ್ಣಿಸಿದರೂ ಸಾಕೆನಿಸುವುದಿಲ್ಲ. ಭಾರತಾಂಬೆಯ ಚೆಲುವು, ನಲವು, ಹಿರಿಮೆ, ಗರಿಮೆಗಳನ್ನು ಬಣ್ಣಿಸುವಾಗ ಆಕೆ ಬ್ರಿಟಿಷರ ದಾಸ್ಯಶೃಂಖಲೆಯಲ್ಲಿ ತೊಳಲುವುದು ನೆನಪಾಗಿ ದುಃಖ ಉಕ್ಕಿ ಹರಿಯುತ್ತದೆ. 'ಮೂಡುವನೆಂದೀ ಭಾರತ ಭಾಗ್ಯ ಭಾಸ್ಕರಂ? ಮರಳುವುದೆಂದೆಮಗಗಲಿದ ಸ್ವತಂತ್ರಮತಿ ಯಶಸ್ಕರಂ?' ಎಂದು ಉದ್ವೇಗದ ನಿಟ್ಟುಸಿರಿಡುತ್ತಾರೆ. 'ವರುಷ ಹಲ ನೂರಾಯ್ತು, ನಮಗಿಲ್ಲ ನೋಡ ಸ್ವಾತಂತ್ರ್ಯ! ನಮ್ಮ ದುರ್ದೆಶೆಯನೆಂದರಿವೆ? ಮನುಜರಲ್ಲವೇ? ನಮಗೆ ಮನುಜತನ ಬೇಡಾ? ಅಕಟ

ಹಿಂದುಗಳ ಭಾಗ್ಯವನೆಂದು ತೆರೆವೆ?' (ಹಿಂದುಗಳ ಭಾಗ್ಯವಿನ್ನೆಂದು ನೀ ತೆರೆವೆ?) ಎಂದು ಪ್ರಾರ್ಥಿಸುತ್ತಾರೆ. ಭಾರತಕ್ಕೆ ಸ್ವಾತಂತ್ರ್ಯವನ್ನು ದೊರಕಿಸುವ ಸಲುವಾಗಿ ಗಾಂಧೀಜಿ ಮಾಡಿದ ಸತ್ಯಾಗ್ರಹ, ಅವರ ಸ್ವರಾಜ್ಯದ ಕಲ್ಪನೆ, ದೇಶಪ್ರೇಮ ಆ ಮಹಾತ್ಮನ ಬಗ್ಗೆ ಅಭಿಮಾನ, ಗೌರವಗಳನ್ನು ಉಕ್ಕಿಸುತ್ತದೆ. 'ಕ್ವಿಟ್ ಇಂಡಿಯಾ! ಎಂದು ಗಾಂಧಿ ನೀ ಬರೆದ ಭಾರತದ ಹೃದಯದಲಿ ಮಿಂಚಿನಕ್ಷರದೆ' ಎಂದು ಹೆಮ್ಮೆಯಿಂದ ಜೀಗುತ್ತಾರೆ. 'ಭಾರತ ವನಳಿಯುತ್ತ ನನಗೆ ಜೀವನವೆತ್ತ? ಭಾರತವೆ ನನ್ನುಸಿರು, ನನ್ನೊಗೆದ ಬಸಿರು, ಭಾರತವೆ ಧನಧಾನ್ಯ, ಭಾರತವೆ ಮನೆಮಾನ್ಯ, ಭಾರತವೆ ದೇವಾರವೆನ್ನ ಸಂಸಾರ, ಭಾರತ ಯಶೋಗಾನವೆನ್ನೆದೆಯ ತಾನ, ಭಾರತಾಂಬೆಯ ಭಕ್ತಿ ನನಗಾತ್ಮ ಶಕ್ತಿ.' (ಭಾರತಾಂಬೆಯ ಮಹಿಮೆ) ಎಂಬುದು ಅವರ ಅಚಲವಾದ ನಂಬಿಕೆ. ಸರ್ವಧರ್ಮ ಸಮನ್ವಯ ವಾದಿಗಳಾದ ಪೈಯವರು 'ಭಾರತದಲಿ ಸರ್ವಧರ್ಮವೊಂದಲಿ ಸದನಂ ಮಾಣಿಸಲೀಕೆಯ ಸ್ವಸ್ತಿ ಧ್ವಜಧರ್ಮದೊಳಕದನಂ' ಎಂದು ಹಾರೈಸುತ್ತಾರೆ. 'ಎರಡು ವರ' ಕವನದಲ್ಲಿ ಕೈಕೇಯಿಗೆ ಮಾತ್ರ ದಶರಥ ಎರಡು ವರವಿತ್ತುದಲ್ಲ ಹುಟ್ಟಿದ ಪ್ರತಿಯೊಬ್ಬರಿಗೂ ದೇಶವನ್ನು ಮತ್ತು ಧರ್ಮವನ್ನು ಕಾಯುವ ಎರಡು ವರಗಳನ್ನು ಪರಮಾತ್ಮ ಇತ್ತಿದ್ದಾನೆ. ಆತ್ಮಶಕ್ತಿಯಿಂದ ಅವನ್ನು ಗಳಿಸಿಕೊಳ್ಳಬೇಕು – ಎನ್ನುವ ಮಾತುಗಳು ದೇಶ ಮತ್ತು ಧರ್ಮದ ಬಗೆಗಿನ ಅವರ ಅಗಾಧವಾದ ಒಲವಿಗೆ ಸಾಕ್ಷಿ.

'ಹಳ್ಳಿಯ ಹುಡುಗಿ' ಕವನ ಪೈಯವರ ದೇಶಾಭಿಮಾನಕ್ಕೆ ಇನ್ನೊಂದು ಜ್ವಲಂತ ನಿದರ್ಶನ. ೧೫೬೫ನೆಯ ಇಸವಿಯಲ್ಲಿ ನಡೆದ ತಾಳಿಕೋಟೆ ಕದನದ ಸನ್ನಿವೇಶವನ್ನು ಕುರಿತಾದ ಈ ಕವನದಲ್ಲಿ ಓರ್ವ ಹಳ್ಳಿಯ ಹೆಣ್ಣುಮಗಳ ವಿರೋಚಿತ ಧೈರ್ಯ, ಅಸೀಮ ದೇಶಪ್ರೇಮವನ್ನು ಪೈಯವರು ಅತ್ಯಂತ ಉದಾತ್ತವಾಗಿ ಚಿತ್ರಿಸಿದ್ದಾರೆ. ಯುದ್ಧದಲ್ಲಿ ಹೇಡಿಯಾಗಿ ಹಿಮ್ಮೆಟ್ಟಿದ ಗಂಡನ ವರ್ತನೆಗೆ ಹೇಸಿದ ಆ ಹೆಣ್ಣುಮಗಳು ಸೆರಗಿನಲ್ಲಿ ಕತ್ತಿಯನ್ನು ಬಚ್ಚಿಟ್ಟುಕೊಂಡು ಅವನನ್ನು ಹುಡುಕಿ ಕೈಯಾರೆ ಸಾಯಿಸಿ 'ಹೇಡಿಯ ಹೆಂಡತಿ ಎನಿಸುವ ಬಾಳ್ವೆಯೆ? ನೋಡೆನು ನಾಳೆಯ ನೇಸರನು' ಎಂದು ಪ್ರತಿಜ್ಞೆ ಮಾಡಿ ತಾನೂ ಪ್ರಾಣಾರ್ಪಣೆ ಮಾಡುತ್ತಾಳೆ. ೧೦೮ ಸಾಲುಗಳಿರುವ ಈ ಕಥನ ಕವನ ಬಹುಕಾಲ ಮನಸ್ಸಿನಲ್ಲಿ ನೆಲೆನಿಲ್ಲುವಂಥ ಸತ್ವ, ಶಕ್ತಿಗಳಿಂದ ಕೂಡಿದೆ.

ಸ್ವತಂತ್ರ ಭಾರತದ ಕುರಿತಾದ ಆಸೆ, ಹಂಬಲ, ಉತ್ಕಟ ದೇಶಾಭಿಮಾನಗಳನ್ನು ವ್ಯಕ್ತಪಡಿಸುವ ಕವನಗಳಂತೆಯೇ ಸ್ವಾತಂತ್ರ್ಯೋತ್ತರದಲ್ಲಿ ಪಟ್ಟಭದ್ರಹಿತಾಸಕ್ತಿಗಳ ಸ್ವಾರ್ಥ, ಜಗಳ, ಅಧಿಕಾರ ದಾಹಗಳಿಂದ ಭ್ರಮನಿರಸನಗೊಂಡ ಸಂಕಟ, ನೋವುಗಳೂ ಅವರ ಅನೇಕ ಕವನಗಳ ಸಾಲಾಗಿ ಹರಿಯುತ್ತವೆ. 'ಏನು ತೋರಿಸಿದೆಮಗೆ? ಮೇಣೇನನಿತ್ತೆ; ಕಳಕೊಂಡ ಬಿಡುಗಡೆಯುಮಗಿತ್ತೆ, ತಂದೆ! ಆದರೀಗಣ ಕತೆಯ ಬಲ್ಲೆಯಾ ಮತ್ತೆ? ರಾಹುವನು ತೊಲಗಿಸಿದೆ ಕೇತುವನು ತಂದೆ!' ಎಂದು ದುಃಖಿಸುವ ಮನಸ್ಸು ತ್ಯಾಗ, ಬಲಿದಾನ, ನಿಸ್ವಾರ್ಥತೆಗಳ ಸಾಕಾರಸ್ವರೂಪಿಯಾದ ಗಾಂಧೀಜಿಯನ್ನು ಸ್ಮರಿಸುತ್ತದೆ. 'ಇನ್ನಿನಿಸು ನೀ ಮಹಾತ್ಮಾ ಬದುಕಬೇಕಿತ್ತು' ಎಂದು ಹಂಬಲಿಸುತ್ತದೆ. ಸ್ವಾತಂತ್ರ್ಯ ಲಭಿಸಿ ಹನ್ನೊಂದು ವರ್ಷಗಳಾದರೂ ಭಾರತದ ಹೀನಾಯಸ್ಥಿತಿ ಅಂತರಂಗವನ್ನು ಕಲಕುತ್ತದೆ.

'ಭವನಗಳೊ. ಸೌಧಗಳೊ. ನಮ್ಮ ಬಡತನದೆಚ್ಚರಿಲ್ಲದೆ ಹಣವ ದೂಳಿಸುವ ಲೆಕ್ಕವೊಳವೋ? ಒಳಕೊರತೆ. ಹೊರಸಾಲವಾಡಂಬರದ ವೆಚ್ಚವಿನ್ನು ತೆರಿಗೆಗಳೊ! ಶೇಷನಿಗೆ ತಳಮಳವೊ? ಇದನ್ನೆಲ್ಲ ತಿದ್ದಿ ಭಾರತದ ಕಾಯೊಡೆಯಾ, ಕಾಯು ಭಾರತಕೆ ನೀನಿತ್ತ ಬಿಡುಗಡೆಯಾ!' ಎಂದು ಭಗವಂತನೆಡೆಗೆ ಆರ್ತವಾಗಿ ಮೊರೆಯಿಡುತ್ತದೆ.

ಪೈಯವರ ದೇಶಪ್ರೇಮ, ಮಾನವಪ್ರೇಮ ಭಾರತಕ್ಕೆ ಮಾತ್ರ ಸೀಮಿತವಲ್ಲ. ಟರ್ಕಿಯನ್ನು ಇಟಲಿ ಆಕ್ರಮಿಸಿದಾಗಲೂ ಅಮೆರಿಕಾ ಜಪಾನಿನ ಮೇಲೆ ಅಣ್ವಸ್ತ್ರ ಪ್ರಯೋಗಿಸಿದಾಗಲೂ ಅವರ ಸಹಾನುಭೂತಿ ಉಕ್ಕಿ ಹರಿಯುತ್ತದೆ. ಅವರ 'ತುತೂರಿ' (ಅನುವಾದ), 'ಈ ಮಹಾಯುದ್ಧದ ನಿಜವೀರರು' 'ಹಿರೋಶಿಮಾ' ಮತ್ತು 'ಯುದ್ಧ ನಿಂತಿತೆ?' ಮುಂತಾದುವುಗಳು ಯುದ್ಧದ ಅನರ್ಥ ಮತ್ತು ನಿಷ್ಫಲತೆಯನ್ನು ಸಾರುವ ಕವನಗಳು. 'ಈ ಯುದ್ಧ ಸರ್ವಥಾಂತಿಮ ಯುದ್ಧವಲ್ಲ, ಹೊಸತೆನಿತೊ ಯುದ್ಧಗಳ ತಾಯಿ, ಮುತ್ತಾಯಿ,' 'ಕಾಯುತಿದೆ ಕಾಲ ಕರ್ಮಕ್ಕೆ ತಕ್ಕ ಫಲನೀಡೆ–ತಮ್ಮಾಯುಧದಿ ತಾವೆ ಮಡಿದಪರು ನೋಡೆ' (ಯುದ್ಧ ನಿಂತಿತೇ), ಜಗದಗಲ ಧಗದಗಿಸುವೀ ಸಮರದಲ್ಲಿ, ಲಕ್ಷಶಃ ಸಾಯೆ, ಲಕ್ಷಾಂತರಂ ಸೀಯೆ, ಹಸಿವೆ ಬೇನೆಯನಿನ್ನೆನಿತೋ ಲಕ್ಷ ಬೀಯೆ, ನಿಜವೀರರಾರಂತೆ ಈ ಅಮರರಲ್ಲಿ?' (ಈ ಮಹಾಯುದ್ಧದ ನಿಜವೀರರು), ಗಂಟೆ ಬಾರಿಸಿ ಮುಗಿಯೆ ಸುಳಿವ ದನಿಯಂತೆ. ಕೆಲಕೆಲವೆ ನರಳನಿತೆ ಕಾಣಿಪುವೋ ಇಂತೆ?' (ಹಿರೋಶಿಮಾ) ಇತ್ಯಾದಿ ಸಾಲುಗಳು ಮಾರ್ಮಿಕವಾಗಿವೆ.

ಪ್ರಕೃತಿ ವರ್ಣನೆಯಲ್ಲೂ ಪೈಯವರ ಲೇಖನಿ ಕೃತಕೃತ್ಯವಾಗಿದೆ. ಕೃಷ್ಣನ ಕೊನೆಯ ದಿನಗಳನ್ನು ತಿಳಿಸುವ 'ಪ್ರಭಾಸ'ದ 'ಉರುಳುರುಳು ಹೊರಳು, ಹೊರಳಾಡು ನೀಲಾಂಬೋಧಿ! ಗುಡುಗಂತೆ ಗುಡುಗಾಡು, ಸಿಡಿಲಂತೆ ಸಿಡಿದಾಡು ಜಗವನದ್ದಿಸಲೆದ್ದು ಬಾರ, ಅದ್ದದೆ ಜಾರ' ಎಂದು ಪ್ರಾರಂಭವಾಗುವ ಕಡಲಿನ ವರ್ಣನೆಯಾಗಲೀ, 'ಕರಗುವ ಹಗಲಿನ ಮಿರುಗುವ ಮುಗಿಲಿನ ಬೆರಕೆಯ ಬಣ್ಣದ ಬೆಂಕೆಯಲಿ, ಸಿಡಿತಹ ಮಿಣ್ಣನೆ ಕಿಡಿಯನೆ ನುಣ್ಣನೆ ಲಹರಿಪೆ ವಿಹರಿಪೆ ರೆಂಕೆಯಲಿ' ಎಂಬ 'ಮಿಂಚುಳ್ಳಿ' ಕವನದ ಮಿಂಚುಳ್ಳಿಯ ಕುಣಿತ, ವಿಲಾಸಗಳಾಗಲೀ ಅತ್ಯಂತ ಕಾವ್ಯಮಯವಾಗಿವೆ; ಅಪ್ಯಾಯಮಾನವಾಗಿವೆ. ಪೈಯವರ ಕಾವ್ಯದ ಮಹತಿಯನ್ನು ಕುರಿತು ವಿ.ಎಂ. ಇನಾಂದಾರ್ ರವರು 'ಅವರ ಕಾವ್ಯಚೇತನವನ್ನು ನಿಲ್ಲಿಸಿ ನಡೆಸುವ ಕಲ್ಪನಾವಿಲಾಸ ಸತ್ವಯುತವಾದದ್ದು, ನಡುಗಣ್ಣ ನೋಟದಿಂದ ಬದುಕನ್ನು ನೋಡುವವನ, ಅನುಭವಿಸುವವನ ಧೀರತೆಯುಳ್ಳದ್ದು. ತಲಸ್ಪರ್ಶಿಯಾದ ವಿದ್ವತ್ತಿನಿಂದಾಗಿ ಈಡು, ಆಳ, ವಿಸ್ತಾರಗಳನ್ನು ಪಡೆದು ಹಿರಿಯ ಸಾಹಿತ್ಯ ವ್ಯಾಸಂಗದಿಂದ ಶ್ರೀಮಂತವಾದದ್ದು. ಸಂವೇದನಾಶೀಲವಾದ ಮನಸ್ಸಿನಿಂದ ಮೊನೆಗೊಂಡದ್ದು'[೯] ಎನ್ನುತ್ತಾರೆ.

ತಾವು ಯಾವುದೇ ಪಂಥ, ಪಂಗಡಗಳನ್ನು ಪುರಸ್ಕರಿಸುವರಲ್ಲ ಎಂಬ ಧೋರಣೆಯ ಪೈಯವರಿಗೆ ಸಾಂಪ್ರದಾಯಿಕವಾದ ಶ್ರದ್ಧೆ, ನಂಬಿಕೆಗಳೊಂದಿಗೆ ವೈಜ್ಞಾನಿಕವಾದ ಪ್ರಜ್ಞೆ, ಮನಸ್ಸುಗಳೂ ಇವೆ. ಹಾಗಾಗಿ ಅವರಿಗೆ ಕೃಷ್ಣನಾಗಲೀ, ಬುದ್ಧನಾಗಲೀ, ಯೇಸುವಾಗಲೀ ಎಲ್ಲ ಒಂದೇ. ಅವರ ಸರ್ವಧರ್ಮ ಸಮನ್ವಯ ಸಿದ್ಧಾಂತಕ್ಕೆ 'ಯೇಸುಕ್ರಿಸ್ತ' ಕವನ ಜ್ವಲಂತ

ನಿದರ್ಶನ. ಕೃಷ್ಣ, ಯೇಸುಗಳ ಜನನ, ಜೀವನ, ಮರಣಗಳಲ್ಲಿ ಪೈಯವರು ಅತ್ಯಂತ ನಿಕಟವಾದ ಸಾಮ್ಯವನ್ನು ದರ್ಶಿಸುತ್ತಾರೆ. ಕೃಷ್ಣ ಸೆರೆಮನೆಯಲ್ಲಿ ಹುಟ್ಟಿದರೆ ಯೇಸು ಕೊಟ್ಟಿಗೆಯಲ್ಲಿ. ಕೃಷ್ಣ ದನಗಾಹಿಯಾದರೆ ಯೇಸು ಬಡಗಿಯಾಗುತ್ತಾನೆ. ಕೃಷ್ಣ ರಾಧೆಯನ್ನು ಮೋಹಿಸಿದರೆ ಯೇಸು ಮರಿಯಾಳಲ್ಲಿ ಆಕರ್ಷಿತನಾಗುತ್ತಾನೆ. ಕೃಷ್ಣ ಕೌರವನಿಂದ ಬಂಧಿತನಾದರೆ ಯೇಸುವಿಗೆ ಅವರ ಕಡೆಯವರೇ ಮುಳ್ಳಿನ ಕಿರೀಟವನ್ನು ತೊಡಿಸುತ್ತಾರೆ. 'ಯದುನಾಥನೇ ಯೂಧನಾಥನೆ'ಂಬುದು ಕವಿಯ ದೃಢ ನಿಲುವು. ಕಾಲ, ದೇಶ ಬೇರೆಯಾದರೂ ಇಬ್ಬರೂ ಒಂದೇ ಶಕ್ತಿಯ ಎರಡು ಅವತಾರಗಳು. 'ದಿನವೆರಡರ ಭಾಸ್ಕರನೆರಡಹನೆ?' ಎಂದು ಪ್ರಶ್ನೆ ಅವರ ವ್ಯಕ್ತಿತ್ವದ ಉನ್ನತಿಕೆಗೆ ಸಾಕ್ಷಿ. ಇಂಥ ದೈವೀ ಭಾವವೇ ಎಲ್ಲರಲ್ಲೂ ನೆಲೆಗೊಳ್ಳಲೆಂದು ಉನ್ನತ ಗೋಮಟೇಶ್ವರನನ್ನು ಪ್ರಾರ್ಥಿಸುವ 'ಶ್ರೀ ಗೊಮ್ಮಟ ಜಿನಸ್ತುತಿ' ಕವನವೂ ಅತ್ಯಂತ ಚೇತೋಹಾರಿಯಾಗಿದೆ. 'ಕಾಯ್ವೈ ಭೇದಮ ನೊಲ್ಲದೆಲ್ಲರಲ್ಲಿ ಸತ್ಯೌದಾರ್ಯಮಂ ವೀರ್ಯಮಂ । ಕಾಯ್ವೈ ಗಂಡಸರಲ್ಲಿ ಮಾತೃ । ಭೂಮಿಯಾ ಸಂಪ್ರೀತಿಯಂ ನೀತಿಯಂ । ಕಾಯ್ವೈ ಹೆಂಗಸರಲ್ಲನನ್ಯ ಪರ ಪಾತಿವ್ರತ್ಯಮಂ ಸತ್ಯಮಂ । ಕಾಯ್ವೈ ಮಕ್ಕಳೊಳಾತ್ಮ ದೀಧಿತಿಯ ನೀ ಶ್ರೀ ಗೋಮಟೇಶ್ವರಾ' । ಇತ್ಯಾದಿ ಸಾಲುಗಳು ಹೃದಯಸ್ಪರ್ಶಿಯಾಗಿವೆ.

ಪೈಯವರ ಪಾರಮಾರ್ಥಿಕ ಪ್ರಜ್ಞೆ ಅಸಾಧಾರಣವಾದುದು. ಆಧ್ಯಾತ್ಮಿಕವಾಗಿ ಬಹು ಎತ್ತರಕ್ಕೇರಿರುವ ಪೈಯವರ ಉದಾರ ಚರಿತೆ, ವಿಶಾಲವಾದ ದೃಷ್ಟಿ, ಆಳವಾದ ಚಿಂತನೆ, ಅವರ ಚೈತನ್ಯವನ್ನು ದೇವಾರಾಧನೆಯಿಂದ ವಿಶ್ವಾರಾಧನೆಯ ಮಟ್ಟಕ್ಕೆ ಕೊಂಡೊಯ್ಯುತ್ತವೆ. ಅವರು ಉನ್ನತಮಟ್ಟದ ವೇದಾಂತಿಯಾಗಿದ್ದರು. ಅವರ 'ವಿಶ್ವಾಂಜಲಿ' ಕವನ ಇದಕ್ಕೆ ನಿದರ್ಶನ. ನೀಲಿಯ ಆಕಾಶ, ಸೂರ್ಯಕಿರಣ, ನಕ್ಷತ್ರ ಖಚಿತವಾದ ನಭ, ಬೀಸುವ ಗಾಳಿ, ಸರ್ವರನ್ನೂ ಸಹನೆಯಿಂದ ರಕ್ಷಿಸುವ ಭೂಮಿ, ಕೈಗನ್ನಡಿಯಂತಿರುವ ಕಡಲು, ದೇವರ ಯಶಸ್ತಂಭಗಳಂತೆ ನಿಂತಿರುವ ಬೆಟ್ಟಗುಡ್ಡಗಳ ಸಾಲು, ಹರಿದು ಬರುವ ನೀರಿನ ಘೋಷ– ಎಲ್ಲವೂ ಪರಮಾತ್ಮ ದರ್ಶನಕ್ಕೆ ಪ್ರಮಾಣವೆನ್ನುತ್ತ ತಾವು ಆ ದಿವ್ಯದೇವನ ಹಸುಗೂಸು ಎಂದು ಭಾವಿಸುತ್ತಾರೆ ಪೈಯವರು. 'ತಡೆಯರಿಯದೆ ಹರಿಯುವ ಗಗನತಲಂ, ನನ್ನೊಡೆತನದ ಪತಾಕೆಯೊಲು ವಲಂ ನೆಳಲಿಸಿ ಹೊದಿಪುದು ವಸುಮತಿಯಗಲಂ ನನ್ನ ಪ್ರಭಾವವನೆಂ'ದು ಭಗವಂತನ ಮಹಿಮೆ, ಕರುಣೆಗಳನ್ನು ಕೊಂಡಾಡುತ್ತಾರೆ. 'ಮಗು ತೊದಲುಲಿವೊಲು ತಾಯನು ಕರೆಯೆ ಉಲಿವೆನು, ಮಗುಳ್ದುಲಿವೆನು ಶ್ರೀ ಹರಿಯೆ ನಿನ್ನ ನಾಮವನು' ಎನ್ನುವ ದೈನ್ಯತೆ ಅವರದು. ಇದರಿಂದ ಬರುವ ಶಾಂತಿ, ಸಮಾಧಾನ, ತುಷ್ಟಿ, ಪುಷ್ಟಿಗಳು ಅನುಪಮ. ಈ ದೈವೀಭಕ್ತಿಯಿಂದಲೇ ಪತ್ನಿಯ ವಿಯೋಗವೂ ಅವರಿಗೆ ಸಹ್ಯ ವಾಗಿದೆ. 'ಸುಗ್ಗಿ ಮುಗಿದೆ ಮಳೆಯಲ್ಲವೆ? ತನು ಮುಗಿದಡೆ ಕೆಳೆಯಿಲ್ಲವೆ? ಕೆಳೆಗೇನಳಿವೆ?' ಎಂದು ಆತ್ಮಶಾಂತಿಯನ್ನು ಅನುಭವಿಸುತ್ತಾರೆ.

ಅಗಲಿದ ಪತ್ನಿಯ ನೆನಪಿಗೆ ಹಚ್ಚಿಟ್ಟ 'ನಂದಾದೀಪ' ಕನ್ನಡ ಕಾವ್ಯಲೋಕಕ್ಕೆ ಪೈಯವರ ಅಮೂಲ್ಯ ಕೊಡುಗೆ. ಇಲ್ಲಿನ ಕವನಗಳ ಮೇಲೆ ರವೀಂದ್ರನಾಥ ಟಾಗೂರರ ಗೀತಾಂಜಲಿಯ ದಟ್ಟವಾದ ಪ್ರಭಾವವಿರುವುದರಿಂದ 'ಅವುಗಳಲ್ಲಿ ಬಹುಪಾಲು ರಚನೆಗಳು

ಸ್ವಯಂ ಪ್ರಭೆಯಿಲ್ಲದೆ ಚರ್ವಿತಚರ್ವಣದ ಅನಿಸಿಕೆಯನ್ನುಂಟು ಮಾಡುತ್ತವೆ[೧೨] ಎಂಬ ಅಭಿಪ್ರಾಯವಿದ್ದರೂ ಅನೇಕ ಕವಿತೆಗಳು ಕವಿಯ ವಿರಹೋದ್ವೇಗ ಹಾಗೂ ಅಚಲವಾದ ದೈವಭಕ್ತಿ, ಶ್ರದ್ಧೆಗಳು ಅವಿಚ್ಛಿನ್ನವಾದ ಏಕಸೂತ್ರತೆಯಿಂದ 'ಅನುಭಾವ ಗೀತೆಗಳಂತೆ' ಮನಸೂರೆಗೊಳ್ಳುತ್ತವೆ. 'ಸಂದುವಾ ದಿನ, ನನ್ನ ಕತ್ತಲೆಯ ಸೆರೆ ಎಲ್ಲಿ? ನಿನ್ನ ಮಿರುಮೋರೆ ಎಲ್ಲಿ? ನನ್ನಕ್ಕರೆಯ ಕೆರೆಯ ಹೆರೆಯ ಲಕ್ಷ್ಮಿಯನಿಲ್ಲಿ ನಂದೆವೊಯಿದೆ ಎಲ್ಲಿ? ಇನ್ನಾದರೆದೆಗೆ ಬಾ! ಪ್ರತಿಪದಿಸು ನನ್ನ ಹೃದಯದರ್ಶನಮನಂದು ದರ್ಶನದಿ ನಿನ್ನ! ಎಂಬ ಸಾಲುಗಳನ್ನು ಗಮನಿಸಬಹುದು. (ನೀನನ್ನೆವರಮೆನ್ನ ಬಾಗಿಲಿಗೆ ಬಂದಿಲ್ಲ – ಕವನ) ಮನಸ್ಸಿನಲ್ಲಿ ಹೆಪ್ಪುಗಟ್ಟಿದ ಶೂನ್ಯತೆಯನ್ನು ಕವಿ ವ್ಯಕ್ತಪಡಿಸಿದ ರೀತಿ ಹೀಗಿದೆ: 'ಎಲ್ಲಿಂದ ಕಾಲ ಗ್ರೀಷ್ಮಮಿದೆನ್ನ ಮನದಿ? – ಉಸಿರಿಲ್ಲ, ಹಸುರಿಲ್ಲ ನೆರಳ ಮರೆಯಿಲ್ಲ ತೊಳಲಿಲ್ಲ ಮೊಳಗಿಲ್ಲ, ಮುಗಿಲ ಗೆರೆಯಿಲ್ಲ ಕಂಬನಯಣಂ ಬಸಿಯದಲ್ಲ ಲೋಚನದಿ!', 'ಅಳಲ ಕಣಜವಿನ್ನು ಸಾಗೆ, ಹಗಲುದ್ದಕೆ ಮರುಗೆ ಗೂಗೆ, ಚೀರ್ವುದು ಹಲ್ಲಿ,' 'ಯುಗಾದಿಯ ನೆನಪು' ಎಂಬ ಕವನದಲ್ಲಿ ಅವರು ಅಗಲಿದ ಪತ್ನಿಯನ್ನು ಸ್ಮರಿಸುವ ದೃಶ್ಯ ಅತ್ಯಂತ ಮನೋವೇಧಕ ವಾಗಿದೆ. 'ಆ ಯುಗಾದಿಯಲಿ ನೀನೆನ್ನ ಕಣ್ತಣಿಮೆ – ಈ ಯುಗಾದಿಯಲಿ ನೀನೆಲ್ಲಿ? ನಾನೆಲ್ಲಿ? ನನ್ನೆದೆಯಮಾಸೆ ನನ್ನಶ್ರುತರ್ಪಣಮೆ – ಹಬ್ಬಮಿನ್ನೆನಗೆ ನಿನ್ನೊಡಗೂಡುವಲ್ಲಿ! ಕೊನೆಯ ತವರ್ಮನೆಗಕಟ! ನೀ ತೆರಳುವಂದು ತಿಂಗಳಾವರ ಮುನ್ನಮುಟ್ಟ ಮಡಿಸೀರೆ ಕಡೆಗಾಯ್ತೆ? ಇನ್ನುಡೆಯನಂತೀವೆನೆಂದು ನೆನವನೂಲಂ ಮೀಸಲಿಡುವೆನದೊ ನೀರೆ!'

ಅನೇಕ ಕವನಗಳು ಜನ ಸಾಮಾನ್ಯರ ಬಗೆಗೆ ಸ್ಪಂದಿಸುವ ಪೈಯವರ ಅಂತಃಕರಣ, ಅನುಕಂಪ, ಸಹಾನುಭೂತಿಗಳನ್ನು ದರ್ಶಿಸುತ್ತವೆ. ಏಕಕಾಲದಲ್ಲಿ ಇದ್ದ ಮೂರೂ ಮಕ್ಕಳನ್ನೂ ಕಳೆದುಕೊಂಡ ಹತಭಾಗಿನಿ ವಿಧವೆಯೊಬ್ಬಳ ನೋವಿಗೆ ಕವಿಯ ಮನಸ್ಸು ಎಷ್ಟು ಆರ್ದ್ರವಾಗಿ ಸ್ಪಂದಿಸಿದೆ ಎನ್ನುವುದಕ್ಕೆ 'ಅಂದಿನಿಂದಾಕೆ ನಕ್ಕಿಲ್ಲ, ಅತ್ತಿಲ್ಲ' ಎಂಬ ಕವನ ಉತ್ತಮ ನಿದರ್ಶನ. 'ಭಿಕ್ಷುವೂ ಪಕ್ಷಿಯೂ' ಕವನದಲ್ಲಿ ಮೂಡಿರುವ ಪಶ್ಚಾತ್ತಾಪ, ಸಹನೆ, ಹೃದಯಪರಿವರ್ತನೆ, 'ವಾಸವದತ್ತೆ'ಯಲ್ಲಿ ಮಿಡಿಯುವ ಮಾನವೀಯ ಕಾಳಜಿ, ಅನುತಾಪ, ಉದಾರದೃಷ್ಟಿ ಮನನೀಯವಾಗಿವೆ. 'ಹುಲ್ಲುಕಟಿಗ' ಕವನದಲ್ಲಿ ಸಾಮಾನ್ಯ ಸೇವಕನಾದ ಅನ್ನಭರನನ್ನು ಬುದ್ಧನ ಅನುಗ್ರಹಕ್ಕೆ ಪಾತ್ರನಾಗಿಸುವುದರ ಮೂಲಕ ಪ್ರತಿಯೊಂದು ಜೀವರಾಶಿಯನ್ನು ಪ್ರೀತಿಸುವ ಹೃದಯವೈಶಾಲ್ಯ ಮಾತ್ರವಲ್ಲ ಅನ್ನಭರನ ಪಾತ್ರಚಿತ್ರಣದ ಮೂಲಕ ಅತಿಸಾಮಾನ್ಯ ವ್ಯಕ್ತಿಯಲ್ಲೂ ಇರುವ ಅತಿ ಉನ್ನತ ವ್ಯಕ್ತಿತ್ವವನ್ನು ಅನಾವರಣ ಮಾಡಿದ ರೀತಿ ವಿಶಿಷ್ಟವಾಗಿದೆ. ಬುದ್ಧನಿಗೆ ಅನ್ನನೀಡಿ ಸಂಪಾದಿಸಿದ ಪುಣ್ಯದಲ್ಲಿ ತನಗೆ ಪಾಲುನೀಡಿದ ಸೇವಕ ಅನ್ನಭರನನ್ನು ಬಿಗಿದಪ್ಪಿ 'ಸಲಿಸಲೆಂತೀ ಸಾಲ? ನನಗಿತ್ತೆ ಬಿಡುಗಡೆಯ ಹೊನ್ನಿತ್ತೆನಣ್ಣ, ನನ್ನಯ ಸರಿಕನಾಗ' ಎನ್ನುವ ಯಜಮಾನ ಸುಮನನ ಸುಮನಸ್ಸಾಗಲೀ 'ಮಣ್ಣೊಳಿಹ ಹುಳಕೊಡೆಯ ಬೆಣ್ಣೆಯೋಗರದೊಲವೆ? ಎನ್ನ ಗುಡಿಲೆನ್ನ ಕುಡುಗೋಲೆನಗೆ ಸಾಕು' ಎಂಬ ಅನ್ನಭರನ ವಿನಯವಾಗಲೀ ಸೂಕ್ತಿಯೋಪಾದಿಯಲ್ಲಿ ಚಿರಕಾಲ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ.

'ಶೂದ್ರರ್ಷಿ ಕವಷ,' 'ಮಾತಂಗಿ,' 'ಹೊಲೆಯನಾರು' ಕವನಗಳು ಸಾಮಾಜಿಕ ಅಸ್ಪೃಶ್ಯತೆಯನ್ನು ವಿರೋಧಿಸುವ ಕವಿಯ ಜಾತ್ಯತೀತ ಮನೋಭಾವವನ್ನು ಅತ್ಯಂತ ಹೃದಯಸ್ಪರ್ಶಿಯಾಗಿ ಚಿತ್ರಿಸಿವೆ. ಕವಷನೆಂಬ ಋತ್ವಿಜನನ್ನು ವೇದರ್ಷಿಗಳೆಲ್ಲರೂ ಶೂದ್ರನೆಂದು ಅವಗಣಿಸಿ ತಮ್ಮ ಜತೆ ಯಜ್ಞಕಾರ್ಯ ಮಾಡದಂತೆ ನಿಷೇಧಿಸಿ ಹೊರಗಟ್ಟಿದಾಗ ದಾಹಸಂತಪ್ತನಾದ ಆತ ತನ್ನ ವಿದ್ವತ್ತಿನಿಂದಾಗಿ 'ಅಪೋ ನಪ್ತ್ರೀಯ' ಎಂಬ ಸೂಕ್ತವನ್ನು ರಚಿಸಿದಾಗ ಸರಸ್ವತೀ ನದಿಯೇ ಅವನ ಬಳಿಗೆ ಬಂದು ದಾಹನಿವಾರಣೆ ಮಾಡಿದ ವಾರ್ತೆಯಿಂದ ಚಕಿತರಾದ ಋಷಿಮುನಿಗಳು 'ಯೋಗ್ಯತೆ ಹುಟ್ಟಿನಿಂದಲ್ಲ, ಗುಣದಿಂದ' ಎಂಬ ಸತ್ಯವನ್ನು ಅರಿತು ಆತನನ್ನು ತಮ್ಮೊಂದಿಗೆ ಸೇರಿಸಿಕೊಂಡ ಘಟನೆಯೇ 'ಶೂದ್ರರ್ಷಿ ಕವಷ' ಕವನದ ಸಾರಾಂಶ. ಹಾಗೆಯೇ 'ಬಣ್ಣ ಬಣ್ಣದ ದನಕೆ ಸೊರವೊಂದೆ ಸೊರೆಯೊಂದೆ; ಬಣ್ಣ ಬೇರೆಂದವನು ವಿಂಗಡಿಸೆ ಸಲ್ಲ.' (ಮಾತಂಗಿ), 'ಹೊಲೆಯನಾರೂರ ಹೊರಗಿರುವವನೆಗೆಳೆಯ? ಜಾತಿಯಿಂದಲ್ಲ ಗುಣದಿಂದಹನು ಹೊಲೆಯ' (ಹೊಲೆಯನಾರು) ಎಂಬ ಸಾಲುಗಳೂ ಪರಿಭಾವನಾಯೋಗ್ಯ.

ಸ್ವತಂತ್ರ ಕವನಗಳ ಜತೆಜತೆಗೇ ಅನುವಾದ ಕವನಗಳನ್ನೂ ಬರೆಯುತ್ತಿದ್ದ ಪೈಯವರು ತಮ್ಮ ಕಾವ್ಯ ಭಂಡಾರವನ್ನು ಉರ್ದು, ಪರ್ಶಿಯನ್, ಇಂಗ್ಲಿಷ್ ಮುಂತಾದ ಅನ್ಯಭಾಷೆಯ ಅನುವಾದ ಕವನಗಳಿಂದ ಶ್ರೀಮಂತಗೊಳಿಸಿದ್ದಾರೆ. ಅವರ ಇಂಗ್ಲಿಷ್ ಅನುವಾದ ಎಷ್ಟು ಉತ್ಕೃಷ್ಟವಾಗಿವೆ ಎನ್ನುವುದಕ್ಕೆ ಶೆಲ್ಲಿಯ 'To a Skylark' ಎಂಬ ಕವನದ ಅನುವಾದದ ಬಗ್ಗೆ ಡಾ. ಪ್ರಭುಶಂಕರ ಅವರ ಪ್ರಶಂಸಾಮಾತುಗಳನ್ನು ಗಮನಿಸಬಹುದು. 'ಇದು ಭಾವಗೀತಾ ಸಾಹಿತ್ಯದಲ್ಲಿ ಅತ್ಯುನ್ನತ ಶ್ರೇಣಿಯ ಕವನವೆಂದು ಹೆಸರಿಸಬಹುದಾದ ಕೃತಿ. ನಾದ, ಮಾಧುರ್ಯ, ಭಾವನೆಯ ಉಜ್ವಲತೆ – ಇವು ಶೆಲ್ಲಿಯ ಕವನಗಳ ಪ್ರಧಾನವಾದ ಗುಣ. ಮೂಲದ ಲಕ್ಷಣಗಳನ್ನು ಅಲ್ಲಿನ ಸತ್ವದ ಕೋಮಲತೆಯನ್ನು ಮತ್ತೊಂದು ಭಾಷೆಯಲ್ಲಿ ತರುವುದು ತುಂಬ ಕಷ್ಟ. ಇಂಥ ಒಂದು ಕಷ್ಟತರವಾದ ಅನುವಾದದಲ್ಲಿ ಗೋವಿಂದ ಪೈಗಳು ಆಶ್ಚರ್ಯಕರವಾದ ಸಫಲತೆಯನ್ನು ಗಳಿಸಿದ್ದಾರೆ. ಇದೇ ಕವನದ ಅನುವಾದದಲ್ಲಿ ಬಿ.ಎಂ.ಶ್ರೀಯವರ ಕೈಗೆಟುಕಲಾರದೆ ನುಣುಚಿಕೊಂಡ ಯಶಸ್ಸು ಪೈಗಳ ಭಾಷೆಯ 'ಅದ್ಭುತ ದೌರ್ಬಲ್ಯಗಳನ್ನೂ ಮೀರಿನಿಂತು, ಪೈಗಳ ವಶವಾಗಿದೆ.'[೧೮]

ಸಾಹಿತ್ಯ, ಸಂಶೋಧನೆಗಳೇ ತಮ್ಮ ಉಸಿರಾಗಿದ್ದರೂ ಕಾವ್ಯಲೋಕಕ್ಕೂ ಕವಿಗೂ ಸಂಬಂಧವಿಲ್ಲವೆನ್ನುವುದು ಪೈಯವರ ಧೋರಣೆ. ಅವರ 'ಗಿಳಿವಿಂಡು' ಕವನದ ಗಿಳಿ ಮತ್ತು ತೋಟದ ಹೋಲಿಕೆಯಲ್ಲಿ ಇದು ಸ್ಪಷ್ಟವಾಗುತ್ತದೆ. 'ನಿಮ್ಮನೆನ್ನವೆನಲೆಂತು? ತೋಟವಾವುದನೋ ತಮ್ಮನು ಪಥದಿ ಕಂಡು ಕ್ಷಣಮೆರಗಲಾ ತೋಟದಹುದೆ ಗಿಳಿವಿಂಡು?' ಗಿಳಿಗಳ ಹಿಂಡು ತೋಟವೊಂದರಲ್ಲಿ ಆಶ್ರಯಪಡೆದ ಮಾತ್ರಕ್ಕೆ ಅವುಗಳ ಮೇಲೆ ತೋಟಕ್ಕೆ ಹೇಗೆ ಅಧಿಕಾರವಿಲ್ಲವೋ ಹಾಗೆಯೇ ಕವಿತೆಗಳ ಮೇಲೆ ಕವಿಗೂ ಯಾವುದೇ ಅಧಿಕಾರವಿಲ್ಲ. ಕವಿತೆಯ ಪ್ರಯೋಜನದ ಬಗೆಗೆ ಕವಿಯ ನಿಲುವು ಹೀಗೆ ವ್ಯಕ್ತವಾಗುತ್ತದೆ: ಉದ್ಧರಿಸಿ ಪತಿತರನು, ತಡೆದು ದುಶ್ಚರಿತರನು, ಧರ್ಮಪಥಕೊಯ್ಯುವುದು ಕವಿತೆಗಿದು ದಿಟಂ' ಎನ್ನುವ ಸಾಲುಗಳು ಕುತೂಹಲಕಾರಕವಾಗಿವೆ.

ಪೈಯವರ ರಚನೆಯ ಬಂಧ ಗಡುಸಾದುದು. ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಅವರ ಕವನಗಳು ಕಾರಂತರಂಥವರಿಗೇ ಉಕ್ಕಿನ ಕಡಲೆಗಳೆನಿವೆ ಅಂದರೆ ಪೈಯವರ ಭಾಷೆ, ರಚನೆಯ ನಿಗೂಢತೆಯನ್ನು ಊಹಿಸಬಹುದು. ಪೈಯವರ ಕವನದ ಭಾಷೆ ಹಾಗೂ ಬಂಧದ ಬಗ್ಗೆ ಸಹೃದಯ ವಿಮರ್ಶಕರ ಅಭಿಪ್ರಾಯಗಳನ್ನು ಪರಿಭಾವಿಸಿದರೆ 'ಓದಿದ ಕೂಡಲೇ ತಟ್ಟನೆ ತನ್ನ ಅಂತರಂಗವನ್ನು ಬಿಟ್ಟುಕೊಡುವುದಿಲ್ಲ ಪೈ ಅವರ ಕವಿತೆ. ಅದು, ಮೇಲ್ಪದರ ಹೆಪ್ಪುಗಟ್ಟಿದ ನದಿಯಂತೆ. ಸಾಂಪ್ರದಾಯಿಕ ಪರಿಭಾಷೆಯಲ್ಲಿ, ಅದು ನಾರಿಕೇಲಪಾಕ, ದ್ರಾಕ್ಷಾಪಾಕವಲ್ಲ'[೧೯] ಎನ್ನುತ್ತಾರೆ ಡಾ. ಸಿ.ಪಿ.ಕೆ.ಯವರು. 'ಪೈಯವರ ವಿಶಿಷ್ಟ ಪದರಚನೆ' ವಾಚಕರಿಗೆ ಸಾಕಷ್ಟು ಕೆಲಸ ಕೊಡುತ್ತದೆ. ಕವಿಗೆ ಅದು ಲೀಲಾಜಾಲವಾಗಿ ಸಿದ್ಧಿಸಿದ್ದರೂ ಇತರರಿಗೆ ಕೆಲವೊಮ್ಮೆಯಾದರೂ ಅಸಹಜ ಮತ್ತು ಅಸ್ಪಷ್ಟವಾಗಿ ತೋರಬಹುದು.'[೨೦]. 'ಆದರೆ ಮೇಲುನೋಟಕ್ಕೆ ಕಾಣುವ ಈ ಕಾಠಿಣ್ಯವನ್ನು ಭೇದಿಸಿ ಮುಂದೆ ನಡೆದರೆ, ಕವಿಯ ವಾಕ್ಪರಿಣತೆಯ ಆಳ, ವ್ಯಾಪ್ತಿಗಳ ಅರಿವಾಗುತ್ತದೆ'[೨೧] ಎಂಬುದು ಜಿ. ವರದರಾಜ್‌ರಾವ್‌ರವರ ಅನುಭವ. ಅಗತ್ಯವಿದೆಯೆಂದಾದರೆ ತಮ್ಮ ಕೃತಿಗಳಿಗೆ ತಾವೇ ಅಡಿಟಿಪ್ಪಣಿಗಳನ್ನು ಕೊಡುತ್ತಿದ್ದರೇ ವಿನಾ ಭಾಷೆಯನ್ನು ಸಡಿಲಗೊಳಿಸುವ ಜಾಯಮಾನ ಪೈಯವರದಲ್ಲ.

'ನಾನೇರುವೆತ್ತರಕೆ ನೀನೇರಬಲ್ಲೆಯಾ' ಎಂದು ಮಹಾಕವಿ ಕುವೆಂಪುರವರು ವಿಮರ್ಶಕರಿಗೆ ಸವಾಲು ಹಾಕಿದಂತೆ ಕವಿಕರ್ಮ ಕುಶಲಿಗಳಲ್ಲದವರು ಒಳ್ಳೆಯ ವಿಮರ್ಶಕರಾಗಲಾರರು ಎಂಬುದು ಪೈಯವರ ಭಾವನೆ. 'ಬಿತ್ತರಿಸದೆ ತಾಂ ಕಾವ್ಯವ ಗೊತ್ತರಿಯಲಳವೆ ಕವಿಯೆದೆಯಂ? ಕವಿಯೆದೆಯಂ ಗೆತ್ತಿರದ ವಿಮರ್ಶಕನೇಂ? ಹೆತ್ತರಿಯದ ಬಂಜೆ ಸೂಲಗಿತ್ತಿಯೆ ಜಗದಿ?'

**ಖಂಡಕಾವ್ಯಗಳು**

ಸರಳರಗಳೆಯಲ್ಲಿ ರಚಿತವಾದ ಗೊಲ್ಗೊಥಾ ಮತ್ತು ವೈಶಾಖಿ ಎಂಬ ನೀಳ್ಗವಿತೆಗಳು ಪೈಯವರ ಸೃಜನಶೀಲ ಸಾಹಿತ್ಯದ ಎರಡು ಮೇರು ಶಿಖರಗಳು. ಗೊಲ್ಗೊಥಾದಲ್ಲಿ ೩೭೭ ಸಾಲುಗಳಿದ್ದರೆ ವೈಶಾಖಿಯಲ್ಲಿ ೭೩೨ ಸಾಲುಗಳಿವೆ. ಯೇಸುಕ್ರಿಸ್ತ ಮತ್ತು ಗೌತಮಬುದ್ಧರ ಸಾವಿನ ದುರಂತವನ್ನು ಚಿತ್ರಿಸುವ ಈ ಕವಿತೆಗಳ ರಚನೆಯಲ್ಲಿ ಅನೇಕ ವರ್ಷಗಳ ಅಂತರವಿದ್ದರೂ ಪೈಯವರ ಕಾವ್ಯಪ್ರತಿಭೆ, ಕಥನ ಕಲೆ, ದರ್ಶನಸಿದ್ಧಿ ಎರಡರಲ್ಲೂ ಅಸಾಧಾರಣವಾಗಿ ಹೊಮ್ಮಿವೆ. ಮೃತ್ಯುವನ್ನು ನಗುನಗುತ್ತ ಬರಮಾಡಿಕೊಳ್ಳುವ ಮಹಾತ್ಮರ ಮರಣ ಕೂಡ ಎಷ್ಟು ಭವ್ಯವಾಗುತ್ತದೆ ಎಂಬುದನ್ನು ಗೋವಿಂದಪೈಯವರು ಈ ಅವಳಿ ಕೃತಿಗಳ ಮೂಲಕ ಅತ್ಯಪೂರ್ವವಾಗಿ ಸಾಬೀತುಪಡಿಸಿದ್ದಾರೆ. ಗೊಲ್ಗೊಥಾದಲ್ಲಿ ಅಕಾಲದಲ್ಲಿ ಅಸುನೀಗಿದ ಯೇಸುವಿನ ಕೊನೆಯ ದಿನದ ವರ್ಣನೆಯಿದ್ದರೆ ವೈಶಾಖಿಯಲ್ಲಿ ಬದುಕನ್ನು ಸಾರ್ಥಕಗೊಳಿಸಿ ವಾರ್ಧಕ್ಯದಲ್ಲಿ ಸಹಜ ಮರಣವನ್ನಪ್ಪಿದ ಬುದ್ಧನ ಪರಿನಿರ್ವಾಣದ ಸನ್ನಿವೇಶವಿದೆ.

**ಗೊಲ್ಗೊಥಾ**

ಬೈಬಲ್ಲಿನ ಹೊಸ ಒಡಂಬಡಿಕೆಯಲ್ಲಿರುವ ಮ್ಯಾಥ್ಯು, ಮಾರ್ಕ್, ಲೂಕ್ ಮತ್ತು ಜಾನ್ ಇವರ ಸುವಾರ್ತೆಗಳಿಂದ ಆರಿಸಿದ ಕಥಾವಸ್ತು ಗೊಲ್ಗೊಥಾ. ಗೊಲ್ಗೊಥಾ ಎನ್ನುವುದು ಯೇಸುವನ್ನು ಶಿಲುಬೆಗೇರಿಸಿದ ಸ್ಥಳ. ಧರ್ಮದ್ರೋಹ ಮತ್ತು ರಾಜದ್ರೋಹದ ಆಪಾದನೆಯನ್ನು ಹೊತ್ತುಕೊಂಡು ಶಿಲುಬೆಗೇರುವ ಯೇಸುವಿನ ಭವ್ಯ ವ್ಯಕ್ತಿತ್ವವನ್ನೂ ನಿರಪರಾಧಿತ್ವವನ್ನೂ ಅಮೃತತತ್ವವನ್ನೂ ಅತ್ಯಂತ ಹೃದಯಸ್ಪರ್ಶಿಯಾಗಿಯೂ ಧ್ವನ್ಯಾತ್ಮಕವಾಗಿಯೂ ಗೋವಿಂದ ಪೈಯವರು ಈ ಕಾವ್ಯದಲ್ಲಿ ಎರಕ ಹೊಯ್ದಿದ್ದಾರೆ. 'ಗೊಲ್ಗೊಥಾ'ದ ಮೇಲೆ ಜಿ. ವರದರಾಜರಾವ್, ರಂ.ಶ್ರೀ. ಮುಗಳಿ, ಎಡ್ವರ್ಡ್ ನೊರೋನಾ ಮುಂತಾದ ಅನೇಕ ವಿದ್ವಾಂಸರು ಅನೇಕ ಬಗೆಯಲ್ಲಿ ವಿಮರ್ಶಾತ್ಮಕ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ರಂ.ಶ್ರೀ ಮುಗಳಿಯವರು 'ಕನ್ನಡ ಸಾಹಿತ್ಯದಲ್ಲಿಯೇ ದೇಶಕಾಲಾತೀತವಾದ, ವಿಶ್ವವಿಶಾಲವಾದ ಕಲ್ಪಕತೆಗೆ ಸಾಕ್ಷಿಯಾಗಿರುವ 'ಗೊಲ್ಗೊಥಾ' ವ್ಯುತ್ಪತ್ತಿ, ವಿಶ್ವವಿಶಾಲತೆ, ಇತಿಹಾಸ ಜ್ಞಾನ ಮತ್ತು ಪ್ರತಿಭೆ – ಇವುಗಳ ಸಂಗಮದಿಂದ ಸಾಹಿತ್ಯ ಕ್ಷೇತ್ರದಲ್ಲಿ ನಿರ್ಮಾಣಗೊಂಡ ಒಂದು ಚಮತ್ಕಾರವೆನ್ನುತ್ತಾರೆ.'[೨೨] ಗೊಲ್ಗೊಥಾದ ಬಗ್ಗೆ ಪರಿಚಯಾತ್ಮಕ ಟಿಪ್ಪಣಿಯನ್ನು ಬರೆದಿರುವ ಶ್ರೀಯುತ ಎಡ್ವರ್ಡ್ ನೊರೋನಾರವರು 'ಕವಿ ಮೂಲದಲ್ಲಿರುವ ಯೇಸುವಿನ ಜೀವನದ ಅರ್ಥಪೂರ್ಣತೆಯನ್ನೂ ಬೋಧನೆಯ ಸಾರವನ್ನೂ ಗಮನಿಸಿದಂತೆ ಕಾಣುವುದಿಲ್ಲ. ಮೂಲದಲ್ಲಿರದ ಮತ್ತು ಮೂಲಕ್ಕೆ ವ್ಯತಿರಿಕ್ತವಾದ ಅಂಶಗಳು ಕವನದಲ್ಲಿವೆ. ಇದರಿಂದ ಮೂಲದ ಯೇಸುವಿನ ಘನತೆ, ಧೀರಗಾಂಭೀರ್ಯ ಗಳಿಗೆ ಸ್ವಲ್ಪ ಚ್ಯುತಿ ಬಂದಿದೆ'[೨೩] ಎನ್ನುತ್ತಾರೆ. ಮುಖ್ಯವಾಗಿ 'ಹೆಣ್ಣಿಗೆಯ ನಯನದಿಂ ಭವಿಷ್ಯವಂ ತಿದ್ದುವ ಪುರುಷನ ದೃಷ್ಟಿ, ಹೆಣ್ಣೆದೆಯ ಮಾರ್ದವದಿ ಗಂಡಿನ ಮನೋದಾರ್ಢ್ಯ...' ಯೇಸುವಿನಂಥ ಪುರುಷಾಕಾರವೇ ಮೂರ್ತಿವೆತ್ತ ಭವ್ಯವ್ಯಕ್ತಿತ್ವಕ್ಕೆ ಈ ಸಾಲುಗಳಲ್ಲಿನ ಹೆಣ್ತನದ ಹೋಲಿಕೆ ಸಮಂಜಸವಾಗಿಲ್ಲ ಎಂಬುದು ಅವರ ವಾದ. ಮಗ್ದಲದ ಮರಿಯಳ ವಿಚಾರದಲ್ಲಿಯೂ ಕವಿ ಅನೇಕ ಅವಾಸ್ತವ ಸಂಗತಿಗಳನ್ನು ನಿರೂಪಿಸಿದ್ದಾರೆಂದು ಆಕ್ಷೇಪಿಸುತ್ತಾರೆ.

ಹಾಗೆಯೇ ಸುವಾರ್ತೆಗಳ ಪ್ರಕಾರ ಯೇಸುವಿನ ಕೊನೆಯ ದಿನ ಒಂದು ಸ್ವತಂತ್ರ ಘಟಕವಾಗಿ ನಿಲ್ಲುವುದಿಲ್ಲ. ಅದನ್ನು ಯೇಸುವಿನ ನೋವು, ಸಾವು ಮತ್ತು ಪುನರುತ್ಥಾನ ಎಂದು ಒಟ್ಟಾಗಿ ನಿರ್ದೇಶಿಸುವುದು ರೂಢಿ... ತಾನು ಸತ್ತರೂ ಪಾಪ ಮತ್ತು ಅದರ ಪರಿಣಾಮವಾದ ಸಾವನ್ನು ಗೆದ್ದು ಯೇಸು ವಿಜಯಿಯಾದುದು ಪುನರುತ್ಥಾನದಿಂದ. ಸತ್ತ ಯೇಸು ಮತ್ತೆ ಎದ್ದಿರದಿದ್ದರೆ ತನ್ನ ಉಪದೇಶವೆಲ್ಲ ವ್ಯರ್ಥವಾಗುತ್ತಿತ್ತು ಎಂದು ಸೈಂಟ್ ಪಾಲ್ ಹೇಳಿದುದು ಕ್ರೈಸ್ತ ಧರ್ಮದರ್ಶನದಲ್ಲಿ ಪುನರುತ್ಥಾನ ಎಷ್ಟು ಕೇಂದ್ರೀಯವೆಂಬುದನ್ನು ತೋರಿಸುತ್ತದೆ'[೨೪] ಎನ್ನುತ್ತ ಆದರೆ ಕವನದಲ್ಲಿ ಮರಣವೇ ಅಂತಿಮ ಎಂಬ ಭಾವವನ್ನು ಕವಿ ಸೂಚಿಸಿದ್ದಾರೆ. 'ತುದಿ ಬೆಟ್ಟದಿ ಕರೆವ ತಾಯೆಡೆಗೆ ಮರಿಜಿಂಕೆ ಜಿಗಿವಂತೆ, ಸುಗ್ಗಿಯೆಡೆಗೆಯ್ದುವಾ ಬಾನಕ್ಕಿಯಂತೆ... ತಾಯ ಮೊಗ ನೋಡೆ ಮಗು ಬೆಸಲಳಲ ನೋತು ಸೈರಿಸುವಂತೆ ಇತ್ಯಾದಿ ಪಂಕ್ತಿಗಳು ಯೇಸುವಿನ ದೈಹಿಕ ಮಾನಸಿಕ

ಹೋರಾಟಗಳಿಗೆ ಒಂದು ನಿಲುಗಡೆ ಮತ್ತು ಅಂತಿಮತೆಯನ್ನು ಕೊಡುತ್ತವೆ. ಪುನರುತ್ಥಾನದ ಮಾತು ಕವನದಲ್ಲಿ ಬರಬೇಕಾಗಿತ್ತು' ಎಂಬ ಆಶಯವನ್ನು ಅಭಿವ್ಯಕ್ತಿಸುತ್ತಾರೆ. ಆದರ 'ಮನೆಗೆ ತೆರಳಿದರಲ್ಲಿ ಸದ್ದಿಲ್ಲ, ಸುಳಿವಿಲ್ಲ, ಎತ್ತಲುಂ ನಿಷ್ಪಂದಮೆತ್ತಲುಂ ಶಾಂತಂ.' ಎಂಬ ಕೊನೆಯ ಸಾಲುಗಳು ವ್ಯಂಜಿಸುವ ಅರ್ಥ ಭಾವಗಳನ್ನು ಗಮನಿಸಿದರೆ ಮೇಲೆ ಹೇಳಿದ ನಿಲುಗಡೆ ಮತ್ತು ಅಂತಿಮತೆಯ ಭಾವವನ್ನು ತಿದ್ದಿ ಹೆಚ್ಚು ಮಹತ್ವದ ಒಂದು ಘಟನೆ – ಪುನರುತ್ಥಾನ – ಬರಲಿದೆ ಎಂಬ ಸೂಚನೆಯನ್ನು ಈ ಪಂಕ್ತಿಗಳು ಬಹಳ ಸೂಕ್ಷ್ಮವಾಗಿ ಕೊಡುತ್ತವೆ ಎನ್ನುವ ಅಭಿಪ್ರಾಯವನ್ನೂ ವ್ಯಕ್ತಪಡಿಸುತ್ತಾರೆ. ಮೂಲದಲ್ಲಿಲ್ಲದ ಕಾವ್ಯಾತ್ಮಕ ವಾಗಿಯೂ ಕ್ರೈಸ್ತ ಧರ್ಮದರ್ಶನಕ್ಕೆ ಸುಸಂಗತವಾಗಿಯೂ ಇರುವ ಅಂಶಗಳನ್ನೂ ನೊರೋನ್ಹಾರವರು ಗುರುತಿಸುತ್ತಾರೆ. ಕ್ರೈಸ್ತರ ಧರ್ಮಗುರು ಪಿಲಾತನ ಬಗ್ಗೆ 'ಜ್ಞಾನವೃಕ್ಷದ ಬಳಿಯೆ ವೆಂಟಣಿಸಿ ಕುಳಿತದರ ಫಲವ ಮೆಲಲಾರದದನಕ್ಕಜದೊಳೀಕ್ಷಿಸುವ ಹಳೆಯ ಹಾವೆನೆ, ಯೇಸುವನ್ನು ಶಿಲುಬೆಗೇರಿಸಿದಾಗ "ಈ ಹರೆಯದೀ ಶೋಭೆಯೀ ಜಗತ್ಪ್ರೇಮದೀ ಸುಜ್ಞಾನದೀ ಶಾಂತಿಯೀ ಮಹಿಮೆಯೀ ಜಿತಾತ್ಮತೆಯೀ ತಪಃ ಶಕ್ತಿಯೀ ಧರ್ಮದೀ ಮನುಜದೇವತನದೀ ಸುಧಾ ಸಿಂಧು ಯೋರ್ದನಿನಂತೆ ಸುರಿವುದಕಟಾ ಮೃತಸಮುದ್ರದಲಿ ನೋಡ' ಇತ್ಯಾದಿ ಸಾಲುಗಳಿಂದ ಕವನದ ಘನತೆ ಹೆಚ್ಚಿದೆ, ಅರ್ಥವಂತಿಕೆ ಶ್ರೀಮಂತವಾಗಿದೆ ಎನ್ನುತ್ತಾರೆ. (ಯೋರ್ದನ್ ಎಂದರೆ ಪವಿತ್ರಪ್ರವಾಹ, ಕ್ಷೇಮವಾಹಿನಿ) ಕೊನೆಯಲ್ಲಿ ಮೂಲವಸ್ತುವಿಗೂ ಕವನದಲ್ಲಿ ಅದನ್ನು ನಿರ್ವಹಿಸಿದ ರೀತಿಗೂ ಇದ್ದ ವ್ಯತ್ಯಾಸಗಳು ಕವನದ ಸಾರ್ಥಕತೆಯ ಮೇಲೆ ಋಣಾತ್ಮಕ ಪರಿಣಾಮವನ್ನು ಉಂಟು ಮಾಡುತ್ತವೆಯಾದರೂ ಕವನದ ಒಟ್ಟು ನಿವೇದನೆಯನ್ನು ಅವು ಅಲ್ಲಗಳೆಯುವುದಿಲ್ಲ, ನಿವೇದನೆಯ ಪರಿಪೂರ್ಣತೆಗೆ ಕುಂದನ್ನು ತರುತ್ತವೆಯಷ್ಟೆ[೨೫] ಎನ್ನುವ ತೀರ್ಮಾನಕ್ಕೆ ಬರುತ್ತಾರೆ.

ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ಅನ್ಯಧರ್ಮದ ವಸ್ತುವನ್ನು ಆರಿಸಿ ಅತ್ಯಂತ ಗಂಭೀರವೂ, ಧ್ವನಿಪೂರ್ಣವೂ ಆದ ವರ್ಣನೆ, ವ್ಯಕ್ತಿಚಿತ್ರಣಗಳಿಂದ, ಛಂದಸ್ಸು, ಅಲಂಕಾರಗಳಿಂದ, ಸೊಗಸು, ಸ್ವೋಪಜ್ಞತೆಗಳಿಂದ, ಸಾಲುಸಾಲುಗಳಲ್ಲಿ ಓತಪ್ರೋತವಾಗಿ ಹೊಮ್ಮಿಹರಿಯುವ ಕಾವ್ಯಸೌಂದರ್ಯದಿಂದ ಕೂಡಿದ ಕಾವ್ಯವೆಂದಲ್ಲದೆ ಇಂಥ ಒಂದು ಮನೋಜ್ಞವಾದ ಅನುಪಮ ಕಾಣಿಕೆಯನ್ನು ಕನ್ನಡಕ್ಕೆ ಸಲ್ಲಿಸಿದವರಲ್ಲಿ ಪೈಯವರೇ ಮೊದಲಿಗ ರೆನ್ನುವುದರಲ್ಲೂ ಕಾವ್ಯದ ಹೆಗ್ಗಳಿಕೆಯಿದೆ.

### ವೈಶಾಖಿ ಅಥವಾ ಬುದ್ಧನ ಕಡೆಯ ದಿನಗಳು

ರಾಜವಂಶದಲ್ಲಿ ಜನಿಸಿ ಎಲ್ಲ ಭೋಗಭಾಗ್ಯಗಳ ತುತ್ತತುದಿಯಲ್ಲಿರುವಾಗಲೇ ಬದುಕಿನ ನಶ್ವರತೆ, ಸಾವು ನೋವುಗಳನ್ನು ಕಂಡು ವೈರಾಗ್ಯಗೊಂಡು ಪರಿವ್ರಾಜಕನಾಗಿ ಜ್ಞಾನದ ಉತ್ತುಂಗತೆಗೇರಿ ಅಹಿಂಸೆ, ಪ್ರೀತಿ, ಪ್ರೇಮಗಳ ಮೂಲಕ ಜೀವನಮೌಲ್ಯವನ್ನು ಸಾರಿ ಅಮರನಾದ ಭಗವಾನ್ ಬುದ್ಧನ ನಿರ್ವಾಣವನ್ನು ವರ್ಣಿಸುವ ಕಾವ್ಯ ವೈಶಾಖಿ. ಇದನ್ನು ಬೌದ್ಧಧರ್ಮ ಗ್ರಂಥವಾದ ಪಾಲಿಭಾಷೆಯ ಮಹಾಪರಿನಿಬ್ಬಾನ ಸುತ್ತ

(ಮಹಾಪರಿನಿರ್ವಾಣ ಸೂತ್ರ) ದ ಭಾಗವನ್ನು ಆಧರಿಸಿ ರಚಿಸಲಾಗಿದೆ. ವೈಶಾಖ ಶುಕ್ಲ ಪೂರ್ಣಿಮೆಯಂದೇ ಜನನ, ಜ್ಞಾನ, ನಿರ್ವಾಣವನ್ನು ಪಡೆದ ಬುದ್ಧನ ಅಂತಿಮದಿನದ ಕಥಾವಸ್ತುವಿರುವ ಈ ಖಂಡ ಕಾವ್ಯ ಗೊಲ್ಗೊಥಾದಷ್ಟೇ ಉನ್ನತವಾದ ಕೃತಿ. ಇಲ್ಲಿ ಬುದ್ಧನ ಮುಖಾಂತರ ಕವಿ ಸಾರುವ ಜೀವನ ಮೌಲ್ಯಗಳು ಲೋಕೋತ್ತರವಾಗಿವೆ. ವರ್ಣನೆ, ಅಲಂಕಾರಗಳು ಉತ್ಕೃಷ್ಟವಾಗಿವೆ. ಎಂಬತ್ತು ತುಂಬಿದ ಬುದ್ಧ ಸಾವನ್ನು ಸ್ವೀಕರಿಸುವ ವಿಧಾನ, ಅದಕ್ಕಾಗಿ ತನ್ನನ್ನೂ ಪರಿವಾರವನ್ನೂ ಸಜ್ಜುಗೊಳಿಸಿದ ಬಗೆ ಕವಿಯ ಕಾವ್ಯಪರಿಣತಿಗೆ ಅತ್ಯುತ್ತಮ ನಿದರ್ಶನವಾಗಿದೆ. 'ಆನಂದ, ವಯಸೆನ್ನ ಪರಿಪಕ್ವವಾಯ್ತು, ನೋಡಿಂದೆ ತುಂಬಿತ್ತು ವರುಷವೆಂಬತ್ತು, ಸಂದುದಾಯುಷ್ಯ... ಎಂದಿಗೆ ಗಡಾ ನಿರೋಧ ಸಮಾಧಿಯಲಿ ವಿಹರಿಪೆನೋ ಸುಗತನವನ ದೇಹಕ್ಕೆ ನೆಮ್ಮದಿಯಂದೆ' ತನ್ನ ಆಪ್ತ ಶಿಷ್ಯನೊಂದಿಗೆ ಸಮಲೋಚಿಸುವ ಬುದ್ಧನ ಈ ಮಾತುಗಳಲ್ಲಿ ಸಾವಿನ ಕ್ಷಣಗಳನ್ನು ಆಹ್ವಾನಿಸುವ ಬದುಕಿನಿಂದ ನಿರ್ಗಮಿಸಲು ಸಜ್ಜಾಗುವ ಮಹಾತ್ಮನೊಬ್ಬನ ಪರಿಪೂರ್ಣ ಮನಸ್ಥಿತಿಯನ್ನು ದರ್ಶಿಸಬಹುದಾಗಿದೆ. ಪದ್ಮಾಸನಸ್ಥನಾದ ಬುದ್ಧ 'ಡಿಂಡೀರ ಪಿಂಡದಿ ಮರಾಲ ಮಂಡಿಸಿದಂತೆ' ಕಾಣುತ್ತಾನೆ. ಬುದ್ಧನ ಭವ್ಯಸ್ವರೂಪವನ್ನು ಎಷ್ಟು ನೋಡಿದರೂ ವರ್ಣಿಸಿದರೂ ಕವಿಗೆ ತೃಪ್ತಿಯಿಲ್ಲ. ವರುಷ ಎಂಬತ್ತು ಕಳೆದರೂ ಬುದ್ಧನಲ್ಲಿ ಕಾಣುವುದು ಚಿರಯೌವನ. 'ತೊಗಲನಿತು ಸಡಲಿಲ್ಲ, ನವಿರನಿತು ನರೆತಿಲ್ಲ, ದನಿಯಣಂ ಕುಗ್ಗಿಲ್ಲ, ಮುರಿಯಣಂ ಬಗ್ಗಿಲ್ಲ, ಕಣ್ಣಾಲಿ ಬೆಳತಿಲ್ಲ, ಹಲ್ಲೊಂದು ಜಗುಳಿಲ್ಲ. ನೋಡ ನಂದ್ಯಾವರ್ತ ತರುವಂತೆ ಮಧ್ಯಮೋನ್ನತನ ಜಂಬೂ ಫಲದ ಧವಲ ದೇಹಚ್ಛವಿಯ!... ಅಪರಭಾನುವಾಳ್ದಪನು ನಿಬ್ಬಯಲೊಳಗೆ ನೋಡ!'

ಮಹಿಳೆಯರ ಜತೆ ಹೇಗೆ ವರ್ತಿಸಬೇಕೆಂದು ಆನಂದ ಕೇಳಿದ ಪ್ರಶ್ನೆಗೆ 'ಹಿರಿಯರಂ ತಾಯೆಂದು, ಸರಿಯರನಕ್ಕತಂಗಿಯರೆಂದು, ಕಿರಿಯರಂ ಕೂಸೆಂದು ಭಾವಿಸುತ ಕಟ್ಟೆಚ್ಚರಿರಿ' ಎನ್ನುವ ಬುದ್ಧನ ಉತ್ತರ ಲೋಕಾನುಭವದಿಂದ ಹುರಿಗೊಂಡ ಅತ್ಯುಜ್ವಲ ಆದರ್ಶ. ಇದು ಕವಿಯ ಸುಸಂಸ್ಕೃತ ಮನಸ್ಸಿನ ಕನ್ನಡಿಯೂ ಆಗಿದೆ.

ವೈಶಾಖಿಯ ಭಾಷೆ, ಛಂದಸ್ಸು, ನಿರೂಪಣೆಗಳಲ್ಲಿ ಕವಿ ತೋರಿದ ಪ್ರಯೋಗ ಶೀಲತೆಯನ್ನು ಅನೇಕ ವಿದ್ವಾಂಸರು ಕೊಂಡಾಡಿದ್ದಾರೆ. 'ನವೋದಯ ಪೂರ್ವಯುಗದಲ್ಲೇ ಇಂಗ್ಲಿಷು ಸಾಧಿಸಿದ ಶ್ರೇಷ್ಠ ಸಾಧನೆಗಳನ್ನು ಕನ್ನಡದಲ್ಲಿ ಪರಿಣತವಾಗಿ ತಂದ ಶ್ರೇಯಸ್ಸು ಪೈಗಳ ಅಸಾಧಾರಣ ಪ್ರತಿಭೆಗೆ ಸಲ್ಲಬೇಕು.'[೨೬] ಎನ್ನುವ ಡಾ. ಶಂಕರ ಮೊಕಾಶಿ ಪುಣೇಕರರವರು 'ವೈಶಾಖಿ ಒಂದು ದೈವೀಕಾವ್ಯ. ಇದರ ಮೇಲೆ ವಿಮರ್ಶೆ ಬರೆಯುವವರಿಗೆ ಇಲ್ಲ ದೈವೀಪ್ರತಿಭೆ ಇರಬೇಕು, ಇಲ್ಲ ಬಾಲಿಶ ಧಾರ್ಷ್ಟ್ಯಬೇಕು'[೨೭] ಅನ್ನುತ್ತಾರೆ. ಗೋವಿಂದ ಪೈಯವರು ಬಳಸಿದ ಭಾಷೆ, ಛಂದಸ್ಸಿನ ಪ್ರಯೋಗ ಶೀಲತೆಯನ್ನು ಪ್ರಸ್ತಾಪಿಸಿದ ಶ್ರೀಯುತರು ಸರಳ ರಗಳೆಯನ್ನು ಉದಾತ್ತ ವಿಷಯದ ನಿರ್ವಹಣೆಗೆ ಎಷ್ಟು ಸಮರ್ಥವಾಗಿ ಅಳವಡಿಸಿಕೊಂಡಿದ್ದರು, ಎಷ್ಟು ರೀತಿಯ ಗತಿಯನ್ನು ಬಳಸಿದರು, ಎಂದು ಕೊಂಡಾಡುತ್ತ 'ಅವರನ್ನು ಹೆತ್ತು ಕನ್ನಡ ಭಾಷೆಗೆ ಅರ್ಪಿಸಿದ ದ.ಕ. ಜಿಲ್ಲೆಯನ್ನು ನಮಸ್ಕರಿಸಬೇಕು'[೨೮] ಎಂದು ಉದ್ಗರಿಸುತ್ತಾರೆ.

**ನಾಟಕಗಳು**

ಗೋವಿಂದ ಪೈಯವರು 'ಹೆಬ್ಬೆರಳು,' 'ಚಿತ್ರಭಾನು ಅಥವಾ ೧೯೪೨', 'ತಾಯಿ' ಮತ್ತು ಜಪಾನಿನ ಎಂಟು ನೋ ನಾಟಕ – ಹೀಗೆ ಸ್ವತಂತ್ರ ಮತ್ತು ಅನುವಾದಗಳು ಸೇರಿ ಒಟ್ಟು ೧೧ ನಾಟಕಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ.

**ಹೆಬ್ಬೆರಳು**

೧೯೪೬ರಲ್ಲಿ ಪ್ರಕಟವಾದ 'ಹೆಬ್ಬೆರಳು' ನಾಟಕದ ಕಥಾವಸ್ತು ಮಹಾಭಾರತದ ಆದಿಪರ್ವದ ಏಕಲವ್ಯಾಖ್ಯಾನವನ್ನು ಆಧರಿಸಿದರೂ ಅದನ್ನು ಬೇಕಾದಂತೆ ಪರಿವರ್ತಿಸಲಾಗಿದೆ ಎಂದು ಪೈಯವರು ಹೇಳಿದ್ದಾರೆ. ಗ್ರೀಕ್ ನಾಟಕ ಹಾಗೂ ಜಪಾನಿನ ನೋ ನಾಟಕದಲ್ಲಿ ಬರುವ ಮೇಳದವರ ಪಾತ್ರವನ್ನು ಬಳಸಿ ಈ ನಾಟಕವನ್ನು ರಚಿಸಿದ ಪೈಯವರು ಮೇಳದ ಬದಲು ಗೊಂದಲದವರು ಎಂದು ಕರೆದಿರುವುದರ ಔಚಿತ್ಯದ ಬಗ್ಗೆ ನೀಡಿದ ವಿವರಣೆ (ಸುತ್ತುವರಿದ ಕುಣಿತ, ಮಂಡಲನೃತ್ಯ, ನಾಗಮಂಡಲ, ಮಂಡಲ ಪೂಜೆ ಇತ್ಯಾದಿ) ಗಮನಾರ್ಹ: 'ನಮ್ಮ ತುಳುನಾಡಿನಲ್ಲಿ ಹರಕೆಗಾಗಿಯೂ ಬಳಕೆಯಾಗಿಯೂ ಗೊಂದಳಪೂಜೆ ಎಂದು ಮಾಡಿಸುವುದುಂಟು; ... ಅದರಲ್ಲಿ ಗೊಂದಳದವರು ಹಾಡುತ್ತ ಕುಣಿಯುತ್ತ ನಡುವೆ ಇಟ್ಟ ದೀಪವನ್ನು ಸುತ್ತಿ ಸುತ್ತಿ ಬರುತ್ತಾರೆ. ಗೊಂದಳ ಪೂಜೆ ಎಂದರೆ Choral worship ಹೀಗೆ ಮಂಡಲನೃತ್ಯವೆಂದು ಸ್ಪಷ್ಟವಾಗಿ ತಿಳಿಯುವುದರಿಂದ Chorus ಎಂಬುದಕ್ಕೆ ಗೊಂದಳದವರು ಎನ್ನುವುದೇ ನನಗೆ ನೇರೆನಿಸಿತು.'[೨೯] ತಮ್ಮ ಅಭಿಪ್ರಾಯದ ಸಮರ್ಥನೆಗಾಗಿ ರನ್ನನ ಅಜಿತಪುರಾಣದ (ಆಶ್ವಾಸ–೫) ಗೊಂದಳ ಪದಗಳ ಉಲ್ಲೇಖವನ್ನೂ ನೀಡಿದ್ದಾರೆ.

ಆರ್ಯ ಅನಾರ್ಯ ಸಂಘರ್ಷವನ್ನು ಮುಖ್ಯ ವಿಚಾರವನ್ನಾಗಿ ಪರಿಗ್ರಹಿಸಿದ ಈ ನಾಟಕದಲ್ಲಿ ನಾಲ್ಕು ನೋಟಗಳಿವೆ. ಹಿರಣ್ಯಧನುವೆಂಬ ಭಿಲ್ಲರೊಡೆಯನ ಸಾಕುಮಗ (ಅಣ್ಣನ ಮಗ) ಏಕಲವ್ಯ ಚಿಕ್ಕಪ್ಪನ ಅಪ್ಪಣೆ ಪಡೆದು ದ್ರೋಣಾಚಾರ್ಯರಲ್ಲಿಗೆ ಬಿಲ್ಲುವಿದ್ಯೆ ಕಲಿಯಲು ಹೊರಡುವವರೆಗಿನ ಕಥಾಭಾಗ ಮೊದಲ ನೋಟ. ಜಾತಿಯ ಕಾರಣವಾಗಿ ದ್ರೋಣಾಚಾರ್ಯರಿಂದ ತಿರಸ್ಕೃತವಾಗಿ ನೊಂದ ಏಕಲವ್ಯನಿಗೆ 'ಗುರು ನಿಮಿತ್ತ ಮಾತ್ರಂ ಕಲಿಯೆ ಮನಸುಂಟೆ ಸಾಕು, ಕಲಿಸುವುದು ಮಣ್ಣಿನ ಬೊಂಬೆ.' ಎಂದು ಗೊಂದಳದವರು ಹೇಳುವ ಸಮಾಧಾನ, ಏಕಲವ್ಯನ ನಿರ್ಧಾರ ಎರಡನೆಯ ನೋಟ. ಗುರುದಕ್ಷಣೆ ನೀಡಲು ಹೊರಟ ಏಕಲವ್ಯ ದ್ರೋಣಾಚಾರ್ಯರ ಆಗಮನವನ್ನು ತಿಳಿದು ಸಂತೋಷ ಗೊಳ್ಳುವುದು, ಅಪಶಕುನಗಳಿಂದ ಗೊಂದಳದವರು ಮತ್ತು ಹಿರಣ್ಯಧನು ಆತಂಕಿತ ರಾಗುವುದು ಮೂರನೆಯ ನೋಟ. ಗುರುದಕ್ಷಿಣೆಗಾಗಿ ದ್ರೋಣರು ಹೆಬ್ಬೆರಳನ್ನು ಕೇಳಿದರೆ ಏಕಲವ್ಯ ತಕ್ಷಣವೇ ಅದನ್ನು ಕತ್ತರಿಸಿ ಒಪ್ಪಿಸುವ ಸನ್ನಿವೇಶ ನಾಲ್ಕನೆಯ ನೋಟದಲ್ಲಿದೆ.

ನಾಲ್ಕು ಪಾತ್ರಗಳು ಮತ್ತು ಗೊಂದಳದವರು ಮಾತ್ರವೇ ಇರುವ ಅತಿ ದೀರ್ಘವಲ್ಲದ ನಾಟಕವಾದರೂ ಇದರಲ್ಲಿ ಬಹುಕಾಲ ಮೆಲುಕು ಹಾಕತಕ್ಕ ಅನೇಕ ಪದಪುಂಜಗಳೂ ಸೂಕ್ತಿಗಳೂ ಇವೆ. ಮಾತ್ರವಲ್ಲ ಮಗನ ಆಸೆಯನ್ನು ನಿರಾಕರಿಸುವಾಗ ಹಿರಣ್ಯಧನು

ಅನುಭವಿಸುವ ಮಾನಸಿಕ ಹಿಂಸೆ, ದ್ರೋಣಾಚಾರ್ಯರಿಂದ ಆಶಾಭಂಗಿತನಾದ ಏಕಲವ್ಯನ ದುಃಖ, ಹಿರಣ್ಯಧನು ಮತ್ತು ಗೊಂದಳದವರ ಆತಂಕ, ಹೆಬ್ಬೆರಳನ್ನು ಕತ್ತರಿಸುವ ಸನ್ನಿವೇಶ, ದ್ರೋಣರ ಪರಿತಾಪ ಮುಂತಾದ ಕೆಲವು ಉತ್ಕೃಷ್ಟ ಸನ್ನಿವೇಶಗಳೂ ಇದ್ದು ಸಹೃದಯ ಓದುಗರನ್ನು ಆಕರ್ಷಿಸುವುದರಲ್ಲಿ ಅವು ಯಶಸ್ವಿಯಾಗಿವೆ. ಹಿರಣ್ಯಧನು ಮಗನಿಗೆ ಬುದ್ಧಿ ಹೇಳುವುದು ಹೀಗೆ: 'ಎಲೆ, ಮರುಳೆ ಮೊದಲೆ ಆರ್ಯಂ, ಮೇಲೆ ಪಾರ್ವನಾತಂ, ನಮಗೆ ಕರಿಯ ಭಿಲ್ಲರನಾರ್ಯರಿಗೆ ವಿದ್ಯೆ ಹೇಳುವನೆ? ಹದ್ದು ಹೊದಿಸುವುದೆ ಕಬ್ಬಕ್ಕಿ ಮರಿಯಂ? ಗೆಣಸು ಗೂರುವಂತೆಕ್ಕಲಂ ಜಾಡಿಸದೆ ಬಿಡ ನಿನ್ನ' ಎನ್ನುತ್ತಾನೆ. ಏಕಲವ್ಯನ ಸ್ವಭಾವವನ್ನು ಕುರಿತು ಗೊಂದಳದವರು 'ಕಿರುಮೆಣಸಂತೆ ಬಲು ಕಾರವಿಹನೀತ! ಮಾತಿನೊಳವಂ ಹಿಡಿವ ಗೆರೆಸೆಯಲ್ಲದೆ ಬಿಡುವ ಜರಡೆಯಲ್ಲೀ ಪೋರ.' ಎನ್ನುತ್ತಾರೆ. 'ನೀನನಾರ್ಯ ಕಿಶೋರ, ನನಗೆ ಪಂಚಮ ವೇದವಂ ಕಲಿಸಲಾಸ' ಎಂದು ದ್ರೋಣಾಚಾರ್ಯರು ನಿರಾಕರಿಸಿದಾಗ 'ಅನಾರ್ಯರು ಮನುಷ್ಯರಲ್ಲವೆ ಜೀಯ?' ಎಂಬ ಏಕಲವ್ಯನ ಪ್ರಶ್ನೆ, 'ಶಾರ್ದೂಲ ಮಾರ್ಜಾಲವೆಂತಂತೆ ಆರ್ಯರನಾರ್ಯರತಿ ಭಿನ್ನರಹರು, ಖಗರಾಜನೇಂ ಕಲಿಸುವನೆ ವಾಯಸಕೆ ಪಕ್ಷವಂ ಕೊಡಹದೊಲಾಡೆ? ವ್ಯಾಘ್ರಂ ಬಿಡಾಲಕೆ ತನ್ನ ಲಂಘನವ ಕಲಿಸುವುದೆ? ನಿನ್ನುದ್ದ ಮಿಕ್ಕು ನೀ ನೆಗೆಯ ಬೇಡವ್ವೂ ಕಂದ!' ಎಂಬ ಅವರ ಉತ್ತರ ಹಾಗೂ 'ಧರ್ಮಸಂಕಟಕ್ಕೆನ್ನ ನೀಡುಗೊಳಿಸದಿರಣ್ಣ ನಮ್ಮಾರ್ಯ ಧರ್ಮ ನಿಯಮಂ ಕಠೋರಂ ಗಡ! ಕಠೋರತಮಮೆಮ್ಮಯ ಸಮಾಜನಿಯಮಂ! ನಾನತಿಕ್ರಮಿಸೆ' ಎನ್ನುವ ಅಸಹಾಯಕತೆ ಇವೆಲ್ಲ ಅತ್ಯಂತ ಧ್ವನ್ಯಾತ್ಮಕವಾಗಿದ್ದು ಮುಂದೊದಗಲಿರುವ ದುರಂತಗಳಿಗೆ ಎಚ್ಚರಿಕೆಯ ಗಂಟೆಯಾಗುತ್ತದೆ.

ಹೆಬ್ಬೆರಳು ನಾಟಕದ ಕೇಂದ್ರಭಾಗ ನಾಲ್ಕನೆಯ ನೋಟ. ದ್ರೋಣಾಚಾರ್ಯರ ಮಣ್ಣಿನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಬಿಲ್ಲುವಿದ್ಯೆ ಕಲಿತ ಏಕಲವ್ಯನ ವಿಚಾರವನ್ನು ಅರ್ಜುನನಿಂದ ತಿಳಿದು ಅವನನ್ನು ಸಂದರ್ಶಿಸಲು ಬಂದ ಆಚಾರ್ಯರು ವಿನೋದಕ್ಕೆಂದು 'ಗುರುದಕ್ಷಿಣೆಯ ನೀಡಬೇಡಾಕಂದ?' ಎಂದು ಕೇಳಿದಾಗ ಏಕಲವ್ಯ 'ಹೆಸರಿಸಿರಿ ದೇವ ದಕ್ಷಿಣೆಯ, ತಮ್ಮಲಿ ಕಲಿತ ವಿದ್ಯೆಗೀ ಜೀವವನೆ ಮಾರಿತ್ತೆ' ಎಂದು ಉತ್ತರಿಸುತ್ತಾನೆ. ಅದಕ್ಕೆ ದ್ರೋಣಾಚಾರ್ಯರು 'ಏನೆಂಬೆ ನನ್ನ ಬಲಗೆಯ್ಯ ಹೆಬ್ಬೆರಳನೀಯೆನೆ ಕಂದ?' ಎಂದು ಪ್ರಶ್ನಿಸುವುದರೊಳಗೆ 'ಇತ್ತೆನಿದೊ ಗುರುದೇವ!' ಎಂದವನೆ ಹಿಂದು ಮುಂದು ನೋಡದೆ ತಕ್ಷಣವೇ ತನ್ನ ಬಲಗೈ ಹೆಬ್ಬೆರಳನ್ನು ಕಟಕ್ಕನೆ ಕಡಿದು ದ್ರೋಣರ ಕಾಲಬುಡಕ್ಕೆ ಅರ್ಪಿಸುತ್ತಾನೆ. ಹೆಬ್ಬೆರಳು ಕತ್ತರಿಸಿಕೊಂಡ ಮಗನನ್ನು ನೋಡಿ ಕಣ್ಣೀರ ಕೋಡಿ ಹರಿಸುವ ಹಿರಣ್ಯಧನುವಿನ ಸಂಕಟವಾಗಲೀ, ಆರ್ಯನಾದ ದ್ರೋಣ ಅನಾರ್ಯನಾದ ಏಕಲವ್ಯನ ಕಾಲಿಗೆರಗಿ 'ನಿನ್ನ ಚಿತ್ತಸ್ಥೈರ್ಯದಾ ಧೈರ್ಯದೌದಾರ್ಯದಾ ಶೌರ್ಯದಾ ಸತ್ಯಪಿಕ್ರಮದ ಮುಂದೆ ನಾ ಮೂಗುವಟ್ಟಿಹೆ ಕಂದ! ನಿನಗೆ ತಲೆವಾಗಿಸುವೆನೆನ್ನ ಕ್ಷಮಿಸೆಯ ಬಾಲ? ಎಂದು ಕ್ಷಮಾಯಾಚನೆ ಮಾಡುವುದಾಗಲೀ, ತನ್ನನ್ನು ಮನಸಾರೆ ಶಪಿಸು ಎಂದು ಹೇಳಿದ ದ್ರೋಣಾಚಾರ್ಯನಿಗೆ ಹಿರಣ್ಯಧನು 'ಯಾವೊಂದು ಕೆಲಸವನ್ನೆಸಗಲೆಸಗಿದ ಕೆಡುಕ ಕೊನೆಗದಕೆ ಮುಳುವಹುದು' ಎಂಬ ಎಚ್ಚರಿಕೆಯಾಗಲೀ ಓದುಗರ ಮನಸ್ಸಿನಾಳದಲ್ಲಿ

ಅಚ್ಚೊತ್ತಿ ನಿಲ್ಲುತ್ತವೆ. ಆದರೆ ನಾಟಕದ ಇಂಥ ಅತ್ಯಂತ ಗಂಭೀರವಾದ ಸನ್ನಿವೇಶವನ್ನು ಪೈಯವರು ಅಷ್ಟೇ ತ್ವರಿತಗತಿಯಲ್ಲಿ ನಿರ್ವಹಿಸಿದ್ದು ವಿಮರ್ಶಕರ ಟೀಕೆಗೆ ಒಳಗಾಗಿದೆ ಯೆಂಬುದನ್ನೂ ಗಮನಿಸಬೇಕಾಗಿದೆ. 'ದುರಂತಾನುಭವದ ಗಾಂಭೀರ್ಯವನ್ನು ಪಡೆಯ ಬಹುದಾಗಿದ್ದ ಈ ಸಂದರ್ಭ ಮಕ್ಕಳಾಟಿಕೆಯಂತೆ ನಿರ್ವಹಿತವಾಗಿರುವುದರಿಂದ ಈ ಸಂಶ್ಲಿಷ್ಟ ಸಂದರ್ಭ ಸರಳೀಕರಣಗೊಳ್ಳುತ್ತದೆ. ಇದರಿಂದ ಸಂದರ್ಭದ ಗಂಭೀರತೆ ಯನ್ನಾಗಲೀ ದುರಂತವನ್ನಾಗಲೀ ನಾಟಕೀಕರಿಸುವಲ್ಲಿ ನಾಟಕ ಅಯಶಸ್ವಿ ಯಾಗುತ್ತದೆ.'[೨೦] ಎಂಬ ವಿಮರ್ಶಕರ ಅಭಿಮತ ಗಮನೀಯ.

'ಆರ್ಯರಿನ್ನಾದೊಡಮನಾರ್ಯರನ್ನೊಳಕೈಸಿ ಇಬ್ಬರೊಂದಿಗೆ ಸಿತಾಸಿತೆಯಂತೆ ಹರಿಯೆಲೆಮ ಏಕಲವ್ಯನ ಬೆರಳ ಬೆಲೆ ಬಂತು, ಅಂತಹುದೆ? ಆತನೊಸೆದೆಸೆ ಗಿದಾತ್ಮಾರ್ಪಣಂ ಸಫಲಿಪುದೆ?' ಎಂಬ ಉಕ್ತಿಗಳಲ್ಲಿ 'ಹೆಬ್ಬೆರಳು' ನಾಟಕದ ರಚನೆಯ ಉದ್ದೇಶ ಮತ್ತು ನಿರೀಕ್ಷೆಗಳನ್ನು ಪೈಯವರು ಹುದುಗಿಸಿರುವುದು ಪರಿಭಾವನಾಯೋಗ್ಯ.

ನಾಟಕದುದ್ದಕ್ಕೂ ಕಾಣಿಸುವ ಅನೇಕ ಶ್ಲೇಷೆ, ಅಲಂಕಾರ, ಕಾವ್ಯರಮಣೀಯತೆ ಯಿಂದ ಕೂಡಿದ ಪದಪುಂಜಗಳು ಚಿತ್ತಾಕರ್ಷಕವಾಗಿವೆ. ಏಕಲವ್ಯ ಸಿಳ್ಳು ಹಾಕುತ್ತ 'ಸುಸು ಸೂಸೂ ರುರು ರೂರೂ...' ಎನ್ನುತ್ತ ನಡೆದಾಡುವಲ್ಲಿನಲಯ ಮತ್ತು ಛಂದೋಗತಿಯ ಸೊಗಸುಗಾರಿಕೆ, ಪಾತ್ರೋಚಿತವಾದ ಭಾಷೆಯ ಬಳಕೆ ಇತ್ಯಾದಿಗಳೂ ನಾಟಕದ ಮೌಲ್ಯವನ್ನು ಹೆಚ್ಚಿಸಿವೆ.

ಒಟ್ಟಿನಲ್ಲಿ ಸಾರ್ವಕಾಲಿಕವಾದ ಒಂದು ಜ್ವಲಂತ ಸಮಸ್ಯೆಯನ್ನೆತ್ತಿಕೊಂಡು ಆಕರ್ಷಕವಾದ ರೀತಿಯಲ್ಲಿ ನಾಟಕವನ್ನು ರಚಿಸಿದ ಪೈಯವರು ಜಾತ್ಯತೀತ ಸಮಾಜ ರಚನೆಯತ್ತ ಗಮನ ಹರಿಸಿದ್ದಾರೆಂಬುದೇ ಇಲ್ಲಿ ಪ್ರಧಾನವಾಗಿ ಗಮನಿಸಬೇಕಾದ ಅಂಶ. 'ಹೆರರ ತಮ್ಮುನ್ನತಿಗೆತ್ತಿಕೊಂಬುದೆ ಮಹಾತ್ಮರ ಧರ್ಮ! ಪರರನಡಿಮೆಟ್ಟಿ ದೂರೀಕರಿಸುವುದೆ ದುರಾತ್ಮರ ಕರ್ಮ!' (ಪು.೫೦) ಎಂಬ ಸಂದೇಶ ಸಮಾಜದ ಸ್ವಾಸ್ಥ್ಯವನ್ನು ದೃಷ್ಟಿಯಲ್ಲಿಟ್ಟು ಕೊಂಡ ಮಹಾನ್ ಚಿಂತನೆಯೇ ಆಗಿದೆ.

**ತಾಯಿ**

ಪೈಯವರ ಮೊದಲ ಏಕಾಂಕ ನಾಟಕ 'ತಾಯಿ'. ಇದರಲ್ಲಿ ಮಲ್ಲಿಗೆ, ಸಂಪಿಗೆ ಎಂಬ ಅಕ್ಕತಂಗಿಯರು ಮತ್ತು ತಂಗಿಯ ಮಗು ತುಂಬಿ–ಹೀಗೆ ಮೂರು ಪಾತ್ರಗಳಿವೆ. ಕಾಯಿಲೆ ಪೀಡಿತ ತುಂಬಿಯನ್ನು ಅಕ್ಕ ಮಲ್ಲಿಗೆಯ ಶುಶ್ರೂಷೆಗೆ ಒಪ್ಪಿಸಿ ಸಂತೆಯ ಷೋಕಿಯನ್ನು ಅನುಭವಿಸಲು ಹೊರಡುವ ತಂಗಿಗೆ ಅಕ್ಕ ಹೇಳುವ ಬುದ್ಧಿವಾದ, ತಂಗಿಯ ನಿಷ್ಠುರವಾದ ವರ್ತನೆ, ಅಕ್ಕನಮಾನಸಿಕ ನೋವು, ಸಂಕಟಗಳು, ಕಾಯಿಲೆ ಉಲ್ಬಣಿಸಿ ತುಂಬಿ ತೀರಿಹೋಗುವುದು ನಾಟಕದ ಕಥಾವಸ್ತು.

ವೈಯಕ್ತಿಕ ವಿದ್ವತ್ತಿಗೂ, ಪಾಂಡಿತ್ಯಕ್ಕೂ ನಿದರ್ಶನವಾಗಬಲ್ಲ ನಾಟಕ ಇದಲ್ಲ. ಇದು ಮೊದಲಿಗೆ ಒಂದು ಅನುವಾದ ನಾಟಕವೆಂಬ ವಿಚಾರವಿದ್ದುದು ಅನಂತರ ಸ್ವತಂತ್ರ ನಾಟಕವೆಂದು ಗುರುತಿಸಲಾಯ್ತು. ಈ ನಾಟಕದಲ್ಲಿ ಕಾವ್ಯಸೌಂದರ್ಯ ಹಾಗೂ

ಕಲೆಗಾರಿಕೆಯ ದೃಷ್ಟಿಯಿಂದ ಗಮನ ಸೆಳೆಯುವಂಥ ಅಂಶಗಳು ಅತ್ಯಂತ ಮಿತವಾಗಿವೆ. 'ತನ್ನ ತುಂಟ ಕೂಸು ಚಂಡಿ ಹಿಡಿದು ಅತ್ತಿತೆಂದರೆ ತಾಯಿ ಅದನ್ನು ಬಿಟ್ಟು ಅತ್ತಿತ್ತ ಕದಲದೆ ಅವನ್ನೆತ್ತಿಕೊಂಡು ತನ್ನದೆ ಮುರಕೊಳ್ಳುವುದೂ, ಮಗುವಿಗೆ ಅಸೌಖ್ಯವೆಂದು ಕನಸು ಕಂಡಳೆಂದರೆ ಅತ್ತತ್ತು ತನ್ನ ಕಣ್ಣುಗಳನ್ನು ಸೋರಿಸಿಕೊಳ್ಳುವುದೂ, ಇವಷ್ಟೇ ಆಕೆಯ ಕೆಲಸವಲ್ಲ. ತಾಯಿಗೆ ಬೇರೆಷ್ಟೋ ಕೆಲಸಗಳಿವೆ...' ಎನ್ನುವ ತಂಗಿಯ ವಾದ ಸ್ತ್ರೀವಾದೀಯ ನೆಲೆಯಲ್ಲಿ ಗುರುತಿಸಬಹುದಾದ ಸಾಲುಗಳಾಗಿವೆ. ಸ್ವಾರ್ಥತ್ಯಾಗದಿಂದ ಬದುಕನ್ನು ಸವೆಸುವ, ತಾನು ಇಷ್ಟಪಟ್ಟ ಗಂಡು ತನ್ನ ತಂಗಿಯನ್ನು ಮದುವೆಯಾದಾಗಲೂ ಅದನ್ನು ಸಹಿಸಿ ತಂಗಿಯ ಹೊಟ್ಟೆಯಲ್ಲಿ ಹುಟ್ಟಿದ ತನ್ನ ಪ್ರಿಯಕರನ ಮಗುವಿನ ಲಾಲನೆ ಪಾಲನೆಗಳನ್ನು ಮಾಡುತ್ತ ಯೌವ್ವನದಲ್ಲೇ ತನ್ನನ್ನು ಮುಪ್ಪಿಗೆ ಒಪ್ಪಿಸಿಕೊಂಡು ಬಾಳುವ ಅಕ್ಕನ ನಿರಾಶೆ, ನೋವು, ಔದಾರ್ಯವನ್ನೂ, ಸಂತೆಗೆ ಹೋದರೂ ಕರುಳಿನ ಕರೆಗೆ ತಳಮಳಿಸಿ ಹಿಂತಿರುಗುವ ಸಂಪಿಗೆಯ ತಾಯ್ತನವನ್ನೂ ಹೊರತುಪಡಿಸಿದರೆ ನಾಟಕ ಸುಮಾರಾದ ಅನುಭವವನ್ನು ನೀಡುತ್ತದೆ.

**ಚಿತ್ರಭಾನು ಅಥವಾ ೧೯೪೨**

'ಚಿತ್ರಭಾನು ಅಥವಾ ೧೯೪೨' ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಒಂದು ಏಕಾಂಕ ನಾಟಕ. ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯ ಕಾಲದಲ್ಲಿ ತಮ್ಮ ಕಣ್ಣೆದುರಿಗೇ ಪೋಲೀಸರ ಗುಂಡಿನೇಟಿಗೆ ಬಲಿಯಾಗಿ ಅಸುನೀಗಿದ ಓರ್ವ ಯುವಕನ ದುರಂತಪೈಯವರ ಮನಸ್ಸಿನ ಮೇಲೆ ಉಂಟು ಮಾಡಿದ ಪರಿಣಾಮವೇ ಈ ರಚನೆಗೆ ಪ್ರೇರಣೆ. ಚಳವಳಿಗಾರನಾದ ವೇಣುಗೋಪಾಲನೆಂಬ ಓರ್ವ ಅಮಾಯಕ ಯುವಕ, ಅವನ ತಾಯಿ ಯಶೋದೆ, ಬಾಲ್ಯದ ಗೆಳತಿಯೂ ಯಶೋದೆಯ ಸಾಕುಮಗಳೂ ಆದ ಜಾಹ್ನವಿ–ಈ ಮೂವರ ಸುತ್ತ ಈ ನಾಟಕ ಕೇಂದ್ರೀಕೃತವಾಗಿದೆ. ಮಿತ್ರನೊಬ್ಬನ ನಂಬಿಕೆ ದ್ರೋಹದಿಂದ ನಿರ್ಗತಿಕರಾದ ಒಂದು ಕುಟುಂಬ ದೇಶಾಂತರಗೊಂಡುದನ್ನೂ ಮಗನಿಗೆ ಮದುವೆ ಮಾಡಬೇಕೆಂಬ ಆಸೆ ಹೊತ್ತ ತಾಯಿ ಹಸೆಮಣೆ ಏರಬೇಕಾದ ಮಗನನ್ನು ಸ್ಮಶಾನಕ್ಕೆ ಕಳುಹಿಸಬೇಕಾದ ಸನ್ನಿವೇಶವನ್ನೂ ಅದರ ಪರಿಣಾಮವಾಗಿ ಇಡೀ ಮನೆಯಲ್ಲಿ ನಡೆಯುವ ದುರಂತವನ್ನೂ ನಾಟಕ ಎಳೆಎಳೆಯಾಗಿ ಬಿಚ್ಚಿಡುತ್ತದೆ. ಇಲ್ಲಿ ಯಶೋಧೆಯ ಪಾತ್ರ ಚಿತ್ರಣ ಮನಮುಟ್ಟುವಂತಿದೆ. ಮಗನ ಮೇಲಿನ ಪ್ರೀತಿಯಷ್ಟೇ ದೇಶಭಕ್ತಿಯುಳ್ಳ ಆಕೆ ಪೋಲೀಸರ ಗುಂಡಿನೇಟಿಗೆ ಬಲಿಯಾಗಿ ಅಕಾಲಮೃತ್ಯುವಶನಾದ ವೇಣುಗೋಪಾಲನ ದುರಂತಕ್ಕೆ ಕಣ್ಣೀರ್ಗರೆಯುವ ಜಾಹ್ನವಿಗೆ ಧೈರ್ಯ ಹೇಳುತ್ತಾಳೆ, 'ಅಳಬೇಡ ತಾಯೇ, ವೀರಸ್ವರ್ಗವನ್ನು ಸೇರುವವರಿಗೆ ಅಳಲಾಗದು.' ಯಶೋದೆಯ ದೈವಭಕ್ತಿಯೂ ಅಷ್ಟೇ ಹಿರಿದಾದುದು. ಮಗನನ್ನೂ, ಸಾಕುಮಗಳು ಜಾಹ್ನವಿಯನ್ನೂ ಏಕಕಾಲದಲ್ಲಿ ಕಳೆದು ಕೊಂಡ ಆಕೆಯನ್ನು ಕೊತ್ವಾಲ ರಾಮದಯಾಲ 'ನೀನು ಒಬ್ಬಳೇ ಆದಿಯಲ್ಲ ತಾಯಿ, ನಿನಗಿನ್ನು ಯಾರಿದ್ದಾರೆ?' ಎಂದು ಕೇಳಿದಾಗ 'ದೇವರಿಲ್ಲವೆ ನನ್ನ ಜತೆಗೆ' ಎನ್ನುತ್ತಾಳೆ. ಅವಳ ಧೈರ್ಯ, ಸಹನೆ, ಕಷ್ಟಸಹಿಷ್ಣುತೆ, ದೈವಭಕ್ತಿ ಅನುಸರಣೀಯ. ಯುದ್ಧದ ದಿನಗಳಲ್ಲಿ

ಸಾಮಾನ್ಯ ಜನವರ್ಗ ಅನುಭವಿಸುವ ಸಾವು, ನೋವು, ಕಷ್ಟ ನಿಷ್ಠೂರಗಳನ್ನು ನಿರೂಪಿಸುವುದರೊಂದಿಗೆ ಕ್ರೌರ್ಯ, ದೌರ್ಜನ್ಯಗಳ ಸಾಕಾರ ಸ್ವರೂಪ ರೆನಿಸಿದ ಪೊಲೀಸರೊಳಗಿರಬಹುದಾದ ಮಾನವೀಯ ಅಂಶಗಳನ್ನು ಅನಾವರಣ ಮಾಡುವುದೂ ಲೇಖಕರ ಉದ್ದೇಶವೆಂದು ವ್ಯಕ್ತವಾಗುತ್ತದೆ.

'ಚಿತ್ರಭಾನು' ಒಂದು ರೀತಿಯ ಪದ್ಯ ನಾಟಕ. ಕೆಲವೇ ಗಂಟೆಗಳ ಕಾಲದಲ್ಲಿ ನಡೆಯುವ ಈ ನಾಟಕದಲ್ಲಿ ಕವಿ ಭಾರತದ ಪ್ರಪಂಚವನ್ನೇ ತೆರೆದು ತೋರಿಸಿದ್ದಾರೆ. ಭಾರತದ ಎಂದಿನ ಇತಿಹಾಸ, ಬಲ ದೌರ್ಬಲ್ಯ, ಭಾರತ ಅಸ್ವತಂತ್ರವಾಗಲು ಕಾರಣ, ಮಹಾತ್ಮರ ನೇತೃತ್ವದಲ್ಲಿ ನಡೆದ ಸಂಗ್ರಾಮ, ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಅನುಸರಿಸಬೇಕಾದ ಮಾರ್ಗ ಇವೆಲ್ಲವೂ ಈ ನಾಟಕದ ಒಡಲಲ್ಲಿ ಚಿತ್ರಿತವಾಗಿವೆ. ಇದರ ಶೈಲಿಯನ್ನು ಕುರಿತು 'ಈ ನಾಟಕದ ಭಾಷೆಯಲ್ಲಿ ಒಂದು ಸೊಬಗು ಇದೆ. ಸೊಗಸಾದ ಕಾವ್ಯದ ನವಿರು ಹೊಗರು ಇದೆ. ನಾಣ್ಣುಡಿಗಳೂ ಗಾದೆ ಮಾತುಗಳೂ ಹೋಲಿಕೆಗಳೂ ... ಚಮತ್ಕಾರವೂ ಕೇಸರಿಬಾತಿನಲ್ಲಿ ಸಿಕ್ಕುವ ದ್ರಾಕ್ಷಿ ಬಾದಾಮಿಗಳಂತೆ ಮಾತು ಮಾತಿಗೆ ದೊರಕುತ್ತವೆ. ಇವನ್ನು ನೋಡಿದರೆ ನಿಜವಾದ ಕವಿಯ ಕೈಯಲ್ಲಿ ಕನ್ನಡಭಾಷೆ ಎಷ್ಟು ಸಂಪದ್ಯುಕ್ತವೂ, ಹೃಷ್ಟಪುಷ್ಟವೂ ತೇಜಸ್ವಿಯೂ ಸುಗಂಧಪೂರಿತವೂ ಶಕ್ತಿಯುತವೂ ಆಗಿದೆಯೆಂಬುದು ಗೊತ್ತಾಗುತ್ತದೆ.'[೩೧] ಎನ್ನುವ ಗೊರೂರು ರಾಮಸ್ವಾಮಿ ಅಯ್ಯಂಗಾರ್ ರವರ ಮೆಚ್ಚುಗೆ ಯಥಾರ್ಥವಾಗಿದೆ.

**ನೋ ನಾಟಕಗಳು**

ಜಪಾನಿನಲ್ಲಿ ಪ್ರಸಿದ್ಧವಾಗಿರುವ ನಾಟಕ ಪರಂಪರೆಗಳಲ್ಲಿ ನೋ, ಬೊಂಬೆಗಳ ನಾಟಕ, ಗೀತ ನಾಟಕ ಮತ್ತು ಆಧುನಿಕ ನಾಟಕಗಳೆಂಬ ನಾಟಕ ಪ್ರಕಾರಗಳಿದ್ದು ೧೯೪೬ ರಿಂದ ೫೧ರ ಅವಧಿಯಲ್ಲಿ ಗೋವಿಂದ ಪೈಯವರು 'ಕಾಯೊಯ್ ಕೊಮಾಚಿ,' 'ಹಾಗೋರೋಮೊ,' 'ಕುಮಸಾಕಾ,' 'ತ್ಸುನೆಮಾಸಾ,' 'ಸೂಮಾಗೆಂಜಿ,' 'ಚೊರಿಯೋ,' 'ಶೋಚೋ,' ಮತ್ತು 'ಸೋತೋಬಾ ಕೊಮಾಚಿ' ಎಂಬ ಎಂಟು ಜಪಾನೀ ನೋ ನಾಟಕಗಳನ್ನು ಅನುವಾದಿಸಿದ್ದಾರೆ. 'ನೋ' ಎಂದರೆ 'ಪ್ರತಿಭೆ', 'ಪ್ರತಿಭಾ ಪ್ರದರ್ಶನ' ಅಥವಾ 'ಸಾಧನೆ' ಎಂದು ಅರ್ಥ. ಇದಕ್ಕೆ 'ಸರುಗಾಕು' ಎಂಬ ಹೆಸರಿದ್ದು ಅದರ ಅರ್ಥ 'ವಾನರಸಂಗೀತ.'

ನೋ ನಾಟಕಗಳು ಅತ್ಯಂತ ಚಿಕ್ಕ ನೃತ್ಯರೂಪಕಗಳಾಗಿದ್ದು ಇವುಗಳಲ್ಲಿ ನಾಟಕೀಯತೆಗಿಂತ ಒಂದು ಘಟನೆಯನ್ನು ಭಾವಗೀತಾತ್ಮಕವಾಗಿ ಅಭಿವ್ಯಕ್ತಿಸುವ ಕ್ರಿಯೆ ಕಾಣಿಸುತ್ತದೆ. ಸಂಗೀತ, ನೃತ್ಯಗಳೆಲ್ಲ ಸೇರಿ ಸುಮಾರು ಒಂದು ಗಂಟೆ ನಡೆಯುವ ಈ ನಾಟಕದಲ್ಲಿ ಅಭಿನಯಿಸುವವರೆಲ್ಲ ಪುರುಷರೇ. ಮುಖ್ಯಪಾತ್ರವನ್ನು 'ಶೀತೆ'ಯೆಂದೂ ಉಪಪಾತ್ರವನ್ನು 'ವಾಕಿ' ಎಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಎರಡು ಪಾತ್ರಗಳಿರುವ ನೋ ನಾಟಕದಲ್ಲಿ ಹೆಚ್ಚೆಂದರೆ ಆರು ಪಾತ್ರಗಳಿರುತ್ತವೆ... ಮರದಿಂದ ಮಾಡಿದ ಬಣ್ಣದ ಮುಖವಾಡಗಳನ್ನು 'ಶೀತೆ' ಮತ್ತು ಅವನ ಅನುಯಾಯಿಗಳು ಹಾಕಿಕೊಳ್ಳುತ್ತಾರೆ... ಮುಖ್ಯವಾಗಿ ಐದು ತೆರನಾದ ಮುಖವಾಡಗಳು ಬಳಕೆಯಾಗುತ್ತವೆ... ಪೋಷಾಕುಗಳನ್ನು

ಪಾತ್ರಗಳ ಗಾಂಭೀರ್ಯಕ್ಕನುಗುಣವಾಗಿ ರೂಪಿಸಿರಲಾಗುತ್ತದೆ. ಅವು ಅತಿ ಶ್ರೀಮಂತವೂ ವರ್ಣಮಯ ವಿನ್ಯಾಸವುಳ್ಳವೂ ಆಗಿರುತ್ತವೆ. ಪಾತ್ರಗಳು ಬಳಸುವ ವಸ್ತುಗಳಲ್ಲಿ ಮುಖ್ಯವಾದದ್ದು ಬಣ್ಣದ ಪುಟ್ಟ ಬೀಸಣಿಗೆ. ಅದನ್ನು ಚಂದ್ರೋದಯ, ಬೀಳುವ ಮಳೆ, ಬೀಸುವ ಗಾಳಿ, ಬದಲಾದ ಭಾವನೆಗಳನ್ನು ಸೂಚಿಸಲು ಬಳಸಲಾಗುತ್ತದೆ. ಈ ನಾಟಕದ ರಂಗಸಜ್ಜಿಕೆ ಸರಳವಾದದ್ದು; ಮರದ ಅಥವಾ ಬೊಂಬಿನ 'ನಿಲುವು' ಸಂದರ್ಭಾನುಸಾರವಾಗಿ ಪರ್ವತ, ಅರಮನೆ, ಮಲಗುವ ಕೋಣೆ ಅಥವಾ ಬೇರೆ ಯಾವುದಾದರೂ ಸ್ಥಳವನ್ನು ಸೂಚಿಸುತ್ತದೆ. ಈ ನಾಟಕದಲ್ಲಿ ಗೊಂದಳದವರು ಕಥೆ ಹೇಳುತ್ತಾರೆ. ನಟನ ಮಾತುಗಳನ್ನು ಹೇಳುವುದೂ ಹಾಡುವುದೂ ಅವರೆ. ನಟ ನೃತ್ಯ ಮಾಡುತ್ತಾನೆ. ಪ್ರತಿಯೊಂದು ನಾಟಕವೂ ಒಂದು ನೃತ್ಯದಿಂದ ಕೊನೆಯಾಗುತ್ತದೆ. ಸನ್ನಿವೇಶದ ಸತ್ವವನ್ನು ಅಥವಾ ಭಾವನೆಯ ತಿರುಳನ್ನು ಸಂವಹನಗೊಳಿಸುವುದು ನಾಟಕದ ಉದ್ದೇಶವಾಗಿದ್ದು ನೋ ನಾಟಕದ ಒಟ್ಟು ಪರಿಣಾಮ, ಒಂದು ಧಾರ್ಮಿಕ ಪ್ರಕ್ರಿಯೆಯ ಪರಿಣಾಮದಂತಿರುತ್ತದೆ.'[೩೨] ಮಾತುಗಳಲ್ಲಿ ವ್ಯಂಜಿಸುವ ಶ್ಲೇಷೆ, ಅಂತರಾರ್ಥ, ಅವಧಾರಣೆಗಳು ಇಲ್ಲಿ ಮುಖ್ಯ. ಧ್ವನಿ ಮತ್ತು ಪ್ರತಿಮಾತ್ಮಕವಾಗಿರುವುದೇ ಹೆಚ್ಚು. ಇಂಥ ನಾಟಕಗಳನ್ನು ಅನುವಾದಿಸುವುದು ಬಹಳ ಕಷ್ಟವಾದ ಸಾಧನೆ. 'ಜಪಾನೀ ಭಾಷೆಯ ಯಾವುದೇ ಕೃತಿಯ ಅನುವಾದದಲ್ಲಿ, ಐರೋಪ್ಯ ಸಾಹಿತ್ಯದಲ್ಲಿ ಅನುವಾದದಲ್ಲಿ ಅಷ್ಟಾಗಿ ಎದುರಾಗದಿರುವ ಸಮಸ್ಯೆಗಳನ್ನು ಎದುರಿಸುವ ಸಂಭವವಿರುತ್ತದೆ. ಅದರಲ್ಲಿಯೂ 'ನೋ' ನಾಟಕಗಳು ಬಹುಮಟ್ಟಿಗೆ ಅಲಂಘ್ಯವಾಗಿರುವಂಥ ಸಂಕಷ್ಟಗಳನ್ನು ಒಡ್ಡುತ್ತದೆ. ಸುಶಿಕ್ಷಿತನಾಗಿರುವ ಜಪಾನೀಯನಿಗೆ ಕೂಡ ನಾಟಕದ ಪದ್ಯಭಾಗಗಳು ಅರ್ಥವಾಗುವುದು ತುಂಬ ಕಷ್ಟ.'[೩೩] ಇಂಥ ಕಷ್ಟಸಾಧ್ಯವಾದ ಕಾರ್ಯದಲ್ಲಿ ಕೈಹಾಕಿ ಪೈಯವರು ಅತ್ಯಪೂರ್ವ ಯಶಸ್ಸನ್ನು ಸಾಧಿಸಿದ್ದಾರೆ.ಇದಕ್ಕಾಗಿ ಅವರು ಜಪಾನೀ ಭಾಷೆಯನ್ನು ಅಧ್ಯಯನ ಮಾಡಿ ಎಲ್ಲ ನಾಟಕಗಳನ್ನೂ ಮೂಲದಿಂದಲೇ ಅನುವಾದಿಸಿದ್ದಾರೆಂಬುದೂ ಮುಖ್ಯ. ಈ ಅನುವಾದಗಳನ್ನು ಇಂಗ್ಲಿಷ್ ಆವೃತ್ತಿಗಳೊಂದಿಗೆ ತುಲನೆ ಮಾಡಿದ ಪ್ರಧಾನ್ ಗುರುದತ್ತರವರು 'ಡೊನಾಲ್ಡ್ ಕೀನ್ ಮತ್ತು ಆರ್ಥರ್ ವ್ಯಾಲೇ ಮುಂತಾದವರ ಶಿಷ್ಟ ಅನುವಾದಗಳ ಬೆಳಕಿನಲ್ಲಿ ಪರೀಕ್ಷಿಸಿದಾಗ ಪೈಯವರ ಅನುವಾದ ನಿರಾಶೆಯನ್ನುಂಟು ಮಾಡಿದರೂ ಕನ್ನಡ ಸಾಹಿತ್ಯಕ್ಕೆ ಈ ಹೊಸ ಆಯಾಮವನ್ನು ಜೋಡಿಸಿದ ಅವರ ಕೀರ್ತಿಗೆ ಕುಂದನ್ನೇನೂ ತಾರವು.'[೩೪] ಎಂಬ ಮಾತುಗಳು ಮನನೀಯವಾಗಿವೆ.

**ಪ್ರಭಾಸ**

ಮರಾಠಿ ಭಾಷೆಯ ಪತ್ರಿಕೆಯೊಂದರಲ್ಲಿ ಪ್ರಕಟವಾಗಿದ್ದ ಬಂಗಾಳಿ ಲೇಖಕ ನವೀನ್ ಚಂದ್ರ ಸೇನರೆಂಬವರ ರೈವತಕ, ಕುರುಕ್ಷೇತ್ರ ಮತ್ತು ಪ್ರಭಾಸ ಎಂಬ ಮೂರು ಮಹಾಕಾವ್ಯಗಳಿಂದ ಯಾದವಕುಲದ ಕೊನೆಯನ್ನು ಕುರಿತ ಆಯ್ದ ಕೆಲವು ಸರ್ಗಗಳ ಗದ್ಯಾನುವಾದದಿಂದ ಆಕರ್ಷಿತರಾದ ಪೈಯವರು ಅದನ್ನು ಮೂಲದಲ್ಲೇ ಆಸ್ವಾದಿಸಬೇಕೆಂದು ಬಂಗಾಲಿಯಲ್ಲೇ ಓದಿ ಮನಸೋತು ಕನ್ನಡದಲ್ಲಿ ಭಾವಾನುವಾದ

ಮಾಡಬೇಕೆಂಬ ನಿಶ್ಚಯವನ್ನು ಮಾಡಿ ತಮ್ಮ ಸಾಕುತಾಯಿ ಸುಬ್ಬಮ್ಮನವರ ನೆನಪಿಗೆ ಬರೆಯತೊಡಗಿದರೂ ಕಾರ್ಯಭಾರಗಳ ಒತ್ತಡ, ಅನಾರೋಗ್ಯ, ವಯಸ್ಸು ಈ ಎಲ್ಲ ಕಾರಣಗಳಿಂದಾಗಿ ಕೃತಿ ಅಪೂರ್ಣ ಸ್ಥಿತಿಯಲ್ಲೇ ಉಳಿಯುವಂತಾಯ್ತು. ಅಪೂರ್ವವಾದ ಈ ಕಾವ್ಯಭಾವ ಆದಿಪ್ರಾಸರಹಿತವಾಗಿದ್ದರೂ ಇದರಲ್ಲಿ ವರ್ಣನೆ, ಅಲಂಕಾರ, ಪ್ರಾಸಬದ್ಧತೆಗಳಿಂದ ಆಕರ್ಷಕವಾಗಿರುವ ಅನೇಕ ಸಾಲುಗಳಿವೆ. ಸಮುದ್ರ ವರ್ಣನೆ, ಪ್ರಕೃತಿ ವರ್ಣನೆ, ರಾತ್ರಿಯ ನೀರವ ವಾತಾವರಣದಲ್ಲಿ ಸಾಗುವ ನೌಕಾಯಾನದ ವರ್ಣನೆ ತುಂಬ ಆಪ್ಯಾಯಮನವಾಗಿವೆ.

'ಪ್ರಭಾಸ'ದ ಸಾಲುಗಳು ಹೇಗೆ ಆಸ್ವಾದ್ಯವಾಗುತ್ತವೆ ಎಂಬುದಕ್ಕೆ ಈ ಕೆಲವು ತುಣುಕುಗಳನ್ನು ಸವಿಯಬಹುದು: '... ತೆಂಗಾಳಿ ಸುಯ್ಯ ಸುಯ್ಯನೆ ಕೊಳಲನೂದುತಿರೆ, ತೆರೆಯೋಳಿ ದುಮ್ಮದುಮ್ಮನೆ ಮುರಜ ಬಡೆಯುತಿರೆ, ಬಾನಲುಲ್ಕಾಗಣಂ ಮಿರಮಿರನೆ ನಲಿಯುತಿರೆ, ನೀರ್ಗಳಲಿ ತಣಕತಣಕೆನೆ ಮೀಂಗಳಾಡುತಿರೆ, ಶೃಂಗೇಂದು ಮೆಚ್ಚಿ ಬಿನ್ನಾನೆ ತಲೆದೂಗುತಿರೆ, ಕಾಲನದ ನೋಡುತಂಗೈಯ್ಯೊಳಗೆ ನಗುತಲಿರೆ...', '... ತಿಂಗಳಿನ ಗೆಳೆಯ, ಬಿಸು ದೇಶದಲಿ ಕಪ್ಪಾಗಿ, ಧ್ರುವಗಳಲಿ ಹೆಪ್ಪಾಗಿ, ಜೀವನದೊಳುಪ್ಪಾಗಿ, ಕಾಲನಂ ಕಪ್ಪಾಗಿ, ನಿತ್ಯತೆಯ ನೆಪ್ಪಾಗಿ, ಮೇದಿನಿಯೊಳೊಪ್ಪಾಗಿ ಎನಿತುದ್ದ ಎನಿತಗಲ ಎನಿತಾಳ ಬಳಸಿ ನೀ ಕೋಟೆಯಂ ಕಾರಿಗೆಯ ತೆರದಿಂದ ಪಾರಪಾರಾವಾರ ಕಾವೆ!'

**ಇತರ ಅನುವಾದ**

ಗೋವಿಂದ ಪೈಯವರು ಇಂಗ್ಲಿಷ್, ಉರ್ದು, ಜರ್ಮನ್, ಜಪಾನೀ, ಪರ್ಶಿಯನ್, ಪಾಲೀ, ಪ್ರಾಕೃತ, ಬಂಗಾಲಿ, ಮರಾಠಿ – ಹೀಗೆ ಸುಮಾರು ಒಂಬತ್ತು ಭಾಷೆಗಳಿಂದ ಅನುವಾದವನ್ನು ಮಾಡಿರುವುದಾಗಿ ತಿಳಿದುಬರುತ್ತದೆ. ಲೇಖಕರು ಅನುವಾದವೆಂದು ಸ್ಪಷ್ಟವಾಗಿ ಹೇಳದಿರುವ ಸ್ವತಂತ್ರ ಕೃತಿಗಳಲ್ಲೂ ಸಾಕಷ್ಟು ಅನುವಾದಗೊಂಡ ಭಾಗಗಳಿವೆ ಎಂಬುದಾಗಿ ಪೈಯವರ ಅನುವಾದ ಕೃತಿಗಳನ್ನು ಕುರಿತು ಬರೆದಿರುವ ಪ್ರಧಾನ್ ಗುರುದತ್ತ ಅವರು ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.[೩೫] ೧೮೯೮ರಲ್ಲಿ ಷೇಕ್ಸ್‌ಪಿಯರ್‌ನ 'ಟ್ವೆಲ್ತ್ ನೈಟ್' ನಾಟಕದ ಮೊದಲನೆಯ ಅಂಕದ ಕೆಲವು ನೋಟಗಳನ್ನು ಅನುವಾದಿಸುವುದರಿಂದ ಪೈಯವರು ನಿರಂತರವಾಗಿ ತಮ್ಮನ್ನು ಅನುವಾದ ಕಾರ್ಯದಲ್ಲಿ ತೊಡಗಿಸಿಕೊಂಡೇ ಬಂದಿದ್ದಾರೆ. ಕೃತಿ ರೂಪದಲ್ಲಿ ಪ್ರಕಟವಾಗದ ಅನೇಕ ಲೇಖನಗಳಂತೆ ನಿಯತಕಾಲಿಕೆ, ವಿಶೇಷಾಂಕ ಮತ್ತು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಅವರ ಅನುವಾದಗಳೂ ಕಾಲಗರ್ಭದಲ್ಲಿ ಮರೆಯಾಗಿರುವ ಸಾಧ್ಯತೆಗಳಿವೆ.

ಗೋವಿಂದ ಪೈಯವರ ಒಟ್ಟು ಅನುವಾದಗಳನ್ನು ಧರ್ಮಶಾಸ್ತ್ರ, ಕವಿತೆ ಮತ್ತು ನಾಟಕಗಳೆಂದು ವರ್ಗೀಕರಿಸಬಹುದು. ಪದ್ಮಜಿನೇಶ್ವರ ಸೂರಿಯ ಪ್ರಾಕೃತಭಾಷೆಯಲ್ಲಿ ರಚಿತವಾದ ಕವಿತೆಯ ಅನುವಾದ 'ಉಪದೇಶ ರತ್ನಮಾಲೆ'. ರಸೆಲ್ ಕವಿಯ ಕವನವೊಂದರ ಗದ್ಯಾನುವಾದ 'ಕೃಷ್ಣ', ನವೀನಚಂದ್ರಸೇನರ ಬಂಗಾಲೀಕಾವ್ಯ 'ಕುರುಕ್ಷೇತ್ರ'ದ ಅನುವಾದವೆನ್ನಲಾದ 'ನಾರೀಧರ್ಮ,' ಪಾಲಿಯಲ್ಲಿರುವ ಬೌದ್ಧಸೂತ್ರಗಳ ಗದ್ಯಾನುವಾದ

'ಸಿಗಾಲಸುತ್ತ,' ಬುದ್ಧನ ಬೋಧನೆಯನ್ನೊಳಗೊಂಡ 'ಸುತ್ತನಿಪಾತ' ದಲ್ಲಿಯ ಒಂದು ಸೂಕ್ತದ ಅನುವಾದ 'ಉರಗಸೂಕ್ತ,' ಜೀನ್ಪಾಲ್ ರಿಕ್ಟರ್ ಎಂಬ ಜರ್ಮನ್ ಬರಹವನ್ನು ಆಧರಿಸಿದ ತಾತ್ವಿಕ ವಿಚಾರ 'ಎರಡು ದಾರಿಗಳು' ಇವೆಲ್ಲ ಧರ್ಮ–ತತ್ವಗಳಿಗೆ ಸಂಬಂಧಿಸಿದ ಅನುವಾದಗಳಾದರೆ 'ಗಿಳಿವಿಂಡು'ವಿನಲ್ಲಿರುವ ಅನೇಕ ಕವಿತೆಗಳು, 'ಪ್ರಭಾಸ' ಇವೆಲ್ಲ ಸೃಜನಶೀಲ ಸಾಹಿತ್ಯದ ಅನುವಾದ ರಚನೆಗಳಾಗಿವೆ. 'ಪೈಯವರ ಅನುವಾದ ಮೂಲಕ್ಕೆ ತೀರ ಸಮೀಪವಾಗಿದ್ದು ಮನಸ್ಸಿಗೆ ಸಮಾಧಾನವನ್ನು ನೀಡುತ್ತದೆ'[೬] ಎನ್ನುತ್ತಾರೆ. ಡಾ. ಪ್ರಭುಶಂಕರ ಅವರು. ಉಮರ್ ಖಯಾಮನ ೫೦ ರೂಬಾಯಿಗಳನ್ನು ಪೈಯವರು ಇಂಗ್ಲಿಷ್‌ನ ಫಿಟ್ಜೆರಾಲ್ಡ್ ಅನುವಾದವನ್ನು ಆಧರಿಸಿ ಅನುವಾದಿಸಿದ್ದಾರೆ. ಪೈಯವರ ಅನುವಾದ ಸಾಕಷ್ಟು ಯಶಸ್ವಿಯಾದರೂ ಅವರ ವಿಶಿಷ್ಟ ಪದಪ್ರಯೋಗಗಳ ಕಾರಣ ಕೆಲವೊಮ್ಮೆ ಅರ್ಥವಿಸಲು ಬಾಧಕವಾಗುತ್ತದೆಂಬುದು ಸಹೃದಯರ ಅಭಿಪ್ರಾಯ.

**ಭಾಗ – ೨ : ಸಂಶೋಧನ ಸಾಹಿತ್ಯ**

ಪಾಶ್ಚಾತ್ಯ ವಿದ್ವಾಂಸರುಗಳಾದ ರೆವರೆಂಡ್ ಎಫ್. ಕಿಟ್ಟೆಲ್ ಮತ್ತು ಬಿ.ಎಲ್. ರೈಸ್ ಕನ್ನಡದ ಸಾಹಿತ್ಯ ರೂಪುರೇಖೆಗಳನ್ನು ಪರಿಚಯಿಸಿದಂದಿನಿಂದ ಕನ್ನಡದಲ್ಲಿ ಸಂಶೋಧನೆಯ ವ್ಯವಸಾಯ ಆರಂಭವಾಯ್ತು. ಕರ್ನಾಟಕಕ್ಕೆ ಸಂಶೋಧನಾ ಶಾಸ್ತ್ರ ಪರಿಚಯವಾಗುವ ಪೂರ್ವದಲ್ಲೇ ಗೋವಿಂದ ಪೈಯವರು ಅತ್ಯಂತ ಶ್ರೇಷ್ಠ ಸಂಶೋಧಕರಾಗಿದ್ದರು. ತಮ್ಮ ಸಂಶೋಧನೆಗಾಗಿ ಅನ್ಯಭಾಷೆಗಳಿಂದಲೂ ಅಪಾರವಾದ ಸಂಶೋಧನ ಸಾಮಗ್ರಿಗಳನ್ನು ಕಲೆಹಾಕಿರುವುದರಿಂದ ಯಾವ ಮಾಹಿತಿ ಬೇಕಿದ್ದರೂ ಅದರ ಮೂಲಕ್ಕೇ ಹೋಗಿ ಶೋಧಿಸುವುದು ಪೈಯವರ ಜಾಯಮಾನ. 'ನಾಮೂಲಂ ಲಿಖ್ಯತೇ ಕಿಂಚಿತ್, ನಾನಪೇಕ್ಷಿತಮುಚ್ಯತೇ' (ಆಧಾರವಿಲ್ಲದ್ದನ್ನು ಒಂದಿಷ್ಟೂ ಬರೆಯುವುದಿಲ್ಲ, ಅನಪೇಕ್ಷಿತವಾದುದನ್ನು ಹೇಳುವುದಿಲ್ಲ – ಮಲ್ಲಿನಾಥ ಸೂರಿ) ಎಂಬ ಧೋರಣೆ ಸಂಶೋಧನೆ ಕ್ಷೇತ್ರಕ್ಕೆ ಅಕ್ಷರಶಃ ಅನ್ವಯವಾಗುವ ಮಾತು. ಪೈಗಳ ಸಂಶೋಧನ ವಿಧಾನ ಈ ರೀತಿಯದ್ದು. ೧೯೨೬ರಿಂದ ೧೯೬೩ರವರೆಗೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಅವರು ಬರೆದ ಸಂಶೋಧನ ಲೇಖನಗಳ ಸಂಖ್ಯೆ ಸು. ೨೦೦ ದಾಟಿದೆ. ಸಾಮಾನ್ಯವಾಗಿ ವಿದ್ವಾಂಸರು ತಮಗೆ ಆಸಕ್ತಿಯ ಒಂದೊಂದು ಕ್ಷೇತ್ರದಲ್ಲಿ ಅಧ್ಯಯನ, ಸಂಶೋಧನೆಗಳನ್ನು ಕೈಗೊಂಡರೆ ಪೈಯವರು ಅದು ಹೇಗೆ ಯಾವ ಪ್ರತಿಫಲಾ ಪೇಕ್ಷೆಯೂ ಇಲ್ಲದೆ ಇಂಥ ಗುರುತರವಾದ ಘನವಾದ, ವೈವಿಧ್ಯಪೂರ್ಣವಾದ, ಅಗಾಧವಾದ ಮಹಾಯಜ್ಞಕ್ಕೆ ತಮ್ಮನ್ನು ಒಪ್ಪಿಸಿ ಯಶಸ್ವಿಯಾದರೋ ಅರ್ಥವಾಗುವುದಿಲ್ಲ. ಇದು ಅವರ ಅನನ್ಯವಾದ ಸಾಹಿತ್ಯೋಪಾಸನೆಯಿಂದ ಲಭ್ಯವಾದ ತಪಶ್ಶಕ್ತಿಯ ಫಲವಲ್ಲದೆ ಇನ್ನೇನು?

ಸಂಶೋಧನೆಯ ವಿಚಾರದಲ್ಲಿ ಗೋವಿಂದ ಪೈಯವರು ಒಂದು ಸಾಗರವಿದ್ದಂತೆ. ಸಾಗರದ ಆಳ, ಅಗಲಗಳನ್ನು ತಿಳಿಯುವುದು ಎಷ್ಟು ಕಷ್ಟಸಾಧ್ಯವೋ ಪೈಯವರ ಜ್ಞಾನದ ಆಳ, ಅಗಲಗಳನ್ನು ಅರ್ಥಮಾಡುವುದೂ ಅಷ್ಟೆ ಕಷ್ಟಸಾಧ್ಯ. ಅವರು ಸಂಶೋಧನೆಗೆ ಆಯ್ಕೆ ಮಾಡುವ ವಿಷಯ ಮತ್ತು ವ್ಯಾಪ್ತಿ, ಅವುಗಳನ್ನು ವಿಶ್ಲೇಷಿಸಿ ನಿರೂಪಿಸುವ ಮಾತಿನ

ಅರ್ಥಭಾರ, ನಿರ್ಭೀತಿ ಅಚ್ಚರಿ ಮೂಡಿಸುತ್ತದೆ. ನಾಡು, ನುಡಿ, ಕವಿ, ಸಾಹಿತ್ಯ, ಇತಿಹಾಸ, ಧರ್ಮ, ಜ್ಯೋತಿಷ್ಯ, ರಾಜಕೀಯ ಈ ಎಲ್ಲ ಕಡೆಗೂ ಪೈಯವರ ಸಂಶೋಧನೆಯ ಕಬಂಧಬಾಹುಗಳು ಚಾಚಿವೆ. ಪಂಪಪೂರ್ವಯುಗದ ಪೂರ್ವದ ಹಳೆಗನ್ನಡದಿಂದ ಹೊಸಗನ್ನಡದ ದಕ್ಷಿಣ ಕನ್ನಡ ಜಿಲ್ಲೆಯ ಪಾರ್ತಿಸುಬ್ಬನವರೆಗೂ ನಾಡು ನುಡಿ ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಯ ಹರಹಿದೆ. ಚರಿತ್ರೆಗೆ ಸಂಬಂಧಿಸಿದಂತೆ ತುಳುನಾಡಿನಿಂದ ಕನ್ನಡದ ಪ್ರಾಚೀನ ರಾಜವಂಶಗಳಿಗೂ ತಲೆಹಾಕಿ ಭಾರತದ ಚರಿತ್ರೆಯನ್ನೂ ಜಾಲಾಡಿದ್ದಾರೆ. ಭಾರತದಲ್ಲಿ ಪ್ರಚಲಿತವಾಗಿರುವ ಎಲ್ಲ ಧರ್ಮಕ್ಕೂ ಅವರು ತಮ್ಮ ಸಂಶೋಧನೆಯ ಪಾತಾಳಗರಡಿಯನ್ನು ಹಾಕಿದ್ದಾರೆ. ಭಾಷೆಗೆ ಸಂಬಂಧಿಸಿದಂತೆ ಶಬ್ದಗಳ ರೂಪನಿಷ್ಪತ್ತಿ, ಸ್ಥಳನಾಮಗಳ ವಿವೇಚನೆ, ಛಂದೋಪ್ರಕಾರಗಳ ಅಧ್ಯಯನ–ಪ್ರತಿಯೊಂದನ್ನೂ ತಲಸ್ಪರ್ಶಿಯಾಗಿ ಶೋಧಿಸಿದ್ದಾರೆ. ಸಂಶೋಧಕನಲ್ಲಿರಬೇಕಾದ ವಿದ್ವತ್ತು, ಗ್ರಹಣಶಕ್ತಿ, ವಿವೇಚನಾ ಸಾಮರ್ಥ್ಯ, ಹರಿತವಾದ ತರ್ಕಸರಣಿ, ಸ್ಮರಣಶಕ್ತಿ, ವಸ್ತುನಿಷ್ಠತೆ, ಪ್ರಮಾಣಿಕತೆ, ವಿಚಿಕಿತ್ಸಕ ಬುದ್ಧಿಮತ್ತೆ, ಪ್ರೌಢಿಮೆ, ನಿಷ್ಠೆ ಎಲ್ಲವೂ ಅವರಲ್ಲಿ ಅದ್ಭುತವಾಗಿ ನೆಲಸಿವೆ. ಪ್ರತಿಯೊಂದು ವಿಷಯವನ್ನೂ ಆಳವಾಗಿಯೂ ವಿಶಾಲವಾಗಿಯೂ ಅಧ್ಯಯನ ಮಾಡಿ ಅದರ ಸರ್ವ ಅವಯವಗಳನ್ನೂ ಪರಿಶೋಧನೆಯ ನಿಕಷಮತಿಗೆ ಒರೆಹಚ್ಚಿ ತೀರ್ಮಾನಕ್ಕೆ ಬರುವ ಗೋವಿಂದ ಪೈಯವರು ಅಷ್ಟೇ ಗೌರವ ಮತ್ತು ವಿನಯಪೂರ್ವಕವಾಗಿ ತಮ್ಮ ಅಭಿಪ್ರಾಯಗಳನ್ನು ಪುನರ್ಪರಿಶೀಲಿಸಿ ತಿದ್ದಿಕೊಳ್ಳಬಲ್ಲರು. ಇತರರ ಅಭಿಪ್ರಾಯಗಳನ್ನೂ ಅಷ್ಟೇ ಗೌರವದಿಂದ, ಸ್ಥಿತಪ್ರಜ್ಞತೆಯಿಂದ ಒಪ್ಪಿಕೊಳ್ಳಬಲ್ಲರು. ಅತಿ ಸಾಮಾನ್ಯವೆಂದು ತೋರುವ ಅಲಕ್ಷಿಸಬಹುದಾದ ವಿಚಾರದಲ್ಲೂ ತಮ್ಮ ನಿಕಷಮತಿಯನ್ನು ಹರಿಯಿಸಿ ಅದರ ಹುಟ್ಟನ್ನು ಶೋಧಿಸಬಲ್ಲವರು. ಆದರೆ ತಮ್ಮ ಅಭಿಪ್ರಾಯಗಳನ್ನು ಯಾರಾದರೂ ನಿರಾಧಾರವಾಗಿ ಅಲ್ಲಗಳೆದರೆ ಅಥವಾ ತಪ್ಪಾಗಿ ಅರ್ಥಮಾಡಿದರೆ ಖಂಡತುಂಡವಾಗಿ ಟೀಕಿಸಬಲ್ಲರು ಕೂಡ. ಯಾವ ವಿಚಾರವೇ ಆಗಿರಲಿ ಸತ್ಯಶೋಧನೆ ಮಾಡಿ ಸಹೃದಯ ಪಂಡಿತರ ಮುಂದಿಡುವುದೇ ಅವರ ಧ್ಯೇಯ. ನಿರ್ಣಯದ ಪೂರ್ವಭಾವಿಯಾಗಿ ಅವರು ನಡೆಸುವ ಮಾಹಿತಿ ಸಂಗ್ರಹ, ಆಳವಾದ ವಿಚಿಕಿತ್ಸಕನೋಟ, ಚಿಂತನ ಮಂಥನಗಳು, ಸಂಶೋಧಕರಿಗೆ ಮಾರ್ಗದರ್ಶಕ, ಗೋವಿಂದ ಪೈಯವರ ಜೀವಿತ ಕಾಲದಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗದೆ ಪತ್ರಿಕೆ, ನಿಯತಕಾಲಿಕೆ, ಸಂಭಾವನೆ, ಸ್ಮರಣಿಕೆಗಳಲ್ಲಿ ಮಾತ್ರ ಬೆಳಕು ಕಾಣುತ್ತ ತೆರೆಯ ಮರೆಯಲ್ಲೇ ಉಳಿದುಕೊಂಡು ಬಂದ ಸಂಶೋಧನೆಗಳು ಅವರಿಗೆ ಶತಮಾನ ತುಂಬಿದ ಸಂದರ್ಭದಲ್ಲಾದರೂ ಪ್ರಕಟಣೆಗೊಂಡಿರುವುದು ಕನ್ನಡಿಗರ ಅದೃಷ್ಟ.

**ದೇಶ, ಭಾಷೆ, ಕವಿ, ಕಾವ್ಯ, ನಾಟಕ ಇತ್ಯಾದಿ**

ಅಧ್ಯಯನದ ಅನುಕೂಲಕ್ಕಾಗಿ ಪೈಯವರ ಸಂಶೋಧನಾ ಬರಹಗಳನ್ನು ಕನ್ನಡ ಭಾಷೆ, ಸಾಹಿತ್ಯ, ನಾಟಕಗಳನ್ನು ಕುರಿತ ಲೇಖನಗಳೆಂದೂ ಕವಿಗಳ ದೇಶ, ಕಾಲ, ಮತ, ಕೃತಿಗಳಿಗೆ ಸಂಬಂಧಿಸಿದ ಲೇಖನಗಳೆಂದೂ ಶಬ್ದ, ಸ್ಥಳ, ಛಂದಸ್ಸುಗಳಿಗೆ ಸಂಬಂಧಿಸಿದ ಲೇಖನಗಳೆಂದೂ ಮೂರು ಬಗೆಯಲ್ಲಿ ವರ್ಗೀಕರಿಸಬಹುದೆಂಬುದು ವಿದ್ವಾಂಸರ

ಅಭಿಪ್ರಾಯ. ಕನ್ನಡ ಭಾಷೆ ಸಾಹಿತ್ಯ ಮತ್ತು ಕವಿಗಳಿಗೆ ಸಂಬಂಧಿಸಿದಂತೆ ಪೈಯವರ ಶೋಧನೆ ಅನನ್ಯವಾದ ಸಾಧನೆ. ಕನ್ನಡ ಸಾಹಿತ್ಯದ ಪ್ರಾಚೀನತೆಯ ಬಗ್ಗೆ ಪೈಯವರು ೧೯೨೮ರಲ್ಲಿ ಬರೆದ ಮೊತ್ತಮೊದಲ ಸಂಶೋಧನ ಲೇಖನದಲ್ಲಿ ಅವರು ಶೋಧಿಸಿ ನಿರೂಪಿಸಿದ ತೀರ್ಮಾನಗಳಲ್ಲಿ ಕೆಲವು ಗ್ರಾಹ್ಯವಲ್ಲವೆಂಬ ಅಭಿಪ್ರಾಯವನ್ನು ಅನಂತರದ ಸಂಶೋಧಕರು ಸಾಕ್ಷ್ಯಾಧಾರಗಳಿಂದ ನಿರೂಪಿಸಿದರೂ ಅವರು ಶೋಧಿಸಿದ ಅನೇಕ. ಮಾಹಿತಿಗಳು ಇವತ್ತಿಗೂ ಪ್ರಶ್ನಾತೀತವಾಗಿವೆಯೆನ್ನುವುದರಲ್ಲಿ ಅನುಮಾನವಿಲ್ಲವೆಂಬುದು ವಿದ್ವಾಂಸರ ಅಭಿಪ್ರಾಯ. ಕನ್ನಡದ ಪ್ರಾಚೀನತೆಯನ್ನು ಸಾಬೀತುಪಡಿಸಲು ಪೈಯವರಿಗೆ ಲಭಿಸಿದ ಸಾಕ್ಷ್ಯಾಧಾರಗಳಲ್ಲಿ ಮುಖ್ಯವಾದವುಗಳು ಈಜಿಪ್ಟಿನ ಆಕ್ಸಿರಿಂಕಿಸ್ ಎಂಬಲ್ಲಿ ದೊರಕಿದ ಗ್ರೀಕ್ ಭಾಷೆಯ ಪ್ರಹಸನದಲ್ಲಿ ಕಾಣಿಸುವ ಅನ್ಯಭಾಷೆಯ ಮಾತುಗಳು ಕನ್ನಡವೆನ್ನುವುದು ಮುಖ್ಯ ವಿಚಾರ. ಗ್ರೀಕ್ ಪ್ರಹಸನದ ಶೋಧನೆಗೆ ಸಂಬಂಧಿಸಿದಂತೆ ಕುತೂಹಲಕಾರಕ ಹಿನ್ನೆಲೆಯೊಂದಿದೆ. ೧೯೨೬-೨೭ರಲ್ಲಿ ಮೈಸೂರಿನ ಆರ್ಕಿಯೋಲಜಿಕಲ್ ವರದಿಯಲ್ಲಿ ಪ್ರಕಟವಾದ ಕ್ರಿ.ಶ. ೧-೨ನೆಯ ಶತಮಾನದ್ದೆನ್ನಲಾದ ಗ್ರೀಕ್ ಪ್ರಹಸನ ವೊಂದರಲ್ಲಿ ಬಂದಿರುವ ಅನ್ಯಭಾಷೆಯ ಪದಗಳು ಕನ್ನಡವೆಂದೂ ಅದು ನಡೆದ ಸ್ಥಳ ದಕ್ಷಿಣ ಕನ್ನಡದ ಉಡುಪಿಯ ಬಳಿಯಲ್ಲಿರುವ ಮಲ್ಪೆ ಎಂದೂ ಟೀಕಾಕಾರರು ನಿರ್ಧರಿಸಿ ರುವುದನ್ನು ಗೋವಿಂದ ಪೈಯವರು ಉಲ್ಲೇಖಿಸುತ್ತಾರೆ. ಆದರೆ ಎಸ್. ಶ್ರೀಕಂಠಯ್ಯ ಎನ್ನುವವರು ಆ ಪದಗಳು ತಮಿಳು ಭಾಷೆಯದಾದರೂ ಆಗಿರಬಹುದೆಂದು ಹೇಳಿದ ಕಾರಣದಿಂದ ಪೈಯವರು ಅವರಿಬ್ಬರು ನೋಡಿದ ಇಂಗ್ಲಿಷ್ ಅವತರಣಿಕೆಯನ್ನು ಬಿಟ್ಟು ಮೂಲ ಗ್ರೀಕ್ ಪ್ರಹಸನವನ್ನೇ ತರಿಸಿ ಆಮೂಲಾಗ್ರವಾಗಿ ಶೋಧಿಸಿ ಆ ಮಾತುಗಳು ಕನ್ನಡವೆಂದೂ ಆದರೆ ಆ ಘಟನೆ ನಡೆದ ಸ್ಥಳ ಮಂಗಳೂರಿನ ಮಲ್ಪೆಯಲ್ಲವೆಂದೂ ಅಲ್ಲಿಂದ ದಕ್ಷಿಣಕ್ಕೆ ೩೩ ಮೈಲಿ ದೂರದ ಉದ್ಯಾವರದ ಸೋಮೇಶ್ವರ ತೀರವೆಂದೂ ತೀರ್ಮಾನಿಸುತ್ತಾರೆ. ಗ್ರೀಕ್ ಪ್ರಹಸನದ ಕಥಾವಸ್ತುವನ್ನು ಸ್ಥೂಲವಾಗಿ ಪೈಯವರು ಹೀಗೆ ಕಲೆಹಾಕಿದ್ದಾರೆ: ಒಬ್ಬಳು ಗ್ರೀಕ್ ಕನ್ಯೆ ಹಡಗು ಒಡೆದು ನೀರಿನಲ್ಲಿ ಕೊಚ್ಚಿಕೊಂಡು ಬಂದು ತಮಿಳುನಾಡಿನ ಅಂದರೆ ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿಯ ಒಂದು ಊರನ್ನು ಸೇರುತ್ತಾಳೆ. ಅಲ್ಲಿಯ ಅರಸನ ಆಶ್ರಯದಲ್ಲಿ ಊರ ಹೆಂಗಸರ ಒಡನಾಟ ಅವಳಿಗಾಗುತ್ತದೆ. ಕೆಲಕಾಲಾನಂತರ ಅವಳನ್ನು ಹುಡುಕುತ್ತ ಅವಳ ಸೋದರ, ಹಡಗಿನ ಕ್ಯಾಪ್ಟನ್ ಮತ್ತು ವಿದೂಷಕರು ಬರುತ್ತಾರೆ. ಆ ಸಮಯದಲ್ಲಿ ಅವರಿಗೆ ಪಾನಗೋಷ್ಠಿ ನಡೆಯುತ್ತದೆ. ಅನಂತರ ಅವರು ಅವಳನ್ನು ತಮ್ಮೂರಿಗೆ ಕರೆದುಕೊಂಡು ಹೋಗುತ್ತಾರೆ. ಆ ಪ್ರಹಸನದಲ್ಲಿ ಕನ್ನಡವೆಂದು ಊಹಿಸಲಾದ ಅನೇಕ ಪದಗಳನ್ನು ಪೈಯವರು ಉಲ್ಲೇಖಿಸುತ್ತಾರೆ. ಏ ಕೂಸೆ, ಕರೆವನೌ, ಬಯ್ತಿ, ಎಮ್ಮಕ್ಕ, ಹೊರಟೆ, ಆ ಹೊಳೆಗೆ ಹೋಗು, ಶಿವ ಸಂರಕ್ಷಿಸು, ಸೋಮೇಶ್ವರಾ ಇತ್ಯಾದಿ.[೩೬]

ಗ್ರೀಕ್ ಪ್ರಹಸನದ ಕನ್ನಡ ಮಾತುಗಳನ್ನಲ್ಲದೆ ಕ್ರಿ.ಶ. ೧-೨ನೆಯ ಶತಮಾನದ ಹಾಲರಾಜನ ಗಾಥಾಶಪ್ತಸತಿಯೆಂಬ ಪ್ರಾಕೃತ ಪದ್ಯಸಂಕಲನದಲ್ಲಿ ಕಂಡುಬರುವ ಪೊಟ್ಟ, ತುಪ್ಪ, ತೀರ್, ಪಿಟ್ಟೆ ಮುಂತಾದ ಶಬ್ದಗಳನ್ನು ಉಲ್ಲೇಖಿಸಿ ಅದಕ್ಕಿಂತ ಪೂರ್ವದಲ್ಲಿಯೇ

ಕನ್ನಡ ಸಾಹಿತ್ಯ ಇದ್ದಿರಬಹುದಾದ ಸಾಧ್ಯತೆಗಳತ್ತ ಬೆಳಕು ಚೆಲ್ಲಿರುವುದು ಇನ್ನೊಂದು ಮಹತ್ವದ ವಿಚಾರ. ಇವಲ್ಲದೆ ಕವಿರಾಜಮಾರ್ಗ, ಕ್ರಿ.ಶ. ೯ನೆಯ ಶತಮಾನದ ಚಿತ್ರದುರ್ಗದ ತಮಟೆಗಲ್ಲು ಶಿಲಾಶಾಸನ, ಭಟ್ಟಾಕಳಂಕನ ಶಬ್ದಾನುಶಾಸನ, ಇಂದ್ರನಂದಿಯ ಶ್ರುತಾವತಾರಿ ಇತ್ಯಾದಿ ಕೃತಿಗಳ ಆಧಾರಗಳನ್ನೂ ಅವರು ತಮ್ಮ ಶೋಧನೆಯ ಸಮರ್ಥನೆಗಾಗಿ ಬಳಸಿಕೊಂಡಿದ್ದಾರೆ. 'ಕನ್ನಡ ಸಾಹಿತ್ಯದ ಹಳಮೆ' ಎಂಬ ಲೇಖನಕ್ಕೆ ಸಂಬಂಧಿಸಿದಂತೆ ಕವಿರಾಜಮಾರ್ಗ, ವಡ್ಡಾರಾಧನೆ, ಕಾವ್ಯಾವಲೋಕನ, ಶ್ರವಣಬೆಳ್ಗೊಳದ ಶಾಸನ, ಹಲ್ಮಿಡಿ ಶಾಸನ ಇತ್ಯಾದಿ ಅನೇಕಾನೇಕ ಮೂಲಗಳನ್ನು ಪರಿಶೋಧಿಸಿದ್ದಾರೆ. ಗೋವಿಂದ ಪೈಯವರ ಸಂಶೋಧನೆಯ ಬಗ್ಗೆ ಆಳವಾದ ಅಧ್ಯಯನವನ್ನು ಮಾಡಿರುವ ಡಾ. ಜಿ. ವರದರಾಜರಾವ್‌ರವರು 'ಅವರು (ಗೋವಿಂದ ಪೈ) ಅವಲಂಬಿಸಿರುವ ಈ ದೃಢವಾದ ಆಧಾರಗಳಲ್ಲಿನ ಆಂತರಿಕ ಪ್ರಮಾಣಗಳನ್ನು ಪ್ರತಿಪಾದಿಸುವಲ್ಲಿ ಅವರ ಕಲ್ಪನಾ ಶಕ್ತಿ ಸಂಭಾವ್ಯತೆಯ ಮಿತಿಯನ್ನೂ ಮೀರಿ ಹೋಗುವುದರಿಂದ ಅವರ ನಿರ್ಣಯಗಳು ಅನೇಕ ವೇಳೆ ಅಸಮ್ಮತವೆನಿಸುತ್ತದೆ. ಪ್ರಕೃತದಲ್ಲಿ ಕವಿರಾಜಮಾರ್ಗಕ್ಕೆ ಪೂರ್ವದಲ್ಲಿ ಕನ್ನಡ ಸಾಹಿತ್ಯ ತಕ್ಕಮಟ್ಟಿಗಾದರೂ ರೂಪತಾಳಿರಬಹುದೆಂದು ಒಪ್ಪಿಕೊಳ್ಳಬಹುದೇ ವಿನಾ ಆ ವೇಳೆಗಾಗಲೇ ಸಮೃದ್ಧವಾದ ಸಾಹಿತ್ಯದ ಒಂದು ಯುಗವೇ ಆಗಿಹೋಗಿತ್ತು ಎನ್ನುವುದು ಅಭಿಮಾನದ ಮಾತಾಗುತ್ತದೆ. ಕನ್ನಡ ಭಾಷೆ ಕ್ರಿ.ಪೂ. ದಲ್ಲಿಯೇ ಬಳಕೆಯಲ್ಲಿರಬಹುದು ಎನ್ನುವ ಅಭಿಪ್ರಾಯವಾದರೋ ಗಮನಾರ್ಹವಾದುದು.'[೩೮] ಎನ್ನುತ್ತಾರೆ. ಅಶೋಕನ ಶಾಸನದ 'ಇಸಿಲ್' ಎಂಬ ಸ್ಥಳ ವಾಚಕವು 'ಎಸಿಲ್' ಎಂಬ ಕನ್ನಡದ ಪ್ರಾಕೃತ ರೂಪವಿರಬಹುದೆಂಬ ಡಿ.ಎಲ್.ಎನ್. ಅಭಿಪ್ರಾಯವನ್ನು ಉಲ್ಲೇಖಿಸಿರುವುದು ಪೈಯವರ ಸಂಶೋಧನೆಗೆ ಪೂರಕವಾಗಿದೆ.

ವಡ್ಡಾರಾಧನೆಯ ಕಾಲನಿರ್ಣಯದಲ್ಲೂ ಪೈಯವರ ಶೋಧನೆ, ನಿಲುವು ಅಚ್ಚರಿಯೆನಿಸುತ್ತದೆ. ಒಂದು ತೀರ್ಮಾನಕ್ಕೆ ಬರುವಲ್ಲಿ ಅವರು ತೋರುವ ತಾಳ್ಮೆ, ಕಷ್ಟ ಸಹಿಷ್ಣುತೆ, ಗಾಢವಾದ ಅಧ್ಯಯನಾಸಕ್ತಿ, ವಿಚಾರವಂತಿಕೆಗಳು ಅಪರಿಮಿತ. ಕವಿರಾಜಮಾರ್ಗದ ಕಾಲವನ್ನು ೬ನೆಯ ಶತಮಾನಕ್ಕೆ ಕೊಂಡೊಯ್ದುದಲ್ಲದೆ ಅದರಲ್ಲಿರುವ ಮಾಹಿತಿಗಳ ಮೂಲಕ ಅದಕ್ಕಿಂತ ಪೂರ್ವದಲ್ಲಿರಬಹುದಾದ ವ್ಯಾಕರಣ ಗ್ರಂಥಗಳು, ಛಂದೋಪ್ರಯೋಗಗಳು, ಸಾಹಿತ್ಯ ಪ್ರಕಾರಗಳು ಎಲ್ಲವನ್ನೂ ಶೋಧಿಸಿ ಕವಿರಾಜಮಾರ್ಗಕ್ಕಿಂತ ಕೆಲವು ಶತಕಗಳ ಹಿಂದಿನಿಂದಲೇ ಕನ್ನಡ ಸಾಹಿತ್ಯವಿದ್ದಿರಬೇಕೆಂಬ ನಿರ್ಣಯಕ್ಕೆ ಬರುತ್ತಾರೆ. ತಮ್ಮ ತೀರ್ಮಾನದ ಸಮರ್ಥನೆಗೆ ಟಾಲೆಮಿಯ ಭೂಗೋಳ ಶಾಸ್ತ್ರ, ಶಾಸನಗಳು, ಕವಿರಾಜಮಾರ್ಗ, ವಡ್ಡಾರಾಧನೆ, ಕಾವ್ಯಾವಲೋಕನ, ಶಬ್ದಾನುಶಾಸನ ಇತ್ಯಾದಿ ಕೃತಿಗಳನ್ನು ಪ್ರಮಾಣೀಕರಿಸುತ್ತಾರೆ.

ಕನ್ನಡ ಕವಿ, ಕಾವ್ಯಗಳಿಗೆ ಸಂಬಂಧಿಸಿದಂತೆ ಪೈಯವರು ಬರೆದ ಉದ್ದಾಮವಾದ ಸಂಶೋಧನಾ ಪ್ರಬಂಧಗಳು ಅತ್ಯಂತ ಬೋಧಪ್ರದವಾಗಿವೆ. ಅವು ಸಂಖ್ಯೆಯಲ್ಲಿ ಮಾತ್ರವಲ್ಲ ಗುಣಮಟ್ಟದಲ್ಲೂ ಅತ್ಯುನ್ನತವಾಗಿವೆ. ಪಂಪ, ರನ್ನ, ಪೊನ್ನ, ನಾಗವರ್ಮ, ಚಾವುಂಡರಾಯ, ನಾಗಚಂದ್ರ, ಶಿಶುಮಾಯಣ, ಕುಮಾರವ್ಯಾಸ, ಲಕ್ಷ್ಮೀಶ, ರತ್ನಾ

ಕರವರ್ಣೆ... ಪೈಯವರ ದೃಷ್ಟಿಗೆ ಗ್ರಾಹ್ಯವಾಗದ ಯಾವ ಕವಿಯಾಗಲೀ ಕಾವ್ಯವಾಗಲೀ ಇಲ್ಲವೆಂಬಷ್ಟು ಅವರ ಸಂಶೋಧನೆಯ ವ್ಯಾಪ್ತಿ ಹರಡಿದೆ. ಪೊನ್ನನ 'ಭುವನೈಕ ರಾಮಾಭ್ಯುದಯ'ದ ಭುವನೈಕ ರಾಮ ಯಾರು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ನಡೆದ ಬಹಳಷ್ಟು ಚರ್ಚೆ ಭಿನ್ನಾಭಿಪ್ರಾಯಗಳನ್ನು ಮೀರಿ ಅದು ಜೈನ ಸಂಪ್ರದಾಯದ್ದಲ್ಲವೆಂದೂ ವೈದಿಕ ಕಥೆಯಾಗಿದ್ದು ಪೊನ್ನ ತನ್ನ ಆಶ್ರಯದಾತನಾದ ರಾಷ್ಟ್ರಕೂಟ ३ನೆಯ ಕೃಷ್ಣನೊಂದಿಗೆ ಸಮೀಕರಿಸಿ ಬರೆದಿರಬೇಕೆಂದೂ ಪೈಯವರು ಊಹಿಸಿದ್ದು ನಿಜವಾಯ್ತು ಎಂದು ಡಿ.ಎಲ್. ನರಸಿಂಹಾಚಾರ್ಯರು ಸಮರ್ಥಿಸುತ್ತಾರೆ. ಪೈಯವರ ಸಂಶೋಧನೆಯ ವಿಧಾನ ಹಾಗೂ ಅವರ ವಿರಾಟ್ ಸ್ವರೂಪವನ್ನು ಅಧ್ಯಯನ ಮಾಡಿ ವಿಸ್ಮಿತರಾದ ಕನ್ನಡದ ಶ್ರೇಷ್ಠ ಸಂಶೋಧಕರು ಗೋವಿಂದ ಪೈಯವರ ಸಂಶೋಧನೆಯೆಂದರೆ ಅದೊಂದು ಕಾರ್ಖಾನೆ ಎಂದು ಪ್ರಶಂಸಿಸಿದ್ದಾರೆ.

ಕನ್ನಡದ ನಾಟಕಗಳ ಪ್ರಾಚೀನತೆಯನ್ನು ಹುಡುಕುತ್ತ ಪೈಯವರು ನಾಲ್ಕು ಮಹತ್ವಪೂರ್ಣವಾದ ಲೇಖನಗಳನ್ನು ಪ್ರಕಟಿಸಿದ್ದಾರೆ. ಈಗ ಲಭಿಸುವ ೧೭ನೆಯ ಶತಮಾನದ ಮಿತ್ರವಿಂದಾಗೋವಿಂದ ಕನ್ನಡದ ಮೊದಲ ನಾಟಕವಲ್ಲವೆಂದೂ ಕ್ರಿ.ಶ. ೯-೧೦ನೆಯ ಶತಮಾನದಿಂದಲೇ ನಾಟಕಗಳು ರಚನೆಯಾಗುತ್ತಿರಬೇಕೆಂದೂ ಸಾಕ್ಷ್ಯಾಧಾರಗಳ ಸಮೇತ ದಾಖಲಿಸಿದ್ದಾರೆ.

ಪೈಯವರು ತಮ್ಮ ಸಂಶೋಧನೆಯಲ್ಲಿ ಅಷ್ಟರ ಮಟ್ಟಿಗಿನ ಯಶಸ್ಸನ್ನು ಪಡೆಯಲು ಒಂದು ಮುಖ್ಯ ಕಾರಣ ಅವರ ಅದ್ಭುತವಾದ ಸ್ಮರಣಶಕ್ತಿ. ದಿನ, ವಾರ, ತಿಥಿ, ನಕ್ಷತ್ರ, ಎಲ್ಲವನ್ನೂ ಕೇವಲ ಸ್ಮರಣೆಯ ಬಲದಿಂದಲೇ ಕರಾರುವಾಕ್ಕಾಗಿ ತಿಳಿಸಬಲ್ಲ ಅವರು ಗತಕಾಲದ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳ ಕಡಿದಾದ ಹಾದಿಗಳನ್ನು ತಮ್ಮ ಪ್ರತಿಭೆ, ಪಾಂಡಿತ್ಯಗಳ ಮೂಲಕ ಸುತ್ತಿ ಸುಳಿದು ಕೊನೆಗೂ ಸತ್ಯದ ಗುರಿಯನ್ನು ಸೇರಿ ತಾವು ಕ್ರಮಿಸಿದ ಪ್ರತಿಯೊಂದು ಹೆಜ್ಜೆಯ ಜಾಡನ್ನೂ ನಿಖರವಾಗಿ ಬಯಲು ಮಾಡುತ್ತಾರೆ. ಎಂ.ಎಸ್. ವೃಷಭೇಂದ್ರಸ್ವಾಮಿಗಳು 'ಪೈಗಳ ಸಂಶೋಧನೆಯವಾದ ಒಂದು ಚಕ್ರಬಿಂಬದ ಕೋಟೆ. ದಾರಿ ದೂರವೆನಿಸಿದರೂ. ತಿರುತಿರುಗಿ ಬಳಲಿದರೂ ದಾರಿ ತಪ್ಪಿತೆಂಬ ಸಂಶಯ ಮೂಡಿದರೂ ಹಿಂದೆ ಮುಂದೆ ತೊಳಲಿ ಜಗ್ಗಾಡಿದರೂ ಊಹೆಯ ಮರಳಲ್ಲಿ ಅನಿಸಿಕೆಯ ನೀರು ಕುಡಿದು ಸಾಗಿದಂತೆ ಭಾಸವಾದರೂ ಸತ್ಯಸೂರ್ಯನ ದರ್ಶನ ಪಡೆದಾಗ ಪೈಗಳ ಪ್ರತಿಭೆಗೆ ನಮೋ ನಮೋ ಎನ್ನಲೇಬೇಕು.'[೫] ಎಂದಿರುವುದು ಯಥಾರ್ಥವಾಗಿದೆ.

**ಇತಿಹಾಸ**

ಇತಿಹಾಸಕ್ಕೆ ಸಂಬಂಧಿಸಿದ ಸಂಶೋಧನೆಯಲ್ಲೂ ಪೈಯವರಿಗೆ ಅಪಾರವಾದ ಪರಿಶ್ರಮವಿದೆ. ತಮ್ಮ ಸ್ವಂತ ಸ್ಥಳವಾದ ತುಳುನಾಡಿನಿಂದ ಪ್ರಾರಂಭಿಸಿ ಕರ್ನಾಟಕವನ್ನು ಸುತ್ತಾಡಿ ಇಡೀ ಭಾರತದ ಇತಿಹಾಸವನ್ನೆಲ್ಲ ತಮ್ಮ ಶೋಧನೆಯ ತೆಕ್ಕೆಗೆ ಒಳಪಡಿರುವುದು ಸ್ಪಷ್ಟವಾಗುತ್ತದೆ.

**ತುಳುನಾಡಿನ ಇತಿಹಾಸ**

ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ೨೧ ಲೇಖನಗಳನ್ನು ಬರೆದ ಪೈಯವರು ಪ್ರತಿಯೊಂದು ವಿಷಯದಲ್ಲೂ ಆಯಾ ಪ್ರಾಂತ್ಯದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಭೌಗೋಲಿಕ, ಜನಾಂಗಿಕ, ಜಾನಪದ, ವಾಸ್ತುಶಿಲ್ಪ, ಸ್ಥಳನಾಮ ಎಲ್ಲ ಉಪಲಬ್ಧ ಮಾಹಿತಿಗಳ ಪುರಾವೆಗಳನ್ನು ಆಮೂಲಾಗ್ರ ಶೋಧನೆ ಮಾಡಿ ತೀರ್ಮಾನವನ್ನು ನೀಡಿದ್ದಾರೆ.

'ಇತಿಹಾಸದ ಇರುಳಿನಲ್ಲಿ ತುಳುನಾಡು' ಮತ್ತು 'ತುಳುನಾಡು' ಎಂಬ ಲೇಖನಗಳು ತುಳುನಾಡಿನ ಮೂಲಶೋಧನೆಗೆ ನೆರವಾಗಬಲ್ಲ ಅಮೂಲ್ಯ ಸಂಶೋಧನೆಗಳು. ತುಳುನಾಡಿನ ಹೆಸರು, ಪ್ರಾಚೀನತೆ, ಆಳಿದ ರಾಜರು, ಧಾರ್ಮಿಕ, ಚರಿತ್ರೆ, ತುಳುನಾಡಿಗೂ ಗ್ರೀಕ್ ದೇಶಕ್ಕೂ ಇರುವ ಸಂಬಂಧ, ಮಂಗಳೂರಿನ ಪ್ರಾಚೀನತೆ, ಶಾಸನಗಳು, ನಾಡಿನ ಅನೇಕ ಮಹಾನ್ವ್ಯಕ್ತಿಗಳು ಈ ಮೊದಲಾದ ಸಂಶೋಧನೆಗಾಗಿ ಗೋವಿಂದ ಪೈಯವರು ವೇದೋಪನಿಷತ್ತುಗಳೊಂದಿಗೆ ರಾಮಾಯಣ, ಭಾರತ, ಪುರಾಣಗಳು, ಚರಿತ್ರೆಗಳು, ಸಾಹಿತ್ಯ, ಶಾಸ್ತ್ರ ಕೃತಿಗಳಲ್ಲದೆ ದೇಶ ವಿದೇಶಗಳಿಂದ ದೊರಕುವ ಸರ್ವ ಮೂಲಗಳನ್ನೂ ಶೋಧಿಸುತ್ತಾರೆ. ತಮ್ಮ ಶೋಧನೆಯ ಆಧಾರದಿಂದ ತುಳುನಾಡಿನ ಪ್ರಾಚೀನತೆಯನ್ನು ಕ್ರಿ.ಪೂ. ೮೦೦ಕ್ಕೆ ಕೊಂಡೊಯ್ಯುತ್ತ ಅಶೋಕನ ಶಿಲಾಶಾಸನದಲ್ಲಿ ಉಕ್ತರಾದ 'ಸತಿಯ ಪುತ್ರರು' ಮೂಲತಃ ಪುರಾಣೋಕ್ತರಾದ ಸಾತ್ತ್ವತರೆಂಬವರೆಂದೂ ಅವರೇ ತುಳುನಾಡಿನ ಸಾತ್ತ್ವತರೆಂದೂ ಅವರು ಕ್ರಿ.ಪೂ. ೨೦೦ ರಿಂದ ಕ್ರಿ.ಶ. ೨೦೦ರ ವರೆಗೆ ಕರ್ನಾಟಕವನ್ನು ಆಳಿದ ಶಾತವಾಹನರೆಂದೂ ಅವರೇ ತುಳುನಾಡಿನ ಮೂಲದವ ರೆಂದೂ ಊಹಿಸುತ್ತಾರೆ. ಹಾಗೆಯೇ ತುಳು ಪದ 'ತುಳ್ಯೆ' ಅಂದರೆ ನೀರಿನಲ್ಲಿ ಹುಟ್ಟು ಹಾಕುವುದು ಎಂಬುವುದರಿಂದ ಬಂದಿತೆಂದೂ ಅಂತಹ ಉದ್ಯೋಗವಿರುವ ಜನರ ಪ್ರದೇಶ ತುಳುನಾಡಾಗಿರಬಹುದೆಂದೂ ಅಭಿಪ್ರಾಯ ಪಡುತ್ತಾರೆ. ತುಳುನಾಡು ಭೌಗೋಲಿಕ ಮತ್ತು ಕಾಲಗಣನೆಯ ದೃಷ್ಟಿಯಿಂದ ಕ್ರಿ.ಶ. ೧-೨ನೆಯ ಶತಮಾನದಷ್ಟು ಹಳೆಯದಾಗಿರ ಬೇಕೆಂದೂ ಮಂಗಳೂರಿನ ಕದ್ರಿಯು ಬಹುದೊಡ್ಡ ಬೌದ್ಧವಿಹಾರ ವಾಗಿತ್ತೆಂದೂ ಅನಂತರ ನಾಥಪಂಥದ ಕೇಂದ್ರವಾಗಿ ಪರಿವರ್ತನೆ ಹೊಂದಿತೆಂದೂ ಪೈಯವರ ಮೂಲ ಶೋಧನೆ. ಇದನ್ನು ಕುರಿತು ವಿಚಾರ ವಿಮರ್ಶೆಯನ್ನು ಮಾಡಿದ ವಿದ್ವಾಂಸರು ಗೋವಿಂದ ಪೈಯವರ ಈ ಶೋಧನೆಯ ಬಗ್ಗೆ ಪೂರ್ಣ ಸಹಮತವನ್ನು ತೋರದಿದ್ದರೂ ಅವರ ವಿದ್ವತ್ತು ಮತ್ತು ಪಾಂಡಿತ್ಯದ ಬಗ್ಗೆ ಅಪಾರವಾದ ಪ್ರಶಂಸೆಯನ್ನು ವ್ಯಕ್ತಪಡಿಸಿದ್ದಾರೆ.

**ಕರ್ನಾಟಕದ ಇತಿಹಾಸ**

ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ಪೈಯವರು ೨೨ ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ಶಾಸನಗಳ ನೆಲೆವೀಡಾದ ಕನ್ನಡನಾಡಿನಲ್ಲಿ ವಿಪುಲವಾಗಿ ಲಭ್ಯವಿರುವ ಶಾಸನಗಳ ಅಂತರಂಗವನ್ನು ಅರಿಯುವ ಕುತೂಹಲವನ್ನು ಮೂಡಿಸಿದ ಕೆಲವೇ ಕೆಲವು ವಿದ್ವಾಂಸರಲ್ಲಿ ಅಗ್ರಗಣ್ಯರಾದ ಗೋವಿಂದ ಪೈಯವರು ಕರ್ನಾಟಕದ ಇತಿಹಾಸಕ್ಕೆ ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಮೂಲ ಆಕರಗಳಾಗಿ ಪರಿಭಾವಿಸಿದ್ದಾರೆ.

ಕರ್ನಾಟಕಕ್ಕೆ ಜೈನಧರ್ಮದ ಆಗಮನ, ಟ್ರೊಲೆಮಿಯ ಪ್ರಾಚೀನ ಕರ್ನಾಟಕದ ಭೂಗೋಳ, ಕೆಲವು ಪ್ರಾಚೀನ ರಾಜಮನೆತನಗಳು, ಕದಂಬರು, ಗಂಗರು ಇತ್ಯಾದಿ ಕರ್ನಾಟಕದ ಅತ್ಯಂತ ಪ್ರಾಚೀನವಾದ ಇತಿಹಾಸವನ್ನು ಶೋಧಿಸಿದ ಪೈಯವರ ಶೋಧನೆಗಳು ಕಾಲದ ಪರೀಕ್ಷೆಯಲ್ಲಿ ಬಿದ್ದುಹೋಗಬಹುದಾದ ಸಾಧ್ಯತೆಗಳಿದ್ದರೂ ಅವರಿದ್ದ ಸಂದರ್ಭದಲ್ಲಿ 'ತಮ್ಮ ನಿಲುವನ್ನು ಸಮರ್ಥಿಸುವ ಸಲುವಾಗಿ ಪೈಗಳು ಬಳಸಿ ಕೊಂಡಿರುವ ಶಾಸನಿಕ ಮತ್ತು ಸಾಹಿತ್ಯಿಕ ಪುರಾವೆಗಳ ಬೃಹತ್ಪ್ರಮಾಣವು ಯಾವ ಸಂಶೋಧಕನನ್ನೂ ಕೂಡ ಬೆರಗು ಗೊಳಿಸುವಂತದ್ದು'[೨೦] ಎನ್ನುತ್ತಾರೆ ಪೈಯವರ ಸಂಶೋಧನ ಲೇಖನಗಳನ್ನು ಸಮೀಕ್ಷಿಸಿದ ಡಾ. ಕೆ.ವಿ. ರಮೇಶರವರು. ನಿದರ್ಶನವಾಗಿ 'ಚಾಳುಕ್ಯ' ಎಂಬ ಪದದ ದೀರ್ಘೀಕರಣದ ಗ್ರಹಿಕೆಯನ್ನು ಪೈಯವರು ಅಲ್ಲಗಳೆದು ಅದರ ಸರಿಯಾದ ರೂಪ 'ಚಳುಕ್ಯ' ಎಂದಿರುವುದರ ಬಗ್ಗೆ ಗಮನ ಸೆಳೆಯುತ್ತಾರೆ. 'ಪೈಯವರಂಥ ಜ್ಞಾನಸಾಧನೆಯ ಆಳ ಮತ್ತು ವಿಸ್ತಾರವಿರುವ ಅನ್ಯ ವಿದ್ವಾಂಸರು ಆಧುನಿಕ ಭಾರತದಲ್ಲಿ ಕೇವಲ ಏಳೆಂಟು ಜನ ಮಾತ್ರ ಎನ್ನಬಹುದು'[೨೧] ಎಂಬುದು ಶ್ರೀನಿವಾಸ ಹಾವನೂರರ ಮಾತು.

**ಭಾರತದ ಇತಿಹಾಸ**

ಇದರಲ್ಲಿ ಸು. ೧೫ ಲೇಖನಗಳಿವೆ. ಭಾರತಕ್ಕೆ ಗ್ರೀಕರ ಆಗಮನದಿಂದ ಪ್ರಾರಂಭಿಸಿ ಭಾರತ ಮತ್ತು ಗ್ರೀಕರ ಸಂಬಂಧ, ಶಕರು, ವಾಕಾಟಕರು, ಪಲ್ಲವರು–ಹೀಗೆ ಭಾರತವನ್ನು ಆಳಿದ ಪ್ರಾಚೀನ ರಾಜಮನೆತನಗಳಿಗೆ ಸಂಬಂಧಿಸಿದ ಅನೇಕ ಸಂಶೋಧನಾತ್ಮಕ ಲೇಖನಗಳನ್ನು ಪೈಯವರು ರಚಿಸಿದ್ದಾರೆ. ಉತ್ತರ ಭಾರತದ ಇತಿಹಾಸಕ್ಕೆ ಸಂಬಂಧಿಸಿದಂತೆ ಗೋವಿಂದ ಪೈಯವರ ಸಂಶೋಧನೆಯ ಮಹತ್ವವಾದ ಕೊಡುಗೆಯನ್ನು ಕುರಿತು ಬರೆಯುತ್ತ ಡಾ. ಬಾ.ರಾ. ಗೋಪಾಲ್ ರವರು 'ವೃಷಲ' ಎಂಬ ಪದದ ಬಗ್ಗೆ ಪೈಯವರು ನೀಡಿದ ಅರ್ಥ ವ್ಯಾಖ್ಯಾನ ಅತ್ಯಂತ ಪ್ರಮುಖವಾದುದು ಎನ್ನುತ್ತಾರೆ.[೨೨] ವಿಶಾಖದತ್ತನ ಮುದ್ರಾ ರಾಕ್ಷಸದಲ್ಲಿ ಚಾಣಕ್ಯ ಚಂದ್ರಗುಪ್ತನನ್ನು 'ವೃಷಲ' ಎಂದು ಸಂಬೋಧಿಸಿದ್ದು ಅದರ ಅರ್ಥ ಅಮರಕೋಶದನ್ವಯ ಶೂದ್ರನೆಂದಾಗುತ್ತದೆಂಬ ವಿಚಾರವನ್ನು ಕೂಲಂಕಷವಾಗಿ ಚರ್ಚಿಸಿ ಗ್ರೀಕ್ ಭಾಷೆಯಲ್ಲಿ 'ಬೆಸಿಲಿಯಸ್' ಎಂಬ ಮಾತಿಗೆ ಮಹಾರಾಜ ಎಂಬ ಅರ್ಥವಿರುವುದಾಗಿಯೂ ಈ ಪದ ಗ್ರೀಕ್ 'ಬ್ರಸಿಲ'ದಿಂದ ಬಂದಿರಬೇಕೆಂದು ಗುರುತಿಸಿ ಬ್ರಸಿಲ>ಬ್ರಸಲ<ಸಂಸ್ಕೃತದಲ್ಲಿ ವೃಷಲವಾಗಿದೆಯೆಂದೂ 'ವೃಷಲ' ಎಂಬುದು ಮಹಾರಾಜ ಎಂಬರ್ಥದಲ್ಲಿ ಬಳಕೆಯಾಗಿದೆ ಎಂದು ವಾದಿಸಿರುವುದು ಒಪ್ಪತಕ್ಕ ವಿಚಾರವೆಂದು ತಿಳಿಸುತ್ತಾರೆ.

**ಧರ್ಮ**

ಗೋವಿಂದ ಪೈಯವರು ಬರೆದ ಧರ್ಮಸಂಬಂಧವಾದ ಸಂಶೋಧನಾ ಲೇಖನಗಳು ವೈದಿಕ, ಜೈನ, ಬೌದ್ಧ, ವೀರಶೈವ ಧರ್ಮಗಳಿಗೆ ಸಂಬಂಧಿಸಿದಂತೆ ಅವರ ಅಗಾಧವಾದ ಪರಿಶ್ರಮ ಮತ್ತು ಸಾಧನೆಗಳಿಗೆ ಸಾಕ್ಷಿಯಾಗಿವೆ. ವೈದಿಕ ಧರ್ಮಶಾಖೆ

ಗಳಾದ ದ್ವೈತ ಅದ್ವೈತ, ಬೌದ್ಧ ಧರ್ಮದ ಮಹಾಯಾನ, ಹೀನಯಾನ, ನಾಥಪಂಥ, ಜೈನಧರ್ಮದ ಶ್ವೇತಾಂಬರ ಮತ್ತು ದಿಗಂಬರಪಂಥ–ಹೀಗೆ ಧರ್ಮ ಮತ್ತು ಅವುಗಳ ಶಾಖೆಗಳಿಗೆ ಸಂಬಂಧಿಸಿದಂತೆ ಸಂಶೋಧನೆಯ ಮಹಾಪೂರವನ್ನೇ ಹರಿಯಿಸಿದ್ದಾರೆ. ಮಧ್ವಾಚಾರ್ಯರ ಕಾಲನಿರ್ಣಯ, ಮಂಜೇಶ್ವರ ದೇವಸ್ಥಾನದ ಐತಿಹಾಸಿಕತೆ, ಬುದ್ಧ ಮತ್ತು ಮಹಾವೀರರ ಪರಿನಿರ್ವಾಣ ಕಾಲ, ಶ್ರವಣಬೆಳ್ಗೊಳದಲ್ಲಿಯ ಗೊಮ್ಮಟೇಶ್ವರ ಮಹಾಮೂರ್ತಿಯ ಪ್ರತಿಷ್ಠಾಕಾಲ ನಿರ್ಣಯ, ಕರ್ನಾಟಕಕ್ಕೆ ಜೈನಧರ್ಮದ ಆಗಮನ, ತೀರ್ಥಂಕರರ ಚರಿತ್ರೆ, ಶಿವರಾತ್ರಿಯೋ ಜಿನರಾತ್ರಿಯೋ?, ಮಹಾವೀರಸ್ವಾಮಿ, ಜೈನರ ದೇಶೀಗಣವನ್ನು ಕುರಿತು, ರೇವಣಸಿದ್ಧನೆಂಬ ರೇಣುಕಾಚಾರ್ಯನ ಕಾಲವಿಚಾರ, ವೀರಶೈವ ಆಚಾರ್ಯತ್ರಯರ ಕಾಲ, ಬಸವೇಶ್ವರನ ಕಾಲನಿರ್ಣಯ, ಶಾಸನಗಳಲ್ಲಿ ಬಸವೇಶ್ವರ – ಹೀಗೆ. ಪೈಯವರ ಶೋಧನೆಯ ದೃಷ್ಟಿಗೆ ಬೀಳದ ವಿಚಾರಗಳೇ ಇಲ್ಲ. ಧರ್ಮಕ್ಕೆ ಸಂಬಂಧಿಸಿದ ಲೇಖನಗಳಲ್ಲಿ ಧರ್ಮಗುರು, ಧರ್ಮಕ್ಷೇತ್ರ, ಧಾರ್ಮಿಕ ಚರ್ಚೆಗಳಿಗೆ ಐತಿಹ್ಯ, ಸ್ಥಳಪುರಾಣ, ಶಾಸನಗಳು, ಇತಿಹಾಸ, ಸಾಹಿತ್ಯ, ಪುರಾಣ, ಉಪನಿಷತ್ತು – ಎಲ್ಲಕ್ಕೂ ಆಮೂಲಾಗ್ರವಾಗಿ ತಮ್ಮ ವಿಚಿಕಿತ್ಸಕ ದೃಷ್ಟಿಯನ್ನು ಹರಿಸಿದ್ದಾರೆ. ಅಪಾರವಾದ ಅಡಿಟಿಪ್ಪಣಿ, ಉಲ್ಲೇಖಗಳಿಂದ ಓದುಗರನ್ನು ಬೆಚ್ಚಿಬೀಳಿಸಿದ್ದಾರೆ. ಕ್ರಿ.ಶ. ೧೯೬೦ರಲ್ಲಿ ಬರೆದ ತಮ್ಮ ತಾಯ್ನಾಡಾದ ಮಂಜೇಶ್ವರದ ದೇವಸ್ಥಾನದ ಕುರಿತಾದ ಸಂಶೋಧನೆಯೇ ಪೈಯವರ ಕೊನೆಯ ಸಂಶೋಧನಾ ಲೇಖನ.

ಇಷ್ಟಾದರೂ ಭಾಷೆಯ ಜಟಿಲತೆ ಮತ್ತು ನಿರೂಪಣೆಯ ಬಳಸುದಾರಿಯಿಂದಾಗಿ ಪೈಯವರ ಸಂಶೋಧನೆ ಸಾಮಾನ್ಯ ಓದುಗರಿಗೆ ಕೈಗೆಟಕದ ದ್ರಾಕ್ಷಿಯಾಗುವ ಭಯವಿದೆ. ವಿಚಾರದಲ್ಲಿ ಶೀಘ್ರನಿರ್ಣಯ, ಕಲ್ಪನೆಯ ಮೇಲುಗೈ, ದೂರಾನ್ವಯ ದೋಷ ಮುಂತಾದ ಕೆಲವು ಕಾರಣಗಳಿಂದಲೂ ಪೈಯವರ ಸಂಶೋಧನೆಯ ತೀರ್ಮಾನಗಳು ಕೊಂಚ ಮಸುಕಾಗುವುತ್ತದೆಂಬುದು ವಿದ್ವಾಂಸರ ಅಭಿಪ್ರಾಯ. ಆದರೆ ಅವರು ಸಂಗ್ರಹಿಸಿಕೊಡುವ ವಿಪುಲವಾದ ವಿಷಯ ಸಂಪತ್ತನ್ನು ಕಂಡಾಗ ನಿಜವಾದ ಸಂಶೋಧನಾಸಕ್ತರಿಗೆ ಅವು ಎಂಥ ಅಕ್ಷಯ ನಿಧಿಯೆನ್ನುವುದೂ ವೇದ್ಯವಾಗುತ್ತದೆ.

**ಜ್ಯೋತಿಷ್ಯಾಸ್ತ್ರ**

ಗೋವಿಂದ ಪೈಯವರಿಗೆ ಇತಿಹಾಸದ ಬಗ್ಗೆ ಎಷ್ಟು ಪಾಂಡಿತ್ಯ ಮತ್ತು ಒಲವಿತ್ತೋ ಅದಕ್ಕಿಂತ ಕಡಿಮೆಯಲ್ಲದ ಒಲವು ಖಗೋಳ, ಜ್ಯೋತಿಷ್ಯಾಸ್ತ್ರಗಳ ವಿಚಾರದಲ್ಲೂ ಇತ್ತೆಂಬುದು ತಿಳಿದುಬರುತ್ತದೆ. ಇದರಿಂದಾಗಿ ಅವರಿಗೆ ಇತಿಹಾಸದ ಗರ್ಭವನ್ನು ಶೋಧಿಸುವುದು ಸುಲಭ ಸಾಧ್ಯವಾಯ್ತು. ಚಾಲುಕ್ಯ ರಾಜ ಆರನೆಯ ವಿಕ್ರಮಾದಿತ್ಯ, ಬುದ್ಧ, ಮಹಾವೀರರ ಪರಿನಿರ್ವಾಣಗಳನ್ನೂ ಶಕ, ಪಲ್ಲವ, ಕುಷಾಣ, ವಾಕಾಟಕ, ಸಾತವಾಹನ, ಕದಂಬ ಮುಂತಾದ ರಾಜವಂಶಗಳ ವಂಶಾವಳಿ, ಕಾಲನಿರ್ಣಯಗಳನ್ನೂ ಮಾಡಿದ ಅವರು ತಮ್ಮ ತಿಳಿವಿಗೆ ಪೂರಕವಾಗಿ 'ಅಭಿಲಷಿತಾರ್ಥ ಚಿಂತಾಮಣಿ,' 'ವಿದ್ಯಾಮಾಧವೀಯ' ಮುಂತಾದ ಉದ್ಗ್ರಂಥಗಳನ್ನೂ ಪರಿಶೀಲಿಸುತ್ತಿದ್ದರು. ಪೈಯವರು

ಜ್ಯೋತಿರ್ಗಣಿತದಲ್ಲಿ ತುಂಬ ತೀಕ್ಷ್ಣಮತಿಗಳಾಗಿದ್ದರು ಎಂಬುದನ್ನು ವೈದ್ಯಗುರು ಎಂ. ಆರ್. ಭಟ್ ದಾಖಲಿಸುತ್ತಾರೆ.[೪೩] ಸ್ವಾಮಿ ಆದಿ ದೇವಾನಂದರು ಕೂಡ ಪೈಯವರನ್ನು ಕುರಿತು 'ಕೆಲವು ನೆನಪುಗಳು' ಲೇಖನದಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿದ್ದಾರೆ.[೪೪]

ಪೈಯವರು ಸಂಗೀತಪ್ರಿಯರೂ, ಸಂಗೀತಜ್ಞರೂ ಆಗಿದ್ದರು. ಸ್ವರಗಳ ವಿಚಾರದಲ್ಲಿ ಅವರು ಬರೆದ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹಾಗೆಯೇ ತತ್ವಶಾಸ್ತ್ರದಲ್ಲಿ ಪೈಯವರಿಗಿದ್ದ ಪರಿಣತಿಗೆ ಅವರು ಇಂಗ್ಲೆಂಡಿನ ತತ್ವಜ್ಞಾನಿ ಹರ್ಬರ್ಟ್ ಸ್ಪೆನ್ಸರ್‌ರವರ ಗ್ರಂಥವನ್ನು ಓದಿ ತನ್ನ ಅಭಿಪ್ರಾಯ ಬರೆದುದಕ್ಕೆ ಸ್ಪೆನ್ಸರ್ ಉತ್ತರ ಬರೆದಿರುವುದೇ ಸಾಕ್ಷಿ.

**ಇಂಗ್ಲಿಷ್ ಬರಹಗಳು**

ಗೋವಿಂದಪೈಯವರು ಹಲವಾರು ಪ್ರಬಂಧಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. ಸ್ವತಂತ್ರವಾದ ೧೮ ಪ್ರಬಂಧಗಳನ್ನೂ ರಚಿಸಿದ್ದಾರೆ. The Chronology of sakas, Pallavas and Kushans, The later Satavahanas, Date of Ghorakhnath ಇವೆಲ್ಲ ಪೈಯವರು ಇಂಗ್ಲಿಷ್ ಭಾಷೆಯಲ್ಲಿ ಬರೆದ ಸಂಶೋಧನೆಗಳು.

**ಕೊಂಕಣಿ ಭಾಷೆಯ ಬರಹಗಳು**

ಪೈಯವರು ತಮ್ಮ ಮಾತೃಭಾಷೆಯಾದ ಕೊಂಕಣಿ ಭಾಷೆಯಲ್ಲೂ ಬರೆದಿದ್ದಾರೆ. ಮಂಜೇಶ್ವರ ದೇವಸ್ಥಾನಕ್ಕೆ ಸಂಬಂಧಿಸಿದ 'ಮಂಜೇಶ್ವರ ಕ್ಷೇತ್ರಾಚಿ ಪ್ರಾಚೀನತಾ,' 'ಮಾರ್ಗಶಿರ ಮಾಸು,' 'ತೀನಿದೇವ್ಯೋ' ಇವೆಲ್ಲ ಅವರ ಕೊಂಕಣಿ ಭಾಷೆಯ ಲೇಖನಗಳು.

**ಭಾಷೆ, ವ್ಯಾಕರಣ, ಪದ, ಛಂದಸ್ಸು**

ಭಾಷೆ, ವ್ಯಾಕರಣ, ಪದವಿಚಾರ, ಛಂದಸ್ಸುಗಳಿಗೆ ಸಂಬಂಧಿಸಿದಂತೆ ಪೈಯವರು ಅನೇಕ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಕರ್ನಾಟಕದ ನಿಷ್ಪತ್ತಿ, ತಿಂಗಳು, ಗೊಮ್ಮಟ, ವೃಷಲ ಇತ್ಯಾದಿಗಳೆಲ್ಲ ಈ ವರ್ಗಕ್ಕೆ ಸಂಬಂಧಿಸಿದ ಲೇಖನಗಳು.

**ಇತರ ಬರಹಗಳು**

ಕವನ, ಕಾವ್ಯ, ನಾಟಕ, ಸಂಶೋಧನೆಗಳಲ್ಲದೆ ಪೈಯವರು ರಚಿಸಿದ ಅನೇಕ ವೈಚಾರಿಕ ಮತ್ತು ಸರಳ ಪ್ರಬಂಧಗಳು, ವ್ಯಕ್ತಿಚಿತ್ರಗಳು, ಆತ್ಮಕಥನ, ಭಾಷಣ, ಪತ್ರಗಳು, ಮುನ್ನುಡಿ ಇವೆಲ್ಲ ಅಧ್ಯಯನ ಯೋಗ್ಯವಾದ ಅತ್ಯಂತ ಉತ್ಕೃಷ್ಟ ಬರಹಗಳಾಗಿವೆ. 'ಕನ್ನಡದ ಮೊರೆ' ಎಂಬ ಕೃತಿಯಲ್ಲಿ ಪೈಯವರ ಪ್ರಬಂಧ, ಕತೆ, ಕಾದಂಬರಿ, ವಿಮರ್ಶೆಗಳು, ಪಂಜೆ ಮಂಗೇಶರಾಯರು, ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯವರು, ಎಮ್.ಎನ್. ಕಾಮತರು, ಎಮ್.ಆರ್. ಶ್ರೀನಿವಾಸಮೂರ್ತಿ ವ್ಯಕ್ತಿಚಿತ್ರಗಳು, ಆತ್ಮಕಥನ, ಬರಹಗಾರನ ಹಣೆಬರಹ, ಮತ್ತು ೩೪ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರ ಭಾಷಣ – ಹೀಗೆ ೧೩ ಲೇಖನಗಳು ಸಂಚಯನಗೊಂಡಿವೆ.

'ಬರಹಗಾರನ ಹಣೆಬರಹ' ಎನ್ನುವ ಪ್ರಬಂಧ ಪ್ರತಿಯೊಬ್ಬ ಉದಯೋನ್ಮುಖ ಬರಹಗಾರರ ಅನುಭವ ಕಥನದಂತೆ ನಿಕಟವಾಗಿದೆ. ಲೇಖಕರಾದವರು ತಮ್ಮ ಬರಹಗಳನ್ನು ರಚಿಸುವ, ಪ್ರಕಟಿಸುವ ಪೂರ್ವಭಾವಿಯಾಗಿ ಎಷ್ಟೆಲ್ಲ ಮಾನಸಿಕ ಹಿಂಸೆ, ಅಡ್ಡಿ, ಆತಂಕಗಳನ್ನು ಎದುರಿಸಬೇಕಾಗುತ್ತದೆನ್ನುವುದು ಈ ಪ್ರಬಂಧದಲ್ಲಿ ಅತ್ಯಂತ ಹೃದಯಸ್ಪರ್ಶಿಯಾಗಿ ನಿರೂಪಿತವಾಗಿದೆ.

ಇದೇ ಸಂಕಲನದ ಇನ್ನೊಂದು ಲೇಖನ ೧೯೫೦ರಲ್ಲಿ ಮುಂಬೈಯಲ್ಲಿ ನಡೆದ ೩೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪೈಯವರು ಮಾಡಿದ ಅಧ್ಯಕ್ಷ ಭಾಷಣ ವಿದ್ವಾಂಸರ ಮುಕ್ತಕಂಠದ ಪ್ರಶಂಸೆಗೆ ಒಳಗಾಗಿದೆ. 'ವಾಸ್ತವವಾಗಿ ಸಮ್ಮೇಳನಗಳ ಅಧ್ಯಕ್ಷ ಭಾಷಣಗಳು ಚರ್ವಿತಚರ್ವಣಗಳಾಗಿರುತ್ತವೆ. ಸೊಗಸು, ಸ್ವೋಪಜ್ಞತೆಗಳಿಂದ ತುಂಬಿದ ಕೇವಲ ಕೆಲವೇ ಅಧ್ಯಕ್ಷಭಾಷಣಗಳಲ್ಲಿ ಪೈಗಳದೊಂದು'[೪೫] ಎನ್ನುತ್ತಾರೆ ಡಾ. ಹಾ.ಮಾ. ನಾಯಕರು. ಪೈಯವರ ವ್ಯಕ್ತಿತ್ವ, ರಸಿಕತನ, ಜೀವನ ದೃಷ್ಟಿಗಳು ಪ್ರಭಾವಪೂರ್ಣವಾಗಿ ಹೊಮ್ಮಿದ ಅಂದಿನ ಅಧ್ಯಕ್ಷ ಭಾಷಣದಲ್ಲಿ ಅವರು ತಮ್ಮ ಕನ್ನಡಾಭಿಮಾನವನ್ನು ಕುರಿತು ಹೃದಯದಾಳದಿಂದ ಆಡಿದ ಮಾತುಗಳು ಕನ್ನಡಿಗರೆಲ್ಲರೂ ಹೆಮ್ಮೆಪಡುವಂತಿವೆ. ಆದರೆ ಪೈಯವರು ಅಂಥ ಜವಾಬ್ದಾರಿಯನ್ನು ವಹಿಸಲು ಎಷ್ಟು ಹಿಂಜರಿದರು ಎಂಬುದನ್ನು ಶ್ರೀ ಹುರುಳಿ ಭೀಮರಾಯರು ಮನಮುಟ್ಟುವಂತೆ ವಿವರಿಸುತ್ತಾರೆ.[೪೬]

ಈ ಭಾಷಣದಲ್ಲಿ ಕನ್ನಡ ನಾಡು, ನುಡಿ, ಛಂದಸ್ಸು ಹಾಗೂ ಸಾಹಿತ್ಯದ ಪ್ರಾಚೀನತೆಯನ್ನು ಕುರಿತು ಸುದೀರ್ಘವಾಗಿ ಮಾತನಾಡಿದ ಪೈಯವರು ಅನೇಕ ಮುಂಗಾಣ್ಕೆಗಳನ್ನೂ ಕನ್ನಡದ ವೈಶಿಷ್ಟ್ಯಗಳನ್ನೂ ತಿಳಿಸಿರುವುದು ಅತ್ಯಂತ ಮಹತ್ವಪೂರ್ಣವಾಗಿದೆ. ಕನ್ನಡ ಭಾಷೆಯ ಭವಿಷ್ಯವನ್ನು ಕುರಿತು ಎರಡು ಮಾತನಾಡುತ್ತೇನೆಂದು ಹೇಳಿದ ಪೈಯವರು ಕನ್ನಡ ಕಟ್ಟುವ ಕಾಯಕವನ್ನು ಮೊತ್ತಮೊದಲು ಕೈಗೊಳ್ಳಬೇಕಾದುದು ಕವಿಗಳ ಜವಾಬ್ದಾರಿಯೆನ್ನುತ್ತ ಅಥರ್ವವೇದದಲ್ಲಿ ಕವಿಯನ್ನು ಪರಮಾತ್ಮನೆಂದಿರುವುದನ್ನು ಉಲ್ಲೇಖಿಸುತ್ತಾರೆ. (ಪು.೮.೩೨) 'poets are the unacknowledged legislators of the world'ಎಂಬ ಮಾತುಗಳನ್ನು ಉದ್ಧರಿಸಿ ಕವಿಗಳ ಅಸಾಧಾರಣ ಕಲ್ಪಕತೆಯನ್ನು ಎತ್ತಿಹಿಡಿದ ಪೈಯವರು ಕನ್ನಡದಲ್ಲಿ ಹೊಸಪದಗಳ, ಹೊಸಛಂದಸ್ಸಿನ ಸೃಷ್ಟಿಯಾಗಬೇಕು, ಪ್ರಾಚೀನ ಕವಿಗಳ ಪ್ರಯೋಗವನ್ನು ಮತ್ತೆ ಬಳಕೆಗೆ ತರಬೇಕು ಎಂದಿರುವುದು ತುಂಬ ಪ್ರಸ್ತುತವಾದ ವಿಚಾರ. ಪಂಪನ ಅವಯವದೆ = ಬಲುಬೇಗನೆ ಎಂಬರ್ಥದ ಪದವನ್ನು ನಿದ್ರೆಹೋಗುವದರಲ್ಲಿಂದ ಎಬ್ಬಿಸಬೇಕು, ಒಂದೇ ಅರ್ಥದಲ್ಲಿ ಬಳಕೆಯಾಗುವ ಅನೇಕ ಪದಗಳಿದ್ದರೆ ಅವೆಲ್ಲವನ್ನೂ ಬದುಕಗೊಡಬೇಕು ಎನ್ನುವ ಅವರ ಕಾಳಜಿಯಾಗಲೀ ನಿಶ್ಚಯಾರ್ಥಕ್ಕೆ 'ಕಂಡಿತ' ವೆನ್ನುವುದೇ ಸರಿಯಾದ ಪ್ರಯೋಗವಲ್ಲದೆ ತುಂಡಿಸಿದ ಎಂಬರ್ಥದ 'ಖಂಡಿತ'ವಲ್ಲ, 'ಮುಗಿ' ಎಂಬರ್ಥದಲ್ಲಿ 'ಮುಗಿತಾಯ' ವೆನ್ನುವುದಲ್ಲದೆ ಮುಕ್ತಾಯವಲ್ಲ, ವಿರಳಾರ್ಥದಲ್ಲಿ 'ಅಪೂರ್ವ'ವೆನ್ನುವುದಲ್ಲದೆ 'ಅಪರೂಪ'ವಲ್ಲ ಇವೆಲ್ಲ ತಪ್ಪು ಕಲ್ಪನೆಯಿಂದ ಬಳಕೆ ಯಾಗಿವೆಯೆಂದಿರುವುದಾಗಲೀ ಗಮನಾರ್ಹ ಅಂಶ.

ಪೈಯವರು ಎಷ್ಟು ಸರಳರೋ ಅಷ್ಟೇ ನಿಗರ್ವಿಗಳೂ ಸಂಕೋಚಪರರೂ, ವಿನಯ ಶೀಲರೂ. ಆಗಿದ್ದಾರೆಂಬುದು 'ನಾನು ಬೋಧಕನಲ್ಲ, ಸಾಧಕ, ಆಜೀವ ಶ್ರಾವಕ. ಕೇಳುವಾತನಲ್ಲದೆ ಕೇಳಿಸುವಾತನಲ್ಲ, ಪರರಿಂದ ಕಲಿಯತಕ್ಕವನಲ್ಲದೆ ಪರರಿಗೆ ಕಲಿಸತಕ್ಕವನಲ್ಲ.'[೨೭] ಎನ್ನುವ ಮಾತುಗಳಿಂದ ವೇದ್ಯವಾಗುತ್ತದೆ.

ವ್ಯಕ್ತಿ ಚಿತ್ರಗಳನ್ನು ಬರೆದ ಪೈಯವರು ಅದನ್ನು ತುಂಬ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ: 'ದಿನೇ ದಿನೇ ನಾವು ಅನ್ನವನ್ನೇ ಉಣ್ಣುತ್ತೇವಾದರೂ ಅದು ನಮಗೆ ಸರ್ವಥಾ ಬೇಡವೆನಿಸುವುದಿಲ್ಲ. ಮತ್ತೂ ಮತ್ತೂ ಎಂದಿಗೂ ಅದು ಬೇಕೆನಿಸುತ್ತದೆ. ಆದರೆ ದಿನಾಗಲೂ ಒಂದೇ ಪದಾರ್ಥ, ಒಂದೇ ಕಜ್ಜಾಯ, ಒಂದೇ ಹೋಳಿಗೆಯನ್ನು ಮೆಲ್ಲುತ್ತಿದ್ದರೆ ಅದನ್ನು ತಡೆದುಕೊಳ್ಳುವುದಕ್ಕಾಗುವುದಿಲ್ಲ. ಕೆಲವು ದಿನಗಳಿಗಾದರೂ ಅದನ್ನು ಬಿಟ್ಟು ಬಿಡೋಣವೆನಿಸುತ್ತದೆ. ಮತ್ತೆಷ್ಟೋ ತಿನಿಸುಗಳಿವೆ. ಅವುಗಳಲ್ಲಿ ಇದು ಒಬ್ಬನಿಗಾಗುವುದಿಲ್ಲ, ಅದು ಮತ್ತೊಬ್ಬನಿಗೆ ಒಗ್ಗದು, ಉದು ಬೇರೊಬ್ಬನಿಗೆ ಸೇರದು. ಅಂಥವನ್ನು ಆಯಾ ಮಂದಿ ಸರ್ವಥಾ ಒಲ್ಲರು. ಅವನ್ನು ಎಂದಿಗೂ ಮುಟ್ಟರು. ಹಾಗೆಯೇ ಮನುಷ್ಯರಾದರೂ. ಕೆಲವರು ಯಾವಾಗಲೂ ನಮಗೆ ಬೇಕು. ಕೆಲವರು ಯಾವಾಗಾದರೊಮ್ಮೆ ಬೇಕು, ಕೆಲವೊಮ್ಮೆ ಬೇಡ. ಇನ್ನು ಕೆಲವರು ಯಾವಾಗಲೂ ಬೇಡ...'[೨೮] ಎಂ.ಆರ್. ಶ್ರೀನಿವಾಸ ಮೂರ್ತಿಯವರು ತಮ್ಮ ೬೧ನೆಯ ವಯಸ್ಸಿನಲ್ಲಿ ಕಾಲವಶರಾದ ವಾರ್ತೆಯಿಂದ ನೊಂದ ಪೈಯವರು 'ಸಂಜೆ ಆರೂವರೆ – ಏಳು ಗಂಟೆಗೆ ಕಂತಬೇಕಾದ ಹೊತ್ತು ನಾಲ್ಕು – ನಾಲ್ಕೂವರೆ ಗಂಟೆಗೆ ಮುಳುಗಿದುದು ಶೋಚನೀಯ.'[೨೯] ಎನ್ನುತ್ತಾರೆ. ಕಿಟೆಲ್, ಎಂ.ಎನ್. ಕಾಮತ್, ಪಂಜೆ ಮಂಗೇಶರಾಯರು, ಎಸ್.ಎಸ್. ಕಿಲ್ಲೆ, ಬಿ.ಎಂ.ಶ್ರೀ. ಮುಂತಾದವರ ಕುರಿತು ತಮಗಿರುವ ಆತ್ಮೀಯ ಸಂಬಂಧವನ್ನೂ ಅವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆಗಳನ್ನೂ ಆಪ್ತವಾಗಿ ಚಿತ್ರಿಸುತ್ತಾರೆ. ಪೈಯವರ ಗದ್ಯ ಪ್ರಬಂಧವಾಗಲೀ ವ್ಯಕ್ತಿ ಚಿತ್ರವಾಗಲೀ ನಿರರ್ಗಳವಾಗಿ ಓದಿಸುತ್ತವೆ. ನುಡಿಗಟ್ಟುಗಳು, ಗಾದೆಮಾತುಗಳು, ಸರಸತೆ, ನವಿರಾದ ಹಾಸ್ಯದಿಂದ ಕೂಡಿದ ನಿರೂಪಣೆಯ ಧಾಟಿಯಿಂದ ಓದುಗರಲ್ಲಿ ಕಚಗುಳಿಯ ಅನುಭವವಾಗುತ್ತದೆ. ಉದಾಹರಣೆಗೆ: '...ಹತ್ತು ಇಪ್ಪತ್ತು ಮಾರು ಮುಂದೆ ಸರಿಯುವಷ್ಟರಲ್ಲಿ ನಮ್ಮ ಕಡೆಗೆ ಒಬ್ಬರೇ ಬರುತ್ತಿರುವ ಪಂಜೆಯವರನ್ನು ಕಂಡೆವು ಸ್ವಪ್ನೋನು ಮಾಯಾ ನು ಮತಿಭ್ರಮೋನು! ನನ್ನ ಕಣ್ಣುಗಳನ್ನೊಮ್ಮೆ ನಂಬಲಾಗಲಿಲ್ಲ. ಕಂಕುಳಲ್ಲಿ ಹರಕು ಕೊಡೆ, ನಡೆವಾಗಲೂ ನೆಲದಲ್ಲಿ ನೆಟ್ಟ ದೃಷ್ಟಿ, ಮನಸ್ಸಿನಲ್ಲೇ ಮಾತುಕತೆ, ಅದೇ ಯಾವಂದಿನ ಜೂಗು ನಡೆ. ಪುಷ್ಯಮಾಸದಲ್ಲಿ ಮಿಂಚನ್ನು ಕಂಡಂತಾಯ್ತು. ಸಂತೋಷ ಬೇರೆ, ಆಶ್ಚರ್ಯ ಬೇರೆ. ನನಗೊಮ್ಮೆ ಜಲ್ಲೆನಿಸಿತು. ೩ ವರ್ಷ ಕಾಣದವರನ್ನು ಆವಂದು ಅಕಾಂಡವಾಗಿ ಕಂಡು. ಸ್ವಪ್ನೇಪಿ ನಿರೀಕ್ಷಿಸದವರನ್ನು ಆವಾಗ ಜಗ್ಗನೆ ಸಮೀಪಿಸಿ ನಗಾಡಿದರು, ಕೈ ಹಿಸುಕಿದರು, ಕ್ಷೇಮ ಕುಶಲವನ್ನು ವಿಚಾರಿಸಿದರು...'[೩೦] ಪಂಜೆಯವರ ಬಗ್ಗೆ ಬರೆಯುತ್ತ 'ಅವರೊಂದಿಗೆ ಮಾತನಾಡುವುದೆಂದರೆ ಅದೊಂದು ಚಿಕ್ಕ ಸಮಾರಾಧನೆ. ಮಾತಿದೆ, ಕಥೆಯಿದೆ, ಕಟಕಿಯಿದೆ, ಗಾದೆಯಿದೆ, ಗಾನವಿದೆ, ಗೇಲಿಯಿದೆ, ಎಲ್ಲಾ ವಿಧದ ಭಕ್ಷ್ಯ ಭೋಜ್ಯಗಳಿವೆ ಅಲ್ಲಿ. ನನ್ನ ಆ ಚಿಕ್ಕಂದಿನಲ್ಲಿ ಅದನ್ನು ಬಿಟ್ಟರೆ ನನಗೆ

ಬೇರೆ ಪ್ರಸ್ತವಿದ್ದಿಲ್ಲ, ಹಬ್ಬವಿದ್ದಿಲ್ಲ.'[೫೧] ಎನ್ನುತ್ತಾರೆ. ಕನ್ನಡದಲ್ಲಿ ಸಣ್ಣ ಕಥೆಗಳಿಗೂ, ಶಿಶು ಸಾಹಿತ್ಯಕ್ಕೂ ಪಂಜೆಯವರೇ ಮೊದಲಿಗರೆಂದು ನಿಖರವಾಗಿ ತಿಳಿಸಿದವರು ಗೋವಿಂದ ಪೈಯವರು. ಬರೆದ ವ್ಯಕ್ತಿ ಚಿತ್ರಗಳಲ್ಲೆಲ್ಲ ಪಂಜೆಯವರ ಬಗ್ಗೆ ಬರೆದ ಲೇಖನ ಅತ್ಯುತ್ಕೃಷ್ಟವಾದುದೆಂದು ವಿಮರ್ಶಕರ ಅಭಿಪ್ರಾಯ.

**ಪತ್ರಗಳು**

'ಅವರು ತಮ್ಮ ಸಮ್ಯಕ್ ದರ್ಶನ-ಜ್ಞಾನ-ಚಾರಿತ್ರಗಳಿಂದ ಎಷ್ಟು ದೊಡ್ಡವರಾಗಿದ್ದರೋ ಅವರ ಪತ್ರವ್ಯವಹಾರಗಳೂ ಅಷ್ಟೇ ದೊಡ್ಡದಾಗಿರುತ್ತಿದ್ದುವು. 'ಪೈಯವರ ಪತ್ರಗಳ ಬಗ್ಗೆ ಜಿ.ಪಿ. ರಾಜರತ್ನಂರವರ ಮಾತುಗಳನ್ನು ಡಿ. ವಿಜಯಾರವರು ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.[೫೨] ತಮಗೆ ಬಂದ ಪತ್ರಗಳ ಬಗ್ಗೆ ಪೈಯವರು ಅತ್ಯಂತ ಗೌರವ, ಪ್ರೀತಿ, ಕಾಳಜಿಗಳನ್ನು ವಹಿಸುತ್ತಾರೆಂಬುದನ್ನು ಅವರ ಜತೆ ಪತ್ರ ವ್ಯವಹಾರ ಮಾಡಿದವರೆಲ್ಲರ ಅನುಭವ. ಪತ್ರಗಳನ್ನು ಬರೆದವರಾಗಲೀ ಪುಸ್ತಕಗಳನ್ನು ಕಳುಹಿಸಿದವರಾಗಲೀ ಅವರು ಯಾರು ಎಂಬುದನ್ನು ನೋಡದೆ ಅದು ಏನು ಎಂಬುದನ್ನಷ್ಟೇ ಗಮನಿಸುವ ಗೋವಿಂದ ಪೈಯವರಿಗೆ ಎಷ್ಟೇ ಕಾರ್ಯಭಾರಗಳಿದ್ದರೂ ಎಷ್ಟೇ ತೊಂದರೆಗಳಿದ್ದರೂ ಶೀಘ್ರವಾಗಿ ಸ್ಪಂದಿಸಿ ಬರೆದವರ ಉದ್ದೇಶವನ್ನೂ ಚಾಚೂ ತಪ್ಪದೆ ನಡೆಸುವ ಉದಾರವಾದ ಮನಸ್ಸಿತ್ತು. ತಮ್ಮ ವಿಳಾಸಕ್ಕೆ ಬಂದ ಪ್ರತಿಯೊಂದು ಪತ್ರವನ್ನೂ ಪುಸ್ತಕವನ್ನೂ ಆಮೂಲಾಗ್ರವಾಗಿ ಓದಿ, ಆಸ್ವಾದಿಸಿ, ಮೆಚ್ಚುವ, ಹಿತಪ್ರತಿಯವಾಗಿ ತಿದ್ದಿ ಮಾರ್ಗದರ್ಶನ ಮಾಡುವ ಉನ್ನತ ಗುಣ ಅವರದು. ತಮ್ಮ ಇಳಿವಯಸ್ಸಿನಲ್ಲೂ ಈ ನಿಷ್ಠೆಗೆ ಅವರು ಭಂಗ ತಂದದ್ದಿಲ್ಲ. ಎಸ್. ವೆಂಕಟಾಚಲಪತಿ ಯೆಂಬವರು 'ಅಯೋಧ್ಯೆ'ಗೆ 'ಸಾಕೇತ' ಎಂಬ ಹೆಸರು ಬರುವುದಕ್ಕೆ ಕಾರಣವೇನು? ಮತ್ತು ಅದರ ಅರ್ಥವೇನು? ಮೂಲ ರಾಮಾಯಣದಲ್ಲಿ ಆ ಹೆಸರೇ ಇಲ್ಲವಲ್ಲ? ಎಂದು ಕೇಳಿದ ಪತ್ರಕ್ಕೆ ಆಗ ಪೈಯವರಿಗೆ ಎಪ್ಪತ್ತೆಂಟರ ಹರೆಯ, ಅನಾರೋಗ್ಯ ಬೇರೆ. ಅಂಥ ಸಮಯದಲ್ಲೂ ಆ ವಿಷಯಕ್ಕೆ ಸಂಬಂಧಿಸಿದ ಮೂಲವನ್ನೆಲ್ಲ ತಪಸ್ಪರ್ಶಿಯಾಗಿ ಅಧ್ಯಯನ ಮಾಡಿ ಅನ್ಯಭಾಷೆಗಳಿಂದ ಮಾಹಿತಿಗಳನ್ನು ಶೋಧಿಸಿ, ಸಂಗ್ರಹಿಸಿ ಸತತವಾಗಿ ಮೂರು ಪತ್ರಗಳನ್ನು ಬರೆದು ಉತ್ತರಿಸಿದ್ದಾರೆಂದರೆ ಪೈಯವರ ಸೌಜನ್ಯ, ಸತ್ಯಾನ್ವೇಷಣೆಯ ಅಪೇಕ್ಷೆ ಎಷ್ಟು ತೀವ್ರವಾದುದು ಎಂಬುದನ್ನು ಊಹಿಸ ಬಹುದು. ತಮಗೆ ತಿಳಿಸಲಾಗದ ವಿಚಾರದಲ್ಲೂ ಅಷ್ಟೇ ಸಹೃದಯತೆಯಿಂದ ವರ್ತಿಸುವ ನಿಗರ್ವಿಗಳು ಅವರು. 'ನಿಮ್ಮ ನೆರವಿಗೆ ನಾನು ಬರಲಾರೆನಾದ ನನ್ನ ದುರದೃಷ್ಟದ ಬಗ್ಗೆ ತುಂಬ ವ್ಯಸನ ಪಡುತ್ತೇವೆ.'[೫೩] ಆ್ಯಂಟನ್ ಚೆಕಾವ್, ಗಾಯ್ ದ ಮೊಪಾಸ, ಫ್ರಾನ್ಜ್ ಕಾಫ್ಕ ಮೊದಲಾದ ಅನೇಕ ಸಾಹಿತಿಗಳು ವಿಶ್ವ ಪತ್ರಸಾಹಿತ್ಯಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ ಪೈ ಪತ್ರಗಳು ಈ ಕ್ಷೇತ್ರದ ವಿಕಸನ ಶೀಲ ಇತಿಹಾಸಕ್ಕೆ ಐತಿಹಾಸಿಕ ಕೊಡುಗೆಗಳು'[೫೪] ಎಂಬ ಡಾ. ಡಿ. ವಿಜಯಾರವರ ಮಾತುಗಳನ್ನು ಸ್ಮರಿಸಬಹುದು.

ಕೃತಿಗಳ ವಿಚಾರ ಮಾತ್ರವಲ್ಲ ತಮ್ಮ ವಿಳಾಸಕ್ಕೆ ಒಂದು ಹಸ್ತಪ್ರತಿ ಬಂದರೂ ಅಷ್ಟೇ ಆದರಾಭಿಮಾನಗಳಿಂದ ಕೈಗೆತ್ತಿ ಆಶೀರ್ವದಿಸಬಲ್ಲವರು ಪೈಯವರು. ೫-೭-೫೩ರಂದು

ಅವರು 'ಹಂಸ' ಎಂಬ ಹಸ್ತಪತ್ರಿಕೆಯ ಬಗ್ಗೆ ಬರೆವ ಮಾತುಗಳು ಮಾನನೀಯವಾಗಿವೆ. 'ಇದೊಂದು ಕೈಬರಹದ ಪತ್ರಿಕೆ. ಇಂಥ ಪತ್ರಿಕೆಗೂ ಅಚ್ಚಿನ ಪತ್ರಿಕೆಗೂ ಎಷ್ಟರ ನಂಟೆಂದರೆ ಬಾಳೆಯ ಮೋತೆಗೂ ಗೊನೆಗೂ ಇರುವಷ್ಟು ಮುಂಚೆ ಮೋತೆ ಮತ್ತೆ ಗೊನೆ. ಗೊನೆಯ ಹಣ್ಣುಗಳಾನ್ನಾದರೆ ಹಲಮಂದಿ ಮೆಲಬಹುದು. ಮೋತೆಯ ಜೇನಾದರೂ ಹೆಚ್ಚು ಮಂದಿಗೆ ಬಾರದು. ಆ ಕಾರಣವೇ ಆ ಜೇನನ್ನು ಅಲ್ಲಗಳೆಯಬೇಕೆ? ಅದು ತುಸುವೇ ಆದರೇನು? ಮುಂದಣ ಹಣ್ಣುಗಳ ಪೂರ್ವರುಚಿಯಲ್ಲವೇ ಆ ಜೇನು?'[೫೫].

**ಮುನ್ನುಡಿಗಳು**

ತಮ್ಮ ಕೃತಿಗಳಿಗೂ ಇತರರ ಕೃತಿಗಳಿಗೂ ಪೈಯವರು ಬರೆದ ಮುನ್ನುಡಿಗಳೂ ಗದ್ಯರಚನೆಯ ಉತ್ತಮ ಮಾದರಿಗಳಾಗಿವೆ. ಮುನ್ನುಡಿ ಮತ್ತು ವಿಮರ್ಶೆಗಿರುವ ವ್ಯತ್ಯಾಸವನ್ನು ಪೈಯವರು ಪರಿಭಾವಿಸಿದ ರೀತಿ ಸುಂದರವಾಗಿದೆ: 'ತಾನು ಮುನ್ನುಡಿ ಬರೆವ ಗ್ರಂಥದಲ್ಲಿ ಉಳ್ಳ ಕೊರತೆಗಳನ್ನು ಸುಟ್ಟಿ ತೋರಿಸುವುದು ಮುನ್ನುಡಿಗಾರನ ಕೆಲಸವಲ್ಲ. ಸರ್ವಥಾ ಅಲ್ಲ. ಅದಕ್ಕೆ ಸಹಸ್ರಾಕ್ಷನಾದ ವಿಮರ್ಶಕನಿದ್ದಾನೆ. ಭಾಪು! ಭಾಪು! ಎಂದು ತನ್ನ ಲೇಖಕನ ಬೆನ್ನು ಚಪ್ಪರಿಸುವುದೂ, ಜಾಗು ಜಾಗೆಂದು ಆತನನ್ನು ಹುರಿದುಂಬಿಸುವುದೂ ಇದಷ್ಟೇ ಮುನ್ನುಡಿಗಾರನ ಕೆಲಸ...'[೫೬] ಹಾಗೆಂದು ಪೈಯವರ ಮುನ್ನುಡಿಗಳು ಕೇವಲ ಲೇಖಕರ ಮೆಚ್ಚುಗೆ ಪ್ರಶಂಸೆಗಳಿಗಾಗಿ ಮಾತ್ರ ಮೀಸಲಾಗಿದೆ ಎಂದು ಭಾವಿಸುವಂತಿಲ್ಲ. ಅವರು ಈ ಕೃತಿಯ ವಸ್ತು, ವಿಚಾರಗಳಿಗೆ ಸಂಬಂಧಿಸಿ ದೀರ್ಘವಾದ ವ್ಯಾಖ್ಯಾನಗಳನ್ನು ನೀಡಬಲ್ಲರು; ಸಂಶೋಧನೆಯನ್ನು ಮಾಡಬಲ್ಲರು; ಕವಿಕರ್ಮಗಳ ಮಹತ್ವವನ್ನು ಸಾರಬಲ್ಲರು. ಜೆ.ಪಿ.ರಾಜರತ್ನಂ, ಪಾಂಡೇಶ್ವರ ಗಣಪತಿ ರಾವ್, ಸಾಲಿ ರಾಮಚಂದ್ರ ರಾಯರು, ಡಾ. ಎಸ್.ಪಿ. ಭಟ್, ಅಮ್ಮೆಂಬಳ ಶಂಕರನಾರಾಯಣ, ಪದ್ಮನಾಭ ಸೋಮಯಾಜಿ, ಲೀಲಾಬಾಯಿ ಕಾಮತ್, ಸರಸ್ವತೀ ಬಾಯ್ ರಾಜವಾಡೆ (ಗಿರಿಬಾಲೆ) ಮುಂತಾದವರ ಕೃತಿಗಳಿಗೆ ಪೈಯವರು ಮುನ್ನುಡಿಗಳನ್ನು ಬರೆದಿದ್ದಾರೆ. ಸಾಲಿ ರಾಮಚಂದ್ರರಾಯರ 'ಚಿತ್ರಸೃಷ್ಟಿ' ಎಂಬ ಕೃತಿಗೆ ಬರೆದ ಮುನ್ನುಡಿಯಲ್ಲಿ ಅವರು ತಮ್ಮ ಗದ್ಯದ ಹದವನ್ನೂ ವಿಚಾರದ ಪಾಕವನ್ನೂ ಅತ್ಯಂತ ಹೃದಯಂಗಮವಾಗಿ ಅಭಿವ್ಯಕ್ತಿಸಿದ್ದಾರೆ. 'ಬ್ರಹ್ಮ ಸೃಷ್ಟಿಯಲ್ಲಿ ಮಿಂಚುಹುಳಗಳು ಜೇನು ಮಾಡವು, ಜೇನು ಹುಳಗಳು ಮಿಂಚು ನೀಡವು. ಕವಿಗಳ ಚಿತ್ರಸೃಷ್ಟಿಯಲ್ಲಾದರೆ ಒಮ್ಮೆಯ್ಯಾದ ವಾಗರ್ಥದ ಹೊರಗೊಳಗಣ ನುಡಿತದಲ್ಲಿ ಮಿಂಚೂ ಇದೆ, ಬಗೆತದಲ್ಲಿ ಜೇನೂ ಇದೆ. ಆ ನವಾಯಿಯನ್ನು ಕಾಂಬಾತನಿಗೆ ಕವಿತಾದೃಷ್ಟಿ ಬೇಕು.'[೫೭]

**ನಿರಪೇಕ್ಷ ಭಾವ**

ತಮ್ಮ ಕೃತಿಗಳಿಗೆ ಜಗದ್ವಿಖ್ಯಾತವಾಗಬಲ್ಲ ಸತ್ವ, ಶಕ್ತಿಗಳಿದ್ದರೂ ಗೋವಿಂದ ಪೈಯವರು ದಿವ್ಯನಿರಪೇಕ್ಷಭಾವನೆಯಿಂದ ತಮ್ಮ ವಿದ್ವತ್ತನ್ನು ಸಾಕಾರಗೊಳಿಸಿದ್ದಾರೆ. ತಮ್ಮ ಕೃತಿಗಳ ಪ್ರಕಟನೆಯ ವಿಚಾರದಲ್ಲೂ ಅವರು ಮುನ್ನುಗ್ಗಿ ಹೋದವರಲ್ಲ. 'ಕಡಲಕರೆಯಲ್ಲಿ

ಹೊತ್ತುಗಳೆಯಲೆಂದೇ ಆಡುತ್ತಿರುವ ಯಾವೊಂದು ಮಗುವಾದರೂ ಅಲ್ಲಲ್ಲಿ ಮೇಲಕ್ಕೆ ಉರುಳಿದ ಚಿಪ್ಪುಗಳನ್ನು ತಾನು ಹೆಕ್ಕಿದಂತೆ ಮರಳಿ ತೆರೆಗಳ ಆಳಕ್ಕೆ ಒಗೆದು ಬಿಡದೆ ಅವನ್ನು ತನ್ನ ಕಣ್ಣ ಮುಂದೆ ಒಟ್ಟು ಹಾಕುವಂತೆ, ಅಲ್ಲಲ್ಲಿ ಚೆದರಿದ ನನ್ನೀ ಕೆಲವು ಕವಿತೆಗಳನ್ನು ಅಂದಂದಿನ ಮರೆಯಿಂದೆತ್ತಿಕೊಂಡು ಹೀಗೆ ಸಂಗ್ರಹವಾಗಿ ಕೂಡ ಹಾಕಿರುವೆನಷ್ಟೆ. ಅಥವಾ ಯಾವಾವೆಡೆಯಲ್ಲಿರುವ ತನ್ನ ಮಕ್ಕಳನ್ನು ಒಟ್ಟಿಗೇ ಒಮ್ಮೆ ನೋಡಬೇಕೆಂದು ಕುತೂಹಲಿಸಿ ಅವರೆಲ್ಲರನ್ನೂ ತನ್ನ ಬಳಿಗೆ ಬರಿಸಿಕೊಂಡು ಸುಖಿಸುವ ತಾಯ ಮಮತೆಯಿಂದ ಇವನ್ನು ಹೀಗೆ ಸಂಗ್ರಹಿಸಿರುವೆನೆಂದರೂ ಸರಿಯೇ. ಆದರೆ ಈ ಬಗೆಯ ಮರುಕಾಣಿಕೆಯ ಅವಕಾಶವನ್ನು ಇವಕ್ಕೆ ಇತ್ತುದರಿಂದ ತಾನೆ ಇವುಗಳ ಜೀವನಾವಧಿಯನ್ನು ಹೆಚ್ಚಿಸುವೊಂದು ಹಂಚಿಕೆಯನ್ನೂ ಹೂಡಿದಂತಾಗದೇ ಎಂದು ರವಷ್ಟಾದರೂ ವಂಚಿಸಿಕೊಳ್ಳಲೊಲ್ಲೆ. ಏಕೆಂದರೆ ಅದೊಂದು ನನ್ನಳವೂ ಅಲ್ಲ, ಯಾರಳವೂ ಅಲ್ಲ, ದೈವಾಯತ್ತವಷ್ಟೆ. ತಾಯಿ ಮಕ್ಕಳನ್ನು ಹೆರಬಲ್ಲಳೇ ಹೊರತು ಅವಕ್ಕೆ ಆಯಸ್ಸನ್ನು ಕೊಡಬಲ್ಲಳೇ'[೫೮] ಎಂಬ ಮಾತುಗಳು ಅವರ ನಿಸ್ವಾರ್ಥ ಮನೋಭಾವ ಹಾಗೂ ಕೃತಿಗಳ ಬಗೆಗಿನ ಅವರ ಅಕ್ಕರೆ, ಕಾಳಜಿಗಳನ್ನೂ ಲೇಖಕನಿಗಿರಬೇಕಾದ ವಿವೇಕ, ಜೀವನಾನುಭವ, ದೂರದರ್ಶಿತ್ವವನ್ನೂ ಮನಗಾಣಿಸುತ್ತವೆ. ಈ ಗದ್ಯದ ಭಾಷೆಯಾಗಲೀ, ಅರ್ಥವಾಗಲೀ ಎಷ್ಟೊಂದು ಧ್ವನ್ಯಾತ್ಮಕವಾಗಿದೆಯೆಂದು ಬೇರೆ ಹೇಳಬೇಕಿಲ್ಲ.

**ಜೀವನದಲ್ಲಿ ಸಾಹಿತ್ಯದ ಸ್ಥಾನ**

ಬದುಕಿನಲ್ಲಿ ಸಾಹಿತ್ಯದ ಸ್ಥಾನಮಾನಗಳ ಬಗ್ಗೆ ಗೋವಿಂದ ಪೈಯವರ ಪ್ರಬುದ್ಧ ಚೇತನ, ನಿಕಷಮತಿ, ವಿವೇಕದ ವಾಣಿ ಮೊಳಗಿದ್ದು ಹೀಗೆ: 'ಈ ಸಂಸಾರದಲ್ಲಿ ಸಾಹಿತ್ಯವು ಕಪ್ಪಾನೆ ನಿಕಷದಲ್ಲಿ ತೊಳಗುತ್ತಿರುವ ಚಿನ್ನದ ಒರೆಯಂತಿರಬೇಕು. ದಪ್ಪಾನೆ ಮುಗಿಲಲ್ಲಿ ಬೆಳಗುತ್ತಿರುವ ಮಿಂಚಿನ ಗೆರೆಯಂತಿರಬೇಕು. ಆ ಸಾಹಿತ್ಯವು ಸತ್ಯಂ ಶಿವಂ ಸುಂದರಮ್ ಆಗಿರಬೇಕು. ಇವರಲ್ಲಿ ಮಧುರವೂ ಲಲಿತವೂ ಶಾಂತವೂ ಶೃಂಗಾರವೂ ಹಾಸ್ಯವೂ ವೀರವೂ ರುದ್ರವೂ ಮೊದಲಾದ ಗುಣಗಳೆಲ್ಲವೂ ಅಡಕವಾಗಿದೆ. ಮಳೆವಿಲ್ಲಿನ ಏಳು ಬಣ್ಣಗಳ ಬೆರಕೆಯಿಂದ ನೇಸರಿನ ಬೆಳಕಾಗುವಂತೆ ಇವೆಲ್ಲವೂ ಕೂಡಿದಲ್ಲೇ ಸಾಹಿತ್ಯ. ಸಾಹಿತ್ಯದಲ್ಲಿ ಮಾನುಷಿಕವಾದ ಎಲ್ಲವಕ್ಕೂ ಎಡೆ ಇರಬೇಕು. ಕೊನೆಗೆ ಅಶ್ಲೀಲಕ್ಕೂ ಸ್ಥಾನವಿರಬೇಕು. ಮನುಷ್ಯನ ಹುಟ್ಟೇ ಅಶ್ಲೀಲದಿಂದ ಆಗಿರುವಲ್ಲಿ, ಪ್ರಕೃತಿ ಛಾಯಾಗ್ರಹದಂತಿರುವ ಸಾಹಿತ್ಯದಿಂದ ಅಶ್ಲೀಲವನ್ನು ತೊಡೆದುಬಿಡುವುದಾದರೂ ಹೇಗೆ? ಆದರೆ ಅಶ್ಲೀಲದ ಸೊಗಡು ಹದ ಮೀರಬಾರದು. ಅದಕ್ಕೆ ತಕ್ಕ ಮರ್ಯಾದೆ ಇರಬೇಕು. ಕಾಡಾಡಿಯಾದರೂ ಸೊಪ್ಪಿನ ಕಚ್ಚೆ ಕಟ್ಟಿಕೊಳ್ಳುವಂತೆ. ಅದನ್ನೆಲ್ಲ ಒಳಗೊಂಡು ಸಾಹಿತ್ಯವು ಸರ್ವತೋಮುಖವಾಗಿ ಸರ್ವತೋಭದ್ರವಾಗಿ ಸಾಗಬೇಕು. ಇದೇ ನನ್ನ ಎಚ್ಚರ ಕನಸು.'[೫೯]

೨೭ನೆಯ ವಯಸ್ಸಿನಲ್ಲಿ ವಿವಾಹಿತರಾಗಿ ಕೇವಲ ಹದಿನೆಂಟು ವರ್ಷದಲ್ಲಿ ಅಂದರೆ ತಮ್ಮ ೪೫ನೆಯ ವಯಸ್ಸಿನಲ್ಲಿ ವಿಧುರರಾದ ಪೈಯವರು ಮರುಮದುವೆ ಮಾಡಿಕೊಳ್ಳದೆ ಆಜನ್ಮಪರ್ಯಂತ ಸಾಹಿತ್ಯಸೇವೆಗಾಗಿ ತಮ್ಮನ್ನು ಮುಡಿಪಾಗಿಟ್ಟರು. ತಂದೆಯ ಊರು

ಮಂಗಳೂರಾದರೂ ಬಾಲ್ಯದ ವಿದ್ಯಾಭ್ಯಾಸವನ್ನು ಅಲ್ಲೇ ಕಳೆದವರಾದರೂ ತಾಯಿಯ ತವರು ಮಂಜೇಶ್ವರವನ್ನು ತನ್ನ ಸಾಹಿತ್ಯ ಕ್ಷೇತ್ರದ ತಪೋಭೂಮಿಯನ್ನಾಗಿಸಿ ತಮ್ಮಂದಿರ, ಗೆಳೆಯರ, ವಿದ್ವಜ್ಜನರ ಆತ್ಮೀಯ ಸಂಸರ್ಗದಲ್ಲಿ ಸಮುದ್ರಕಿನಾರೆಯ ಮರಳಿನ ರಾಶಿಗಳಲ್ಲಿ ಒಡನಾಡಿ ಸಾಹಿತ್ಯ ಸಂಶೋಧನೆಯ ಉತ್ತುಂಗ ಶಿಖರದಲ್ಲಿ ಸಾಧಕ ತಪಸ್ವಿಗಳಾಗಿ ೮ ದಶಕಗಳ ತುಂಬು ಬಾಳನ್ನು ಸಾರ್ಥಕವಾಗಿ ಕಳೆದು ೧೯೬೩ ಸೆಪ್ಟೆಂಬರ್ ೬ರಂದು ಮಂಗಳೂರಿನಲ್ಲಿ ದಿವಂಗತರಾದರು.

### ಸಾರಲೇಖ

ಪೈಯವರ ಬರಹಗಳ ವಿಶಿಷ್ಟತೆ ಮತ್ತು ಕನ್ನಡ ಸಾಹಿತ್ಯಕ್ಕೆ ಅವರ ಕಾಣ್ಕೆಯನ್ನು ಪರಿಶೀಲಿಸಿದಾಗ 'ಏಕೋ ಹಿ ದೋಷೋ ಗುಣಸನ್ನಿಪಾತೇ ನಿಮಜ್ಜತಿ' ಎನ್ನುವ ಕಾಳಿದಾಸನ ಉಕ್ತಿಗಳು ನೆನಪಾಗುತ್ತವೆ. ಅವರ ಬರಹಗಳಲ್ಲಿ ಬೆರಗುಗೊಳಿಸುವ ಅಪ್ರತಿಮ ಪ್ರತಿಭೆ, ಪಾಂಡಿತ್ಯಗಳಿದ್ದರೂ ಓದುಗರು ಅಪೇಕ್ಷಿಸುವ ಲಾಲಿತ್ಯ, ಕುಸುರಿತನ, ನಯಗಾರಿಕೆ, ಇಂಪು, ಕಂಪುಗಳ ಕೊರತೆಯಿಂದ ಅವು ಸುಲಭವಾಗಿ ಹೃದಯಸ್ಥವಾಗುವುದಿಲ್ಲ. ದಿಕ್ಕೆಡಿಸುವ ಭಾಷೆ, ಶೈಲಿ, ಬಂಧಗಳು, ಅವರದೇ ಮಾತಿನಂತೆ ಜೊಣೆಯಲ್ಲಿ ಹರಳಾಗುವ ಅಪರಿಚಿತಪದಗಳ ಬಳಕೆ, ಹೊಸಪದಗಳ ಪ್ರಯೋಗ, ಪೂರ್ವಾಪರಗಳನ್ನು ಸಾಕಷ್ಟು ಒರೆಹಚ್ಚದೆ ಕೈಗೊಳ್ಳುವ ಶೀಘ್ರನಿರ್ಣಯ (ತುಳುವಿಗೆ ಸಾಹಿತ್ಯವೇ ಇಲ್ಲ, ಕೊಂಕಣಿ ತಾಯಿಯ ಮೊಲೆಯಲ್ಲಿ ಹಾಲಿಲ್ಲ, ಹಲ್ಮಿಡಿ ಶಾಸನದ ಕಾಲ ೩ನೆಯ ಶತಮಾನ ಇತ್ಯಾದಿ) ಸಾಮಾನ್ಯ ಓದುಗರನ್ನು ತಬ್ಬಿಬ್ಬುಗೊಳಿಸುವ, ಜನಪ್ರಿಯತೆಗೆ ಧಕ್ಕೆಯಾಗ ಬಹುದಾದ ಈ ಕೆಲವೊಂದು ಕೊರತೆಗಳಿದ್ದರೂ ಅವರ ಅಸಾಧಾರಣವಾದ ಕೊಡುಗೆ ಈ ಎಲ್ಲ ಕೊರತೆಗಳನ್ನೂ ಬರೆಸಿ ಅವರನ್ನು ರಾಷ್ಟ್ರಕವಿಯ ಅತ್ಯುನ್ನತ ಪೀಠದಲ್ಲಿ ಕುಳ್ಳಿರಿಸಿದೆ. ಪೈಯವರ ಅನನ್ಯವಾದ ಈ ವಿಶಿಷ್ಟತೆಗಳ ಬಗ್ಗೆ 'ಭಾಷೆಯ ಪ್ರೌಢಿಮೆ, ಬಂಧದ ಬಿಗಿಕಟ್ಟು, ಭಾವದ ಗುರುಭಾರ ಎಂಬ ಈ ಮುಮ್ಮೈಯ ವಜ್ರಕವಚವನ್ನು ಭೇದಿಸಿ ಒಳಗಿನ ಹೃದಯವನ್ನು ಅರಿತುಕೊಳ್ಳಬೇಕು.'[೨೦] 'ಪೈಯವರ ಲೇಖನವನ್ನು ಒಂದು ಚಕ್ರವ್ಯೂಹದ ಕೋಟೆಗೆ ಹೋಲಿಸಬಹುದು'[೨೧] ಎಂಬ ವಿದ್ವಾಂಸರ ಅಭಿಪ್ರಾಯಗಳನ್ನು ಮನಗಾಣ ಬಹುದು.

ಕನ್ನಡ ಸಾರಸ್ವತ ಪ್ರಪಂಚಕ್ಕೆ ಅನೇಕ ವಿಚಾರಗಳಿಗೆ ಶ್ರೀಕಾರವನ್ನು ಹಾಕಿದ ಗೋವಿಂದಪೈಯವರ ಕಾಣ್ಕೆಯನ್ನು ಒಟ್ಟಾರೆಯಾಗಿ ಪರಿಭಾವಿಸಿದರೆ ಗಮನಾರ್ಹವಾಗುವ ಕೆಲವಂಶಗಳನ್ನು ಹೀಗೆ ಕಲೆಹಾಕಬಹುದೆನಿಸುತ್ತದೆ:

ಅವರು ಕನ್ನಡನಾಡಿನ ಮೊದಲ ರಾಷ್ಟ್ರಕವಿ. ನವೋದಯ ಕಾಲದ ಅತಿಶ್ರೇಷ್ಠ ಕವಿ, ಸಾಹಿತಿ, ಸಂಶೋಧಕ, ಬಹುಭಾಷಾ ವಿಶಾರದ. ವಿದ್ವತ್ತು, ಪಾಂಡಿತ್ಯಗಳಲ್ಲಿ ಅನನ್ಯವಾದ ಸಿದ್ಧಿ ಇದ್ದ ಗೋವಿಂದ ಪೈಯವರು ಕಾವ್ಯ, ನಾಟಕ, ಪ್ರಬಂಧ, ಇತಿಹಾಸ, ಧರ್ಮ ಇತ್ಯಾದಿ ಎಲ್ಲ ಬಗೆಯ ಪ್ರಕಾರಗಳಲ್ಲೂ ಸು. ೪೪ಕ್ಕಿಂತ ಅಧಿಕವಾದ ಕೃತಿಗಳನ್ನು ರಚಿಸಿದ್ದಾರೆ. 'ಗಿಳಿವಿಂಡು' ಕವನ ಸಂಕಲನದಲ್ಲಿ ಸೇರಿಸಿದ ಇಂಗ್ಲಿಷ್ ಭಾಷಾಂತರವನ್ನು ಆಧರಿಸಿ ಗೋವಿಂದ ಪೈಯವರು ಮಾಡಿದ ಉಮರ್ ಖಯಾಮಿನ ಪರ್ಶಿಯನ್

ಭಾಷೆಯ ೫೦ ರೂಬಾಯಿಗಳ ಅನುವಾದಗಳಿಗೆ ಕನ್ನಡದಲ್ಲಿ ಅವತರಿಸಿದ ಮೊತ್ತಮೊದಲ ಉಮರ್ ಖಯ್ಯಾಮಿನ ಒಸಗೆಗಳೆಂಬ ಚಾರಿತ್ರಿಕ ಮಹತ್ವ ಸಂದಿದೆ.

ಕಥನ ಕವನ, ಪ್ರಗಾಥ, ಖಂಡಕಾವ್ಯ, ಸಾನೆಟ್ ಮುಂತಾದ ಕಾವ್ಯ ರೂಪಗಳಲ್ಲಿ ಮೊದಲು ಕೃಷಿಗೈದ ಹಿರಿಮೆ ಪೈಯವರಿಗೆ ಸಲ್ಲುತ್ತದೆ. ೧೯೧೬ರಲ್ಲಿ ಕನ್ನಡದ ಕೋಗಿಲೆ ಎಂಬ ಪತ್ರಿಕೆಯಲ್ಲಿ 'ಕವಿತಾವತಾರ' ವೆಂಬ ಕವನವನ್ನು ಪ್ರಕಟಿಸುವುದರ ಮೂಲಕ ಮೊತ್ತಮೊದಲಿಗೆ ಗೋವಿಂದ ಪೈಗಳೇ ಸಾನೆಟ್ ಛಂದೋಬಂಧವನ್ನು ಕನ್ನಡಕ್ಕೆ ತಂದರು. ಇದನ್ನು ಪೈಯವರೇ 'ಚತುರ್ದಶಪದಿ' ಎಂದು ಕರೆದರು. ಸರಳರಗಳೆಗೆ ವಿನೂತನ ಸ್ವರೂಪವನ್ನು ನೀಡಿದ್ದು, ತಿರುಪು ಲಯ ಬಳಕೆ, ಭಾಷೆ, ಛಂದಸ್ಸುಗಳಿಗೆ ವಿನೂತನತೆಯನ್ನು ಪ್ರದರ್ಶಿಸಿದ್ದು ಎಲ್ಲವೂ ಪೈಯವರ ಕೊಡುಗೆ. ಪೈಯವರ ಛಂದೋವೈವಿಧ್ಯ ಹಾಗೂ ನೂತನ ಪ್ರಯೋಗಗಳ ಬಗ್ಗೆ ಮಾತನಾಡಿದ ಶ್ರೀಯುತ ಕೀರ್ತಿನಾಥ ಕುರ್ತಕೋಟಿಯವರು ಇವೆಲ್ಲ ಮುಂದಿನ ಕವಿಗಳಿಗೆ ಲಾಭದಾಯಕವೆನ್ನುತ್ತ 'ಗೋವಿಂದ ಪೈಯವರ ಕಾವ್ಯಕ್ಕೆ ಒಂದು ಐತಿಹಾಸಿಕ ಮಹತ್ವವಿದೆ. ಅದು ಹಳೆಯ ಹೊಸ ಕಾವ್ಯಗಳನ್ನು ಒಂದೆಡೆಗೆ ಜೋಡಿಸುವ ಸೇತುವೆಯಾಗಿದೆ ಅಥವಾ ಇನ್ನೊಂದು ರೀತಿಯಲ್ಲಿ ಹೇಳಬೇಕಾದರೆ ಅವರ ಕಾವ್ಯದ ಭಾಷೆ ಮಿಶ್ರಲೋಹದಂತೆ ಬಹಳ ದಿನ ಬಾಳಬಲ್ಲುದಾಗಿದೆ.'[೨] ಎಂದಿದ್ದಾರೆ.

ಭಾಷೆ, ಪದಪ್ರಯೋಗ, ನಿರೂಪಣೆಗಳಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ ಪೈಯವರಿಗೆ ವ್ಯವಹಾರದಲ್ಲಿಲ್ಲದ ಪ್ರಾಚೀನ ಪದಗಳನ್ನು ಅನೇಕ ಹಳೆಯ ಸಾಹಿತ್ಯ ಕೃತಿಗಳಿಂದ ಆಯ್ದು ಅವುಗಳನ್ನು ಮರಳಿ ಪ್ರಯೋಗಕ್ಕೆ ತಂದಿದ್ದಾರೆ. ಕಾತಿಕೆ=ಕಾರ್ತಿಕಮಾಸ, ಅಮಗ=ಹಬ್ಬ, ಒಂಟು=ಹೊಂದು, ಸಿಂಗವೆರೆ=ಸಿಂಹಮಾಸದ ಚಂದ್ರ, ಕೋವ=ಕುಂಬಾರ ಇತ್ಯಾದಿ. ಕಾವ್ಯ, ನಾಟಕ, ಸಂಶೋಧನೆ, ಆಧ್ಯಾತ್ಮ ಹಾಗೂ ಅನ್ಯಧರ್ಮಕ್ಕೆ ಸಂಬಂಧಿಸಿದಂತೆ ತಮ್ಮ ಬರಹ, ಬಳಸಿದ ಪದಪ್ರಯೋಗಗಳು ಕ್ಲಿಷ್ಟವಾಗ ಬಹುದೆಂಬ ಅನುಮಾನವಿದ್ದ ಕಡೆಯಲ್ಲಿ ಅದಕ್ಕೆ ತಾವೇ ಅಡಿಟಿಪ್ಪಣಿಗಳನ್ನು ಕೊಟ್ಟಿದ್ದಾರೆ; ಅಂಥ ಪದಗಳ ಅರ್ಥವನ್ನೂ ತಾವೇ ಬರೆದು ತಿಳಿಸಿದ್ದಾರೆ. 'ಇಸು' ಪ್ರತ್ಯಯದ ಮೂಲಕ ನಾಮವಾಚಕಗಳನ್ನು ಕ್ರಿಯಾಪದವನ್ನಾಗಿ ಮಾಡಿ ಹೊಸ ಹೊಸ ಪದಗಳನ್ನು ಸೃಷ್ಟಿಸುತ್ತಿದ್ದರು. ಕಮ್ಮಿಸು, ಕೆಳಗಿಸು, ಸವ್ಯಸಾಚಿಸು, ವಿಶ್ರಾಂತಿಸು, ಭಗೀರಥಿಸು, ಕವನಿಸು ಇತ್ಯಾದಿ. ಅನ್ಯಭಾಷೆಯ ಪದಗಳಿಗೆ ಕನ್ನಡ ಪದಗಳನ್ನು ಹೊಂದಿಸುವಲ್ಲೂ ಪೈಯವರಿಗೆ ಅದ್ವಿತೀಯ ಪರಿಣಿತಿಯಿದೆ. ಅಕ್ಕರಿಕೆ (ಸ್ಪೆಲ್ಲಿಂಗ್), ನಾಗದಂತ (ಇನ್ವರ್ಟಡ್ ಕೊಮಾಸ್), ಹಡಗುವಳ್ಳ (ಕ್ಯಾಪ್ಟನ್), ಕಾಬಳ್ಳಿ (ಆಲ್ಫಬೆಟ್) ತಿದ್ದುಗೆ (ಪ್ರೂಫ್) ಬಿಡುಗಾಲ (ವೆಕೇಷನ್), ಮನೆವಳಿಕೆ (ಹೋಮ್ಲಿನೆಸ್) ಒಳಮಾರು, ಹೊರಮಾರು (ಇಂಪೋರ್ಟ್, ಎಕ್ಸ್ಪೋರ್ಟ್) ಇಂಥ ಅನೇಕ ಪದಗಳನ್ನು ಪೈಯವರು ಸೃಷ್ಟಿಸಿದ್ದಾರೆ. ಹಾಗೆಯೇ ಕಂದುಗೊಂಡೆ, ಬಾಡುಮೋರೆ, ಹಿಂಡುಗತ್ತಲೆ, ಮಸಿಗೇಟು ಇತ್ಯಾದಿ ಸಮಸ್ತಪದಗಳೂ ಅವರ ಕಲ್ಪನೆಯ ಕೂಸುಗಳೇ ಆಗಿವೆ. ಬಲ್ಲಿ (ಬಲ್ಲೆ), ಬಿಟ್ಟಿ (ಬಿಟ್ಟೆ), ಸರಿರಿ (ಸರಿಯಿರಿ) ಎಂಬ ರೂಪಗಳೂ, ಅದು, ಇದು, ಉದು ದಿಗ್ದರ್ಶಕಗಳೂ ಸರ್ವಸಾಮಾನ್ಯ. ಪೈಯವರ ಶಬ್ದಗಾರುಡಿ

ಗತನವನ್ನು ಕುರಿತು 'ದೀಪಿಗೆ'ಯಲ್ಲಿ 'ಹೊಸಗನ್ನಡ ಗದ್ಯಕ್ಕಾಗಿ ಶ್ರೀ ಪೈಗಳ ಕೃಷಿ' ಎಂಬ ಲೇಖನವನ್ನು ಬರೆದ ಶೇಖರ ಇಡ್ಯರವರು ಪೈಯವರ ಪದಸೃಷ್ಟಿಯ ಒಂದು ಪಟ್ಟಿಕೆಯನ್ನೇ ಸಂಗ್ರಹಿಸಿದ್ದಾರೆ.[೬೩]

ವಿನೂತನ ಆಲಂಕಾರಿಕ ನುಡಿಗಟ್ಟು, ಸ್ವತಂತ್ರವಾದ ಗಾದೆಮಾತುಗಳ ಬಳಕೆ ಪೈಯವರದೇ ಕೊಡುಗೆ. ಉದಾ: ಎಣ್ಣೆ ಸಿಕ್ಕಿದ್ದೇ ಶನಿವಾರ, ಕೆಸರೊಳು ಕೆಡೆದ ಜೊನ್ನ, ಆಸೆಯ ಅಳಂಬೆ, ಹುಣ್ಣಕೆಜ್ಜಲ ನುಣ್ಣೆ ಕಚ್ಚುವಂತೆ, ಅಜ್ಞತನದ ಮಣೆಯಲ್ಲಿ ಕೂರಿಸು, ಬಣ್ಣ ಹಾರಿದೆಯಲ್ಲದೆ ಏರಿಲ್ಲ, ತನ್ನವರು ಬಂದರೆ ಒಳಗಾಡು ಸಟ್ಟುಗವೆ, ಹೆರವರು ಬಂದರೆ ಮೇಲಾಡು ಸಟ್ಟುಗ. ಜೋಣಿ ತುತ್ತಿನಲ್ಲಿ ಹರಳು ಕಡಿದಂತೆ, ಕಣ್ಣು ಕೊಟ್ಟ ದೇವರು ಕಣ್ಬೊಲವನ್ನು ಕೊಟ್ಟರಲಾರನೇ?, ಅಡವಿಯ ದೊಣ್ಣೆ ಬಡವನ ತಲೆ, ಮೂಗಿನಿಂದ ಉಣಿಸಿದರೆ ಹೊಟ್ಟೆ ತುಂಬೀತೇ?, ಕೆರದ ಒಳಗಿನ ಕಲ್ಲಿನಂತೆ, ಗಂಟಲಿನ ಗಾಳ, ಮೂಕನ ಹೋಳಿಗೆಯಂತೆ, ಅಪಾಯಗಳಲ್ಲಿ ನುಗ್ಗುವುದೆಂದರೆ ಬಾತುಕೋಳಿಗೆ ನೀರಾಟದಂತೆ ಇತ್ಯಾದಿ.

ಅನ್ಯಭಾಷಾ ಸಾಹಿತ್ಯದ ಬಗ್ಗೆ ಅಪಾರವಾದ ಪರಿಶ್ರಮವನ್ನು ಸಾಧಿಸಿದ ಪೈಯವರು ಕೊಂಕಣಿ, ಕನ್ನಡ, ತುಳು, ಮಲಯಾಳ, ತಮಿಳು, ತೆಲುಗು, ಹಿಂದಿ, ಇಂಗ್ಲಿಷ್, ಸಂಸ್ಕೃತ, ಬಂಗಾಲಿ, ಮರಾಠಿ, ಪಾಲಿ, ಜರ್ಮನ್, ಫ್ರೆಂಚ್, ಲ್ಯಾಟೀನ್, ಗ್ರೀಕ್, ಫಾರ್ಸಿ, ಹೀಬ್ರೂ, ಉರ್ದು, ಅರಬಿ ಮುಂತಾದ ಅನೇಕಾನೇಕ ಭಾಷಾ ಸಾಹಿತ್ಯವನ್ನು ಮೂಲದಿಂದಲೇ ಅಧ್ಯಯನ ಮಾಡಿದ್ದಾರೆ.

ಪೂರ್ವಾಗ್ರಹರಹಿತ ಸತ್ಯಶೋಧಕರಾದ ಪೈಯವರಲ್ಲಿ ತಮ್ಮ ಸಂಶೋಧನೆಯಲ್ಲಿ ತಪ್ಪಾಗಿದೆಯೆಂದರೆ ವಿತಂಡವಾದಕ್ಕೆ ಹೋಗದಿರುವ ಪ್ರಾಮಾಣಿಕತೆ, ವಿನಯಪರತೆಗಳು ಇದ್ದುವು. ಉದಾ: 'ಗೊಮ್ಮಟ' ಪದ 'ಮನ್ಮಥ' ಎಂಬ ಪದದ ಪ್ರಾಕೃತರೂಪವಾದ 'ಗುಮ್ಮಹ'ದಿಂದ ಬಂದುದು ಎಂಬ ಅಭಿಪ್ರಾಯವನ್ನು ಸಾಧಾರವಾಗಿ ಅಲ್ಲಗಳೆದ ಆ.ನೇ. ಉಪಾಧ್ಯೆಯವರ ಶೋಧನೆಯ ಬಳಿಕ ತಮ್ಮ ನಿಲುವನ್ನು ಬದಲಾಯಿಸಿದರು. ಹಾಗೆಯೇ ಮೊದಲ ಕಾದಂಬರಿಕಾರರೆಂದು ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ (೧೮೯೯)ಯನ್ನು ಹೆಸರಿಸಿದ ಅವರು ಅನಂತರ ತಮ್ಮ ಹೇಳಿಕೆಯನ್ನೇ ಹಿಂತೆಗೆದು ಕೊಂಡು ರಂಟ್ಲ ವೆಂಕಟಸುಬ್ಬರಾವ್ ಬರೆದ ಕೇಸರಿ ವಿಲಾಸ (೧೮೯೫) ಮೊದಲ ಕಾದಂಬರಿ ಎಂದು ಒಪ್ಪಿಕೊಂಡಿದ್ದಾರೆ. ಶ್ರೀನಿವಾಸ ಹಾವನೂರರು ಮೊದಲ ಕಾದಂಬರಿ ಸೂರ್ಯಕಾಂತ (೧೮೯೨)ವೆಂದೂ ಅದನ್ನು ಬರೆದ ಶ್ರೇಯಸ್ಸು ಲಕ್ಷ್ಮಣ ಭೀಮರಾವ್ ಗದಗಕರರಿಗೆ ಸಲ್ಲುತ್ತದೆಂದು ಸಾಬೀತು ಪಡಿಸಿದ್ದಾರೆ.

ಕನ್ನಡ ಭಾಷೆ, ನಾಡು, ನುಡಿ, ಧರ್ಮ, ಇತಿಹಾಸಗಳ ಬಗ್ಗೆ ಅಪಾರವಾದ ಸಂಶೋಧನೆಗಳನ್ನು ಮಾಡಿ ಪ್ರಾಚೀನ ಮತ್ತು ಆಧುನಿಕ ಸಾಹಿತ್ಯಕ್ಕೆ ಕೊಂಡಿಯನ್ನು ಬೆಸೆದ ಹರಿಕಾರರು ಗೋವಿಂದಪೈಯವರು. ತೀನಂ.ಶ್ರೀ.ಯವರ ಮಾತುಗಳಲ್ಲಿ ಹೇಳುವುದಿದ್ದರೆ 'ಗೋವಿಂದ ಪೈಯವರ ಯಾವ ಲೇಖನವೇ ಆಗಲಿ ಅದು ಒಂದು ಸಂಜೀವಿನ ಪರ್ವತವೇ ಸರಿ. ಅದರಲ್ಲಿ ನಮಗೆ ಬೇಕಾದ ಮೂಲಿಕೆಗಳನ್ನು ಹೆಕ್ಕಿ ಆಯ್ದುಕೊಳ್ಳುವುದು ನಮ್ಮ ಪಾಲಿನ ಕೆಲಸ.'[೬೪]

**ಪೈಯವರ ಜೀವನ ಧರ್ಮ ಮತ್ತು ಸಂದೇಶ**

ಜಾತ್ಯತೀತ, ಧರ್ಮಾತೀತ ವಿಶ್ವಮಾನವತಾವಾದಿಯಾಗಿದ್ದ ಪೈಯವರು ೧೯೧೯ ರಲ್ಲಿ ತಮ್ಮನ ವಿವಾಹದ ಕರೆಯೋಲೆಯಲ್ಲಿ ಭಾರತದ ನಾಲ್ಕೂ ಧರ್ಮಗಳ ಸಂಕೇತವನ್ನು ಬಳಸಿ ತಮ್ಮ ನಿಲುವನ್ನು ಸಮರ್ಥಿಸಿಕೊಂಡಿದ್ದಾರೆ. ಪೈಯವರಿಗೆ 'ಯದುನಾಥನೆ' ಯೂಧನಾಥ,' 'ಯಾರನ್ಯ ಧರ್ಮವಂ ಯಾರನ್ಯ ಜನಗಳ ಸ್ವಾತಂತ್ರ್ಯ ಮಂಮನ್ನಿಸುವರೋ ತಮ್ಮದರಂತೆ, ಅವರ ಧರ್ಮಂ, ಜನಂ, ಸ್ವಾತಂತ್ರ್ಯಂ ಬಾನಂತೆ ಬೆಳೆಯುತ್ತಿದೆ' ವೈಶಾಖಿಯಲ್ಲಿ ಬುದ್ಧನ ಮಾತುಗಳು ಪೈಯವರ ಜೀವನ ಮೌಲ್ಯವೂ ಆಗಿದೆ. 'ಶ್ವಪಚನದು ದೊರೆಕೊಳದೆ ದಿವಕೇರ್ವನೆಂತು?' ಎಂಬುದು ಅವರ ಜಾತ್ಯತೀತ ನಿಲುವು.

'ಸರ್ವಜೀವರಾಶಿಗಳನ್ನೂ ಪ್ರೀತಿಸು, ಸುಖದುಃಖಗಳನ್ನು ಸಮಾನವಾಗಿ ಸ್ವೀಕರಿಸು, ಉತ್ತಮವಾದುದನ್ನೇ ಮಾಡು, ನಿಷ್ಕಾಮಕರ್ಮವೇ ಧ್ಯೇಯವಾಗಿರಲಿ, ನಿಶ್ಚಲವಾದ ಭಕ್ತಿಯಿಂದ ಭಗವಂತನನ್ನು ಪ್ರಾರ್ಥಿಸು.

ದೇವರಿದ್ದಾನೆ. ದೇಹವೆಂಬುದೊಂದು ಹೊದಿಕೆ. ನಿಷ್ಫಲಾಪೇಕ್ಷೆಯಿಂದ ಕರ್ತವ್ಯ ಮಾಡು. ಸಾವಿಗಾಗಿ ಭಯಪಡಬೇಕಾಗಿಲ್ಲ. ಸಾಯುವ ತನಕ ಕರ್ತವ್ಯ ಬಿಡಬಾರದು. ದೇವರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಇಷ್ಟೇ ನಾನು ಬಾಳಿನಲ್ಲಿ ತಿಳಿದುದು.'

**ಸಮಾರೋಪ**

ಪ್ರತಿಭೆ, ಪಾಂಡಿತ್ಯಗಳ ಸಮನ್ವಯದಿಂದ ೬೦ ವರ್ಷಗಳ ಕಾಲ ನಿರಂತರವಾಗಿ ಕನ್ನಡ ಕೈಂಕರ್ಯವನ್ನು ಕೈಗೊಂಡು ಕೃತಕೃತ್ಯರಾಗಿ ಆಧುನಿಕ ಕರ್ಣಾಟಕ ಕವಿಕುಲ ಪಿತಾಮಹನೆನಿಸಿದ ರಾಷ್ಟ್ರಕವಿ ಗೋವಿಂದ ಪೈಯವರ ವ್ಯಕ್ತಿತ್ವ ಅವರ ಪಾಂಡಿತ್ಯದಷ್ಟೇ ಉನ್ನತವಾದುದು. ಗೋವಿಂದ ಪೈಯವರು ತೀರಿಹೋದ ಬಳಿಕ ಅವರ ಸ್ಮರಣೆಗಾಗಿ ಪ್ರಕಟಿಸಿದ 'ದೀವಿಗೆ'ಯಲ್ಲಿ ತಮ್ಮ ಪ್ರಾಮಾಣಿಕವಾದ ಅನಿಸಿಕೆಗಳ ಮೂಲಕ ಅನೇಕ ವಿದ್ವಾಂಸರು ಅವರಿಗೆ ತಮ್ಮ ಅಶ್ರುತರ್ಪಣವನ್ನು ಸಲ್ಲಿಸಿದ್ದಾರೆ. ಬೇಂದ್ರೆಯವರು 'ಹೊರಗೆ–ಹೊಗೆ ಬೂದಿ, ಒಳಗೊಳಗೆ ಅಗ್ನಿಯ ಹಾದಿ ನಿಮ್ಮ ಜಿಜ್ಞಾಸೆಗೆಲ್ಲಿದೆ ಮುಗಿವು? ಎಂದು ಪ್ರಶ್ನಿಸುತ್ತ ಪೈಗಳನ್ನು ಕಾಲಜ್ಞಾನಿ ಮುಗ್ಧ, ಅಕ್ಕರಿಗ, ವಿದಗ್ಧ[೬೫] ಎಂದು ಗುರುತಿಸಿದರೆ ಕುವೆಂಪುರವರು 'ಅವರೆ ತಾವೊಂದು ಗೊಮ್ಮಟಸಮ ಮಹಾಕಾವ್ಯ'[೬೬] ವೆಂದಿದ್ದಾರೆ. ವಿನಾಯಕರು 'ಜ್ಞಾನಯಜ್ಞಗಳ ಋತ್ವಿಜ, ರಸಾಸ್ವಾದದಾರಾಧಕ, ಮೂಡಣ ಪಡುವಣದ ತಪನ, ಗುರು ಕಾವ್ಯದ ಪ್ರಾಣಪದಕ'[೬೭]ವೆಂದರೆ ಪು.ತಿ.ನ.ರವರು 'ಮಾನನಿಧಿ, ಅಭಿಮಾನನಿಧಿ, ವಿನಯನಿಧಿ'[೬೮] ಎಂದು ಕೊಂಡಾಡಿದ್ದಾರೆ. 'ಹಲವು ಹರುಷದ ಸರಕು ಹೊತ್ತು ತಂದಿರುವಂಥ ಹಡಗು ಮುಳುಗಿತು'[೬೯] ಎನ್ನುತ್ತಾರೆ ಸುಬ್ಬಣ್ಣ ಎಕ್ಕುಂಡಿಯವರು. ಜನ್ನಂಜೆಯವರಿಗೆ ಗೋವಿಂದ ಪೈಯವರು 'ಎಲ್ಲ ಹಳತು ಅಲ್ಲಿ ಕಾಳಿಟ್ಟವರ ಬಗೆತುಂಬ ಹೊಸತನದ ಬೆಳಕು. ಬೆಳ್ಳಿ ಮೀಸೆಯ ಮಗು'[೭೦]ವಾಗಿ ಕಂಡರೆ '...ಆ ಸರಸ ಸಂಭಾಷಣೆ, ಆ ವಿಶ್ವಾಸ, ಆ ಗೆಳೆತನ. ಆನಗು, ಆ ಮಗುವಿನಂಥ ಮನಸು ನಮಗೆ ಇನ್ನೆಲ್ಲಿ ದೊರೆತಾವು'[೭೧] ಎಂದು ನಿಟ್ಟುಸಿರಿಟ್ಟವರು ನಿಟ್ಟೂರು ಶ್ರೀನಿವಾಸರಾವ್.

'ಅವರ ವ್ಯಕ್ತಿತ್ವ ಮಹಾಸಾಗರದಲ್ಲಿ ತೇಲುತ್ತ ಹೋಗುವ ಮಂಜುಪರ್ವತದಂತೆ (ಅಯಿಸ್ ಬರ್ಗ್). ಮೇಲೆ ಕಾಣುವುದು ಒಂದು ಪಾಲು, ಕೆಳಗೆ ಇದ್ದುದು ಅದರ ಏಳುಪಾಲು!'[೨೨] ರಂಗನಾಥ ದಿವಾಕರರ ಅನಿಸಿಕೆ. ಅಮೃತ ಸೋಮೇಶ್ವರರು 'ಸುತ್ತಲುಂ ಹೊತ್ತಗೆಯ ಬೆಟ್ಟಗಳ ನಡುವೆ ತಪಮಿರ್ದ ಕಾವ್ಯರ್ಷಿಯಂ ಕಂಡೆನಾಂ–ಎನಿತೊ ಶತಮಾನಗಳ ಬೆಳಗಿರ್ಪ ತಿರುಮಾನಿಸರ ತಿಳಿವುಸೊಡರಿನಿದಿರೊಳ್ ಕುಳಿತ ಸರಸ್ವಿಯಣುಗ ಧ್ಯಾನ ಶೀಲನಂ ಕಂಡೆನಾಂ'[೨೩] ಎಂದು ಉದ್ಗರಿಸುತ್ತಾರೆ. ವೈದ್ಯಗುರು ಎಮ್.ಆರ್. ಭಟ್. ಗೋವಿಂದ ಪೈಯವರ ವ್ಯಕ್ತಿತ್ವವನ್ನು ಕುರಿತು ಅನರ್ಘ್ಯವಾದ ವಿಶೇಷಣಗಳ ಸಾಲುದೀಪ ಗಳನ್ನೇ ಹಚ್ಚಿದ್ದಾರೆ. 'ಶ್ರೀಮಾನ್ ರಾಷ್ಟ್ರಕವಿಯವರು ವಿಭಿನ್ನ ಸಾಹಿತ್ಯ ಸಂಸ್ಕೃತಿಗಳ ಒಂದು ಆಶ್ಚರ್ಯಪೂರ್ಣ ಸಮ್ಮಿಶ್ರಣ; ಪಾಂಡಿತ್ಯ ಹಾಗೂ ಪ್ರತಿಭೆಯ ಕೇಂದ್ರ; ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿದ್ವತ್ತಿನ ತಪೋಭೂಮಿ; ಕೋಮಲತೆ, ಸೌಂದರ್ಯ, ಸಹನಶೀಲತೆಯ ಕಾಮಧೇನು. ಕವಿತಾಕಾಮಿನಿಯ ಸತ್ಪುತ್ರ; ಸಂಶೋಧನೆ ಪರಿಶೋಧನೆಗಳ ಮನೋಹರ ಮಂದಿರ; ಶ್ರೀ ಭೂಸಂಪನ್ನ ಪ್ರಕಾಶಮಾನ ವ್ಯಕ್ತಿ.'[೨೪]

ತಮ್ಮ ಜೀವಮಾನವನ್ನೆಲ್ಲ ಒಂದು ಮಹಾಕಾವ್ಯವನ್ನಾಗಿ, ಸಾಧನೆಯ ತೊಟ್ಟಿಲಾಗಿ, ರೂಪಿಸಿಕೊಂಡ ಎಂಬತ್ತು ವರ್ಷಗಳ ತುಂಬುಜೀವನದ ಉದ್ದಕ್ಕೂ ಗೋವಿಂದ ಪೈಯವರಲ್ಲಿ ಕಾಣುತ್ತಿದ್ದುದು 'ಅವರ ಅಪ್ರತಿಮ ಮೇಧಾಶಕ್ತಿ, ಶಿಶುಸಹಜ ಸರಳ ಮುಗ್ಧಮನ, ಮಾತ್ಸರ್ಯರಹಿತ ನಡೆ, ಮಹೋನ್ನತ ಪ್ರತಿಭೆ, ಜಾಗೃತ ಭಾಷಾಭಿಮಾನ, ಆತ್ಮೀಯತೆ ನಿರ್ವ್ಯಾಜ್ಯ ಅಂತಃಕರಣ ಮತ್ತು ರಸಿಕತೆಯಿಂದ ಕೂಡಿದ ಮಾತಿನ ಮೋಡಿ'[೨೫] ಎನ್ನುವ ನಿಜಲಿಂಗಪ್ಪನವರ ಮಾತುಗಳು ಗೋವಿಂದ ಪೈಯವರ ಅಂತರಂಗವನ್ನು ದರ್ಶಿಸಿದರೆ ನಿಟ್ಟೂರು ಶ್ರೀನಿವಾಸರಾಯರು ಬಣ್ಣಿಸಿದ '... ಆ ನರೆತ ಬೆಳ್ಳಿಮೀಸೆ, ಆ ಸಿಂಹದಂಥ ರೂಪ, ತುಂಡು ತೋಳಿನ ಜುಬ್ಬ ಅಥವ ಬನಿಯನ್, ಉದ್ದ ದಟ್ಟಿ, ಕೆಲವೇಳೆ ಛತ್ರಿ, ಮಂಗಳೂರು ಚಪ್ಪಲಿ ಇಷ್ಟೇ ಅವರ ಪೋಷಾಕು. ಏತಕ್ಕಾದರೂ ಬೆರಳು ಕೊಡಹುತ್ತ ಮೀಸೆ ಕಡಿಯುತ್ತ ಬೀಡಿ ಸೇದುತ್ತ ಅವರು ಯಾವುದೋ ವಿಚಾರವನ್ನು ಹೊರಗೆಡಹುತ್ತ ಇದ್ದಾಗ ಅವರನ್ನು ನೋಡುವುದು ಒಂದು ಹಬ್ಬವಾಗುತ್ತಿತ್ತು.'[೨೬] ಎನ್ನುವುದು ಆ ಮಹಾನುಭಾವನ ಬಹಿರಂಗ ದರ್ಶನ.

ಒಟ್ಟಿನಲ್ಲಿ ಮಂಜೇಶ್ವರ ಗೋವಿಂದ ಪೈಯವರನ್ನು ಕನ್ನಡ ಸಾರಸ್ವತ ಕ್ಷಿತಿಜದ ಧ್ರುವ ನಕ್ಷತ್ರವೆಂದು ಕರೆದಿರುವುದು ಸಂಪೂರ್ಣ ಒಪ್ಪತಕ್ಕ ಮಾತಾಗಿದೆ. ಕನ್ನಡ ಸಾಹಿತ್ಯದಲ್ಲಿ ಅವರಿಗಿಂತ ಮೇಲ್ಮೆಯೆನಿಸಿದ ಎಷ್ಟೋ ಸಾಹಿತಿಗಳನ್ನು ದರ್ಶಿಸಬಹುದು. ಆದರೆ ಅವರಿಗೆ ಸರಿದೊರೆಯಾಗಬಲ್ಲ ಸಂಶೋಧಕ ಬಹುಶಃ ಇನ್ನು ಹುಟ್ಟಬೇಕಷ್ಟೆ. ಪೈಯವರಂಥ ಜ್ಞಾನಸಾಧನೆಯ ಆಳ ಮತ್ತು ವಿಸ್ತಾರ ಇರುವ ಅನ್ಯವಿದ್ವಾಂಸರು ಆಧುನಿಕ ಭಾರತದಲ್ಲಿ ಕೇವಲ ಏಳೆಂಟು ಜನ ಮಾತ್ರ ಎನ್ನಬಹುದು'[೨೭] ಎಂಬ ಅಭಿಪ್ರಾಯ ಯಥಾರ್ಥವಾದುದು. 'ಅವರು ತಮ್ಮ ಪಾಂಡಿತ್ಯ ಬಲದಿಂದ ಏನನ್ನು ಸಾಧಿಸಿರುವರೋ ಅದೇ ಅವರಿಗೆ ಸಂದ ಸನ್ಮಾನ.'[೨೮] ಡಾ. ಉಪಾಧ್ಯೆಯವರ ಈ ಮಾತು ಸತ್ಯ. ಇದಲ್ಲದೆ ಇನ್ನು ಯಾವ ಸನ್ಮಾನ, ಪ್ರಶಸ್ತಿಗಳೂ ಅವರ ಸಾಧನೆಗೆ ಸಾಟಿಯಾಗಲಾರದು.

❑

**ಅಡಿ ಟಿಪ್ಪಣಿಗಳು**

೧. ಗೋವಿಂದ ಪೈ ಸಂಶೋಧನ ಸಂಪುಟ. ಸಂ. ಹೆರಂಜೆ ಕೃಷ್ಣಭಟ್ಟ, ಮುರಳೀಧರ ಉಪಾಧ್ಯ ಹಿರಿಯಡಕ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ. ಪು. ೨೫.
೨. ಗೋವಿಂದ ಪೈ. ಸಂ: ಹಾ.ಮಾ. ನಾಯಕ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ. ೧೯೮೩ ಪು. ೨೦೨.
೩. ಸಂಶೋಧನ ಸಂಪುಟ. ಪೂರ್ವೋಕ್ತ ಸಾಹಿತ್ಯಜ್ಞನ ಆತ್ಮಕತೆ. ಪು. ೪೮೭.
೪. ಅದೇ. ಪು. ೫೩೪.
೫. ಅದೇ. ಪು. ೪೮೮.
೬. ಅದೇ. ಪು. ೪೮೮–೮೯. (ಪ್ರಾಸೋಲ್ಲಂಘನೆಯ ವಿಚಾರದಲ್ಲಿ ಪೈಗಳು ಮೊದಲನೆಯವರಲ್ಲ ವೆಂಬುದನ್ನು ಸೇಡಿಯಾಪು ಕೃಷ್ಣಭಟ್ಟರು ಕನ್ನಡ ಛಂದಸ್ಸು ಎಂಬ ಲೇಖನದಲ್ಲಿ ಪುರಾವೆಗಳ ಮೂಲಕ ನಿರೂಪಿಸುತ್ತಾರೆ. ಪಂಪಭಾರತ, ಪುರಂದರದಾಸರ ರಚನೆಗಳಲ್ಲಿ ಅಲ್ಲಲ್ಲಿ ಪ್ರಾಸಭಂಗದ ಕುರುಹುಗಳಿವೆ. ಸರಳರಗಳೆಯೂ ಪ್ರಾಸಭಂಗವೂ ತಾನೇ ತಾನಾಗಿ ಆದ ಪರಿವರ್ತನೆಯಿರಬೇಕೆಂಬುದು ಅವರ ಊಹೆ.)
೭. ಅದೇ. ಪು. ೪೮೯.
೮. ಒಂದು ಹೆಣ್ಣುಮಗು ಹುಟ್ಟಿ ತೀರಿಹೋಯ್ತೆಂದು ತಿಳಿದುಬರುತ್ತದೆ.
೯. ಅದೇ. ಪು. ೪೯೦.
೧೦. ಅದೇ. ಪು. ೪೯೦.
೧೧. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ. ಸಂಶೋಧನ ಸಂಪುಟ. ಪೂರ್ವೋಕ್ತ ಪು. ೫೦೬.
೧೨. ಕಯ್ಯಾರ ಕಿಞ್ಞಣ್ಣ ರೈ. ಶ್ರೀ ಗೋವಿಂದ ಪೈ. 'ದೀವಿಗೆ'. ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಗ್ರಂಥ. ಭಂಡಾರ್ಕಾರ್ಸ್ ಕಾಲೇಜು, ಕುಂದಾಪುರ. ಪು. ೭೯.
೧೩. ಅದೇ. ಪು. ೫೪.
೧೪. ಅದೇ. ಪು. ೫೭.
೧೫. ಅದೇ. ಪು. ೮೭.
೧೬. ಗೋವಿಂದ ಪೈಗಳ ಕಾವ್ಯ. ಉದ್ಧೃತ: ಸಾಲುದೀಪಗಳು. ಪು. ೨–೩.
೧೭. ಗೋವಿಂದ ಪೈ. ಪೂರ್ವೋಕ್ತ. ಪು. ೨೧.
೧೮. ಅದೇ. ಪು. ೧೨೭.
೧೯. ಅದೇ. ಪು. ೧೧.
೨೦. ಅದೇ. ಪು. ೧೨.
೨೧. ಜಿ. ವರದರಾಜರಾವ್. ಸಹೃದಯ ಸಮೀಕ್ಷೆ. ಹೃದಯರಂಗ.
೨೨. ಗೋವಿಂದ ಪೈಗಳ ಗೊಲ್ಗೊಥಾ. ದೀವಿಗೆ. ಪೂರ್ವೋಕ್ತ ಪು. ೧೮೩.
೨೩. ಗೋವಿಂದ ಪೈ. ಪೂರ್ವೋಕ್ತ ಪು. ೪೦.
೨೪. ಅದೇ. ಪು. ೪೪.
೨೫. ಅದೇ. ಪು. ೪೩.
೨೬. ಅದೇ. ಪು. ೩೨.
೨೭. ಅದೇ. ಪು. ೩೩.
೨೮. ಅದೇ. ಪು. ೩೫.

೨೯. ಮುನ್ನುಡಿ. ಹೆಬ್ಬೆರಳು. ಪು. ೬.
೩೦. ಎಚ್.ಎಮ್. ಚೆನ್ನಯ್ಯ. ಗೋವಿಂದ ಪೈ. ಪೂರ್ವೋಕ್ತ, ಪು. ೫೫.
೩೧. ದೀವಿಗೆ. ಪೂರ್ವೋಕ್ತ. ಪು. ೧೯೦.
೩೨. ಎಚ್.ಎಮ್. ಚೆನ್ನಯ್ಯ. ಗೋವಿಂದ ಪೈ ಪೂರ್ವೋಕ್ತ, ಪು. ೫೯-೬೦.
೩೩. ಅದೇ. ಪು. ೧೨೭.
೩೪. ಅದೇ. ಪು. ೧೫೭.
೩೫. ಅದೇ. ಪು. ೧೨೨.
೩೬. ಕನ್ನಡದಲ್ಲಿ ಭಾವಗೀತೆ. ಪು. ೨೩೮. ಉದ್ಧೃತ. ಪ್ರಧಾನ ಗುರುದತ್ತ. ಅದೇ. ಪು. ೧೨೭.
೩೭. ಸಂಶೋಧನ ಸಂಪುಟ. ಪೂರ್ವೋಕ್ತ ಪು. ೫೦೦.
೩೮. ಗೋವಿಂದ ಪೈ. ಪೂರ್ವೋಕ್ತ, ಪು. ೭೨.
೩೯. ದೀವಿಗೆ. ಪೂರ್ವೋಕ್ತ ಪು. ೧೩೯.
೪೦. ಸಂಶೋಧನ ಸಂಪುಟ. ಪೂರ್ವೋಕ್ತ ಪು. ೯೨೨.
೪೧. ಗೋವಿಂದ ಪೈ ವಾಙ್ಮಯ ದರ್ಶನ. ಪೂರ್ವೋಕ್ತ. ಪು. ೩೦-೩೧.
೪೨. ಗೋವಿಂದ ಪೈ. ಪೂರ್ವೋಕ್ತ, ಪು. ೧೧೩.
೪೩. ದೀವಿಗೆ. ಪೂರ್ವೋಕ್ತ ಪು. ೭೧.
೪೪. ಅದೇ. ಪು. ೫೯.
೪೫. ಗೋವಿಂದ ಪೈ. ಪೂರ್ವೋಕ್ತ ಪು. ೧೬೬.
೪೬. ಅದೇ ಪು. ೬೬.
೪೭. ಸಂಶೋಧನ ಸಂಪುಟ ಪೂರ್ವೋಕ್ತ ಪು. ೫೦೬.
೪೮. ಅದೇ. ಪು. ೫೪೬.
೪೯. ಅದೇ. ಪು. ೫೪೯.
೫೦. ಅದೇ. ಪು. ೫೩೦.
೫೧. ಅದೇ. ಪು. ೫೨೩.
೫೨. ಗೋವಿಂದ ಪೈ. ಪೂರ್ವೋಕ್ತ. ಪು. ೧೬೫.
೫೩. ಅದೇ. ಪು. ೧೬೧.
೫೪. ಅದೇ. ಪು. ೧೬೫.
೫೫. ದೀವಿಗೆ. ಪೂರ್ವೋಕ್ತ ಪು. ೩೦೧.
೫೬. ಸಂಶೋಧನ ಸಂಪುಟ. ಪೂರ್ವೋಕ್ತ ಪು. ೪೯೭.
೫೭. ಗೋವಿಂದ ಪೈ. ಪೂರ್ವೋಕ್ತ ಪು. ೧೬೯.
೫೮. ಗಿಳಿವಿಂಡು, ಮುನ್ನುಡಿ.
೫೯. ಸಂಶೋಧನ ಸಂಪುಟ. ಪೂರ್ವೋಕ್ತ ಪು. ೪೯೧.
೬೦. ಜಿ.ಪಿ. ರಾಜರತ್ನಂ. ಗೋವಿಂದ ಪೈ ವಾಙ್ಮಯ ದರ್ಶನ. ಪೂರ್ವೋಕ್ತ ಪು. ೪೧.
೬೧. ಶ್ರೀನಿವಾಸ ಹಾವನೂರು. ಅದೇ ಪು. ೪೧.
೬೨. ಸಂಶೋಧನ ಸಂಪುಟ ಪೂರ್ವೋಕ್ತ ಪು. ೧೧೭೪.
೬೩. ದೀವಿಗೆ. ಪೂರ್ವೋಕ್ತ ಪು. ೨೧೬-೨೧೮.
೬೪. ದೀವಿಗೆ. ಪು. ೪೯.
೬೫. ಅದೇ ಪು. ೨೦.

೬೬. ಅದೇ ಪು. ೨೧.
೬೭. ಅದೇ ಪು. ೨೨.
೬೮. ಅದೇ ಪು. ೨೩.
೬೯. ಅದೇ ಪು. ೪೧.
೭೦. ಅದೇ ಪು. ೬೩.
೭೧. ಅದೇ ಪು. ೫೧.
೭೨. ಅದೇ ಪು. ೪೪.
೭೩. ಅದೇ ಪು. ೭೦.
೭೪. ಅದೇ ಪು. ೬೧.
೭೫. ಗೋವಿಂದ ಪೈ ವಾಙ್ಮಯ ದರ್ಶನ. ಪೂರ್ವೋಕ್ತ ಪು. ೩೧.

## ಡಾ. ಡಿ.ವಿ. ಗುಂಡಪ್ಪ

❖

ಡಾ. ವಿಜಯಾ ಸುಬ್ಬರಾಜ್*

**ಕ**ನ್ನಡ ಸಾರಸ್ವತ, ಸಾಹಿತ್ಯ, ಸಾಂಸ್ಕೃತಿಕ ಜಗತ್ತಿಗೆ ಡಿವಿಜಿ ಎಂದೇ ಪ್ರೀತಿಯ ಹೆಸರಿನಲ್ಲಿ ಪರಿಚಿತರಾದ ದೇವನಹಳ್ಳಿ ವೆಂಕಟ ರಮಣಯ್ಯ ಗುಂಡಪ್ಪ ಅವರದು ಬಹುಮುಖಿಯಾದ ಅನನ್ಯ ಪ್ರತಿಭೆ. ಅವರ ಬರಹದ ರಾಶಿ ಮತ್ತು ವಿಷಯ ವೈವಿಧ್ಯವನ್ನು ಗಮನಿಸಿದರೆ ಯಾರಿಗಾದರೂ ದಿಗ್ಭ್ರಮೆ ಯಾದೀತು. ಸುಖೀ ಬದುಕಿಗಿಂತ ಸಾರ್ಥಕ ಬದುಕು, ಅರ್ಥಪೂರ್ಣ ಬದುಕು; ಕ್ರಿಯಾಶೀಲ ಬದುಕು ಅತಿ ಮುಖ್ಯವೆಂದು ಭಾವಿಸಿದ್ದರಿಂದಲೇ ಅವರು ಆರ್ಥಿಕ ಮುಗ್ಗಟ್ಟಿನ ಬಗ್ಗೆಯಾಗಲೀ ಕೌಟುಂಬಿಕ ಸಮಸ್ಯೆಗಳ ಬಗ್ಗೆಯಾಗಲೀ ತಲೆ ಕೆಡಿಸಿಕೊಳ್ಳದೆ ವಿಶ್ವದ ಜ್ಞಾನ ಸಮುದ್ರವನ್ನೇ ಅಗಸ್ತ್ಯರಂತೆ ಆಪೋಷನ ತೆಗೆದುಕೊಳ್ಳಲು ಪ್ರಯತ್ನಿಸುತ್ತಿದ್ದರು. ಕ್ಷಣವೊಂದನ್ನು ವ್ಯರ್ಥಮಾಡದ ಅಧ್ಯಾತ್ಮ ಚಿಂತನೆ. ಕಾವ್ಯ ಸಾಹಿತ್ಯ ಚಿಂತನೆ. ಸಂಸ್ಕೃತಿ ಚಿಂತನೆ, ಸಾಮಾಜಿಕ, ರಾಜಕೀಯ ಚಿಂತನೆ ಇತ್ಯಾದಿಗಳ ಜೊತೆ ಜೊತೆಗೆ ಸಾಮುದಾಯಿಕ, ಜನಪರಹಿತ ಚಿಂತನೆಗಳನ್ನೇ ತಮ್ಮ ಬದುಕಿನ ತಪಸ್ಸನ್ನಾಗಿ ರೂಢಿಸಿಕೊಂಡಿದ್ದು, ಜೀವನ ಸಾರ್ಥಕ್ಯವನ್ನೇ ಉಸಿರಾಗಿಸಿಕೊಂಡಿದ್ದು ಇವುಗಳ ಚಿಂತನೆಗಳ ಹಿನ್ನೆಲೆ ಯಲ್ಲಿಯೇ ಜೀವ, ಜಗತ್ತು, ಪರಮಾರ್ಥ, ಆತ್ಮ ಇತ್ಯಾದಿ

* # ೫೧. ಹಂಸಿ. ೧ನೇ 'ಎ' ಕ್ರಾಸ್. ೩೫ನೇ ಮೇನ್. ಬನಗಿರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು–೫೬೦ ೦೮೫. ಮೊ.: ೯೮೮೬೯೨೮೮೭೭.

928 K08
BMS

ಆಧ್ಯಾತ್ಮ ಪರವಾದ ಬರಹಗಳ ಜೊತೆ ಜೊತೆಗೇ ಲೌಕಿಕ ವಿಷಯ ಸಂಬಂಧಗಳ ಬಗ್ಗೆಯೂ ಗಂಭೀರವಾದ ಅಪಾರವಾದ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಭಂಡಾರಕ್ಕೆ ಅಮೂಲ್ಯವಾದ ಕೊಡುಗೆ ಯನ್ನು ಕೊಟ್ಟಿರುವುದರಿಂದಲೇ ಅವರನ್ನು ಭಾರತೀಯ ಸಾಹಿತ್ಯದ ಅಶ್ವತ್ಥವೃಕ್ಷ, ಜ್ಞಾನಪರ್ವತ ಎಂದೆಲ್ಲಾ ಕರೆಸಿಕೊಂಡಿದ್ದಾರೆ.

ಒಂದು ಕ್ಷೇತ್ರದಲ್ಲಿಯೇ ಸಾಧಿಸಲು ಅಸಾಧ್ಯವಾದುದನ್ನು ಡಿವಿಜಿ ಅವರು ಒಂದು ಜೀವಮಾನದಲ್ಲಿಯೇ ಪತ್ರಿಕೋದ್ಯಮ, ಕಾವ್ಯ, ನಾಟಕ, ರಾಜ್ಯಶಾಸ್ತ್ರ, ರಾಜ್ಯಾಂಗಶಾಸ್ತ್ರ, ಸೌಂದರ್ಯಶಾಸ್ತ್ರ, ತತ್ವಶಾಸ್ತ್ರ, ಕಾವ್ಯಮೀಮಾಂಸೆ, ಅಧ್ಯಾತ್ಮ, ಭಾಷೆ ಇತ್ಯಾದಿ ಎಲ್ಲ ಕ್ಷೇತ್ರಗಳಲ್ಲಿ ತಮ್ಮದೇ ಆದ ಮೌಲಿಕ ಚಿಂತನೆಗಳ ಮೂಲಕ ಅನನ್ಯ ಕೊಡುಗೆ ನೀಡಿರುವುದನ್ನು ಕಂಡಾಗ ಒಬ್ಬ ವ್ಯಕ್ತಿಗೆ ಇಷ್ಟೆಲ್ಲಾ ಮಾಡಲು ಸಾಧ್ಯವೇ ಎಂಬ ಅನುಮಾನ ಪುಟಿದೇಳದಿರುವುದು ಸಾಧ್ಯವೇ ಇಲ್ಲ.

ಇಷ್ಟು ಅಪಾರವಾದ ಸಾಹಿತ್ಯರಾಶಿಯ ಜೊತೆಗೆ ಅವರ ಇನ್ನೊಂದು ಮುಖ ಸಾರ್ವಜನಿಕ ಸೇವಾ ಚಟುವಟಿಕೆಗಳು, ಸಾಮಾಜಿಕ ಸಾರ್ವಜನಿಕ ಚಟುವಟಿಕೆಗಳು ಮತ್ತು ಆ ಚಟುವಟಿಕೆಗಳ ಸ್ವರೂಪ, ಅನುಷ್ಠಾನಗೊಳಿಸುವ ವೈಖರಿ ಎಲ್ಲವೂ ಅದ್ಭುತ ವೆನಿಸುವಂತಿದ್ದರೂ, ಇಂದಿಗೂ ಅವರ ಹೆಸರನ್ನು ಚಿರಸ್ಥಾಯಿಯಾಗಿ ಮನೆ ಮನಗಳಲ್ಲಿ ನಿರಂತರ ನೆನಪಿಸಿಕೊಳ್ಳುವಂತೆ ಮಾಡಿದ್ದು, ಪರ್ವತೋಪಮ ಸಾಹಿತ್ಯ ಸಾಧನೆಯ ಶಿಖರದಂತೆ ಇರುವ ಮಂಕುತಿಮ್ಮನ ಕಗ್ಗ, 'ಮಂಕುತಿಮ್ಮನ ಕಗ್ಗ' ಕನ್ನಡದ ಭಗವದ್ಗೀತೆ ಎಂದರೆ ಅತಿಶಯೋಕ್ತಿ ಆಗಲಾರದು. ಎಲ್ಲ ಸಾಹಿತ್ಯ ಪ್ರೇಮಿಗಳ ಜನಸಾಮಾನ್ಯರ ತುದಿ ನಾಲಿಗೆಯಲ್ಲಿ ಕಾಣಿಸಿಕೊಳ್ಳುವುದೆಂದರೆ 'ಮಂಕುತಿಮ್ಮನ ಕಗ್ಗ'ದ ಪದ್ಯಗಳು. ಎಲ್ಲ ಸಂದರ್ಭಗಳಿಗೂ ಬದುಕಿನ ಎಲ್ಲ ಸನ್ನಿವೇಶಗಳಿಗೂ ಹೊಂದಿ ಬರುವಂತಹ ಮಾತುಗಳು, ಸೂಕ್ತಿಗಳು ಅವಾಗಿರುವುದರಿಂದ ಈ ಕಾವ್ಯ ಎಲ್ಲ ಹೃದಯಗಳ ಆರಾಧ್ಯ ಕೃತಿಯಾಗಿದೆ. ವೈದಿಕ ಪರಂಪರೆಯ ಅನನ್ಯ ಆರಾಧಕರಾದ ಡಿವಿಜಿ ಅವರಿಗೆ ನಮ್ಮ ಪ್ರಾಚೀನ ಸಾಂಸ್ಕೃತಿಕ ಪರಂಪರೆಯಲ್ಲಿ ವೇದ, ಶಾಸ್ತ್ರ, ಪುರಾಣೋಪನಿಷತ್ತುಗಳಲ್ಲಿ ನಮ್ಮ ದರ್ಶನಗಳಲ್ಲಿ ಅಪಾರವಾದ ಶ್ರದ್ಧೆ, ನಂಬಿಕೆ, ಯಾವುದೇ ಲೌಕಿಕ ವಿಷಯಗಳ ಚಿಂತನೆಯಿರಲಿ. ಅವುಗಳ ಹಿಂದೆ ವೇದಾಧ್ಯಯನ ಉಪನಿಷತ್ತುಗಳ ಅಧ್ಯಯನದ ಪ್ರಭಾವಗಳು ಕಾಣಿಸಿಕೊಳ್ಳುತ್ತವೆ. ಪ್ರತಿಭೆ. ಪಾಂಡಿತ್ಯ, ವ್ಯುತ್ಪತ್ತಿ, ದಾರ್ಶನಿಕ ದೃಷ್ಟಿ, ವೈಚಾರಿಕ ತೀಕ್ಷ್ಣತೆ, ವಿಶ್ಲೇಷಣಾತ್ಮಕತೆ, ಸೂಕ್ಷ್ಮ ಗ್ರಹಿಕೆ, ಆಳವಾದ ಜೀವನಾನುಭವ, ನಿರಂತರ ಕ್ರಿಯಾಶೀಲತೆ, ಅದ್ಭುತ ಸೃಜನಶೀಲತೆ, ಎಲ್ಲಕ್ಕೂ ಮೀರಿದ ಉದಾರತೆ, ಮಾನವ ಪ್ರೀತಿ, ಜೀವನ ಪ್ರೀತಿ, ನ್ಯಾಯ ನಿಷ್ಠುರತೆ, ಖಡಾಖಂಡಿತತೆ, ಸ್ನೇಹಪರತೆ ಮುಂತಾದವುಗಳ ಜೊತೆಜೊತೆಗೆ ಅಚ್ಚರಿಯೆನಿಸಬಹುದಾದ ವಿನೋದ ಪ್ರಿಯತೆ... ಹೀಗೆ ಇಷ್ಟೊಂದು ಮುಖಗಳನ್ನು ಒಳಗೊಂಡ ಅವರ ವ್ಯಕ್ತಿತ್ವವನ್ನು ಅವರಿಗೆ ತೀರಾ ತೀರಾ ಹತ್ತಿರದ ಸ್ನೇಹಿತರೂ ಸಹೋದ್ಯೋಗಿಗಳು ಅವರನ್ನು ಬಗೆ ಬಗೆಯಾಗಿ 'ರಸಿಕ ಹೃದಯ' ಅಪರಿಗ್ರಹ ವ್ರತಿ, ಅಪೂರ್ವ ಮನುಷ್ಯ, ದೈವಸಂಪನ್ಮಾರ್ಗದರ್ಶಕ, ಓಡಾಡುವ ವಿಶ್ವವಿದ್ಯಾಲಯ, ಮೈಸೂರಿನ ರಾಜಾಜಿ. ವಾಙ್ಮಯ ಪರ್ವತ, ಮಹಾನ್ ರಾಷ್ಟ್ರಕ

ಎಂದೆಲ್ಲಾ ಕರೆದು ಕೊಂಡಾಡಿದ್ದಾರೆ. ಈ ಎಲ್ಲ ಅಭಿದಾನಗಳೂ ಅವರಿಗೆ ಸಲ್ಲುತ್ತವೆ. ಇಂತಹ ಮಹಾನ್ ಸಾಧಕನನ್ನು, ಅದ್ಭುತ ವ್ಯಕ್ತಿಯನ್ನು, ಯಾವ ನೆಲೆಯಿಂದ ಪರಿಚಯಿಸುವುದೂ ಒಂದು ಸವಾಲೇ ಆಗುತ್ತದೆ. ಹೊರಬದುಕಿನಲ್ಲಿ ಕೀರ್ತಿ ಪ್ರಶಂಸೆಗಳ ಮಹಾಪೂರವೇ ಅವರಿಗೆ ಲಭ್ಯವಾಗಿದ್ದರೂ ಕೌಟುಂಬಿಕ ನೆಲೆಯ ಬದುಕು ಸಂಘರ್ಷ ಮಯವಾದದ್ದು; ಬಯಸಿದ್ದನ್ನು ಪಡೆಯಲಾಗದ ಹತಾಶ ಸ್ಥಿತಿಯದು. ಪದವಿ, ಅಧಿಕಾರಗಳು. ಆರ್ಥಿಕ ಸಹಾಯಗಳು ಅವರಿಗಿದ್ದ ಸಂಪರ್ಕ ಸಂಬಂಧಗಳಿಂದಾಗಿ, ಉನ್ನತ ಶಿಕ್ಷಣದ ಅರ್ಹತೆಯಿಲ್ಲದಿದ್ದರೂ ಪ್ರಚಂಡ ಪ್ರತಿಭೆಯ ಕಾರಣದಿಂದ ಸುಲಭ ಸಾಧ್ಯವಾಗಿದ್ದರೂ ಡಿವಿಜಿ ಅವರ ಆತ್ಮಾಭಿಮಾನ ಎಂದಿಗೂ ಅವುಗಳಿಗಾಗಿ ಹಪಹಪಿಸ ದಂತೆ ಅವರ ಪ್ರತಿಷ್ಠೆ ಗೌರವಗಳನ್ನು ರಕ್ಷಿಸಿತು.

**ಜೀವನ ಮತ್ತು ವ್ಯಕ್ತಿತ್ವ**

ಸಾಮಾನ್ಯವಾಗಿ ಡಿವಿಜಿ ಅಂಥ ಮಹಾನ್ ಚೇತನಗಳು ಜೀವನ ಸಂಘರ್ಷಗಳ ನಿಜಿಡತೆಯ ನಡುವೆಯೇ ಪುಟಿದೆದ್ದು ಮುಗಿಲೆತ್ತರಕ್ಕೆ ಬೆಳೆದು ನಿಲ್ಲುತ್ತಾರೆ. ಹಾಗೆಯೇ ಡಿವಿಜಿ ಅವರದು ಸಾಮಾನ್ಯ ಬದುಕು; ಸಾಮಾನ್ಯ ಕುಟುಂಬ. ಪೂರ್ವಜರು ತಮಿಳು ನಾಡಿನವರಾದರೂ ಹೊಟ್ಟೆಪಾಡಿಗೆಂದು ಬೇರೆ ಬೇರೆಡೆಗೆ ವಲಸೆ ಬಂದು ನೆಲೆಸಿದರು. ವೈದಿಕ ಸಂಪ್ರದಾಯ. ಆಚರಣೆಗಳಲ್ಲಿನ ನಿಷ್ಠೆ ಅವುಗಳಿಗೆ ನೀಡಿದ್ದ ಪ್ರಾಧಾನ್ಯತೆಯಿಂದಾಗಿ ಈ ಮನೆತನಗಳನ್ನು ಬೃಹಚ್ಚರಣ ಮನೆತನವೆಂದು ಗುರುತಿಸಿಕೊಳ್ಳಲಾಯಿತು.

ಡಿವಿಜಿ ಕುಟುಂಬ ಅಂದರೆ ಅವರ ತಂದೆತಾಯಿಗಳು ಕೋಲಾರದ ದೇವನ ಹಳ್ಳಿಯಲ್ಲಿ ಬಂದು ನೆಲೆಸಿದರು. ಅವರದು ಅವಿಭಕ್ತ ಕುಟುಂಬವಾದ್ದರಿಂದ ಕುಟುಂಬ ಸದಸ್ಯರ ಸಂಖ್ಯೆ ದೊಡ್ಡದಾಗಿದ್ದರೂ ಪರಸ್ಪರ ಪ್ರೀತಿ ಸ್ನೇಹ ಸಂಬಂಧ ಗಳೊಂದಿಗೆ ಅನ್ಯೋನ್ಯವಾಗಿದ್ದರು. ಡಿವಿಜಿ ಅವರ ಮುತ್ತಜ್ಜಿ ಶೇಕದಾರ ಗುಂಡಪ್ಪನವರ ಮೂವರು ಮಕ್ಕಳಲ್ಲಿ ಒಬ್ಬರಾದ ಶೇಷಗಿರಿಯಪ್ಪನವರ ಮಗ ವೆಂಕಟರಮಣಯ್ಯ ಮತ್ತು ಗುಂಜೂರು ನಾರಣಪ್ಪನವರ ಮಗಳು ಅಲಮೇಲಮ್ಮ ದಂಪತಿಗೆ ಡಿವಿಜಿ ಹಿರಿಯ ಮಗನಾಗಿ ೧೭–೩–೧೮೮೭ರಲ್ಲಿ ಜನಿಸಿದರು. ನಂತರ ಹುಟ್ಟಿದ ಡಿ.ವಿ. ಶೇಷಗಿರಿರಾವ್ ಮತ್ತು ಡಿ.ವಿ. ರಾಮರಾವ್ ಡಿವಿಜಿ ಅವರ ಇಬ್ಬರು ತಮ್ಮಂದಿರು.

ಡಿವಿಜಿ ಅವರ ಬಾಲ್ಯ ಅವರ ಚಿಕ್ಕತಾತ ರಾಮಣ್ಣ ಮತ್ತು ತಾಯಿಯ ತಾಯಿಯಾದ ಸಾಕಮ್ಮ ಎಂಬ ಅಜ್ಜಿ – ಇವರಿಬ್ಬರ ಪ್ರೀತಿ ವಾತ್ಸಲ್ಯದ ನೆರಳಲ್ಲಿ ಕಳೆಯಿತು. ಇವರಿಬ್ಬರ ಜೊತೆಗೆ ಮುಂದೆ 'ಮಂಕುತಿಮ್ಮನ ಕಗ್ಗ'ದ ಸೃಷ್ಟಿಯ ಹಿಂದಿದ್ದ ತಿಮ್ಮಪ್ಪನೆಂಬ ಸೋದರ ಮಾವನೇ. ಅವರ ಬಾಳನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿದವರಾಗಿದ್ದರು.

ಮುಳುಬಾಗಿಲಿನಲ್ಲಿ ಅವರ ಬಾಲ್ಯ ಹೆಚ್ಚಾಗಿ ಕಳೆದದ್ದು. ಸಾಮಾನ್ಯ ಜನ. ಅಲ್ಪತೃಪ್ತರು, ಹಬ್ಬಹರಿದಿನದ ಸಂದರ್ಭಗಳಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ಕಾರ್ಯಕ್ರಮಗಳು. ಜೀವನೋತ್ಸಾಹದೊಂದಿಗೆ ಬದುಕುತ್ತಿದ್ದ ಊರಿನ ಜನ ಇವೆಲ್ಲವೂ ಅವರ ಮೇಲೆ

ಪ್ರಭಾವ ಬೀರಿದ್ದುಂಟು. ಮೊದಲಿಗೆ ದೊಡ್ಡ ಕುಟುಂಬದ ನಿರ್ವಹಣೆ ಸಲೀಸಾಗಿ ಸಾಗುತ್ತಿದ್ದರೂ ಮುಂದೆ ಜೀವನೋಪಾಯ ಕಷ್ಟವೆನಿಸಿತು.

ಮುಳುಬಾಗಿಲಿನಲ್ಲಿ ಶಾಲಾ ವಿದ್ಯಾಭ್ಯಾಸ, ಜೊತೆಗೆ ತಂದೆಯವರಿಂದಲೂ ಪಾಠಗಳು. ಶಾಲಾಮಾಸ್ತರರ ಪೈಕಿ ಹೆಡ್‌ಮಾಸ್ತರ್ ಚಂದ್ರಶೇಖರಶಾಸ್ತ್ರಿ ಮತ್ತು ಇಂಗ್ಲಿಷ್ ಪಾಠ ಹೇಳುತ್ತಿದ್ದ ರಾಮಸ್ವಾಮಿ ಐಯ್ಯರ್ ಅವರ ಪ್ರಭಾವ ಡಿವಿಜಿ ಅವರ ಮೇಲೆ ಸಾಕಷ್ಟು ಇದ್ದು, ಮುಂದೆಯೂ ಅವರನ್ನು ನೆನಪಿಸಿಕೊಳ್ಳುತ್ತಿದ್ದರು. ಅವರ ಪಾಠ ಪ್ರವಚನದ ರೀತಿ, ತೋರುತ್ತಿದ್ದ ಶಿಷ್ಯವಾತ್ಸಲ್ಯ ಅವರಿಗೆ ತುಂಬಾ ಮೆಚ್ಚಿಗೆಯಾಗುತ್ತಲ್ಲದೆ, ತಾವು ಇಂಗ್ಲಿಷನ್ನು ಇಷ್ಟು ಚೆನ್ನಾಗಿ ಕಲಿತುಕೊಳ್ಳಲು ಸಾಧ್ಯವಾದದ್ದು ಅವರಿಂದಲೇ ಎಂದು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತಿದ್ದರು. ಕನ್ನಡ ಲೋಯರ್ ಸೆಕಂಡರಿ ಪಾಸಾದದ್ದೇ ಅಲ್ಲದೆ ಇಂಗ್ಲಿಷ್ ಭಾಷೆಯ ಮೇಲಿನ ಪ್ರಭುತ್ವದಿಂದಾಗಿ ಇಂಗ್ಲಿಷ್ ಲೋಯರ್ ಸೆಕಂಡರಿಯನ್ನೂ ಪೂರ್ಣ ಗೊಳಿಸಿದರು. ಜೊತೆಗೆ ಹುಡುಗನ ಪ್ರತಿಭೆ, ಸಾಮರ್ಥ್ಯಗಳಿಂದಾಗಿ ಮತ್ತು ಮೈಸೂರಿನ ಆಗಿನ ವಿದ್ಯಾಇಲಾಖೆಯ ಮುಖ್ಯಸ್ಥರಾಗಿದ್ದ ಬಾಬಾ ಸಾಹೇಬರ ಶಿಫಾರಸ್ಸಿನಿಂದ ಈ ಇಂಗ್ಲಿಷ್ ಎಲ್.ಎಸ್. ಮಾಡುತ್ತಿದ್ದಂತೆಯೇ, ಮೈಸೂರು ಮಹಾರಾಜಾ ಕಾಲೇಜಿಗೆ ಸೇರಿದ್ದ ಹೈಸ್ಕೂಲಿನಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತರು. ಆದರೆ ದುರದೃಷ್ಟದಿಂದ ಪರೀಕ್ಷೆಯಲ್ಲಿ ಅನುತ್ತೀರ್ಣರಾದರು. ಹೈಸ್ಕೂಲು ಸೇರಿದಾಗಿನಿಂದಲೇ ಓದಿನ ಹವ್ಯಾಸ ಹಚ್ಚಿಕೊಂಡಿದ್ದರು. ವಿದ್ಯಾದಾಯಿನಿ ಪತ್ರಿಕೆ, ಕರ್ನಾಟಕ ಗ್ರಂಥಮಾಲೆಯ ಪುಸ್ತಕಗಳು ಅವರ ಜ್ಞಾನದ ಹಸಿವಿಗೆ ಆಹಾರವಾಗಿ ದೊರೆತವು. ಆದರೆ ಅನೇಕ ಅಡಚಣೆಗಳ ಕಾರಣ ದಿಂದಾಗಿ ಎಸ್.ಎಸ್.ಎಲ್.ಸಿ. ಪಾಸಾಗಲಿಲ್ಲವಾದರೂ ಅದರ ಬಗ್ಗೆ ಅವರಿಗೆ ಬೇಸರವೇನೂ ಆಗಲಿಲ್ಲ. "ನನ್ನ ಓದಿಗೆ ಬುಡಭದ್ರವಿರಲಿಲ್ಲ" ಎಂದುಕೊಂಡು ತಾವೇ ಸಮಾಧಾನಗೊಂಡರು. ಆದರೆ ಅವರಿಗಿದ್ದ ಓದುವ ಹವ್ಯಾಸ ಅಥವಾ ಚಟದಿಂದಾಗಿ ಕನ್ನಡ, ಇಂಗ್ಲಿಷ್, ಸಂಸ್ಕೃತ, ಭಾರತೀಯ ವಿದೇಶೀಯ ಹೀಗೆ ಯಾವ ಯಾವ ಮೂಲಗಳಿಂದ ಸಾಧ್ಯವೋ ಅವುಗಳಿಂದ ಅಪಾರ ಜ್ಞಾನವನ್ನು ಸಂಚಯಿಸಿಕೊಳ್ಳ ತೊಡಗಿದ್ದರು. ವೈದಿಕ ಮನೆತನವಾದ್ದರಿಂದ, ಮನೆಯಲ್ಲಿ ಮಂತ್ರ, ಸ್ತೋತ್ರ ಪಠನ, ಕಾಶಿ ರಾಘವೇಂದ್ರಾಚಾರ್ಯರಲ್ಲಿ ಸಂಸ್ಕೃತ ಪಾಠ, ಮೊದಲಿಗೆ ಸಂಸ್ಕೃತದ ಬಗ್ಗೆ ಬೇಸರ ಎನಿಸಿದರೂ ಓದುತ್ತಾ ಹೋದಂತೆ ಅವರ ಸಂಸ್ಕೃತ ಶಾಸ್ತ್ರ, ಸಾಹಿತ್ಯ ಇತ್ಯಾದಿಗಳ ಬಗ್ಗೆ ಜಿಜ್ಞಾಸೆ ಹೆಚ್ಚುತ್ತಾ ಹೋಯಿತು. ಹಲವು ವಿದ್ವಾಂಸರುಗಳಿಂದ ವೇದಾಂತ, ತರ್ಕ ಇತ್ಯಾದಿ ಗಳನ್ನು ಕಲಿತರು, ಅವರಲ್ಲಿ ಇನ್ನೂ ಇನ್ನೂ ಕಲಿಯಬೇಕೆಂಬ ಅದಮ್ಯ ಬಯಕೆಯಿದ್ದರೂ ಸಾಂಸಾರಿಕ ತಾಪತ್ರಯಗಳು ಕೌಟುಂಬಿಕ ಜವಾಬ್ದಾರಿಗಳು ಉದ್ಯೋಗದ ಅನ್ವೇಷಣೆಯತ್ತ ಅವರನ್ನು ದೂಡಿತು. ತಂದೆಯವರಿಗೆ ಮಗ ಒಳ್ಳೆಯ ಅಧಿಕಾರ ಸ್ಥಾನದಲ್ಲಿರಬೇಕು; ಒಳ್ಳೆಯರಾಗಬೇಕೆಂಬ ಹೆಬ್ಬಯಕೆ. ಆದರೆ ಡಿವಿಜಿ ಅವರಿಗೆ ಯಾರ ಹಂಗಿಲ್ಲದ ಸ್ವಾವಲಂಬಿ ಬದುಕು ಬೇಕಿತ್ತು. ಸದ್ಯಕ್ಕೆ ಎಲ್ಲಿಯಾದಾದರೂ ಉದ್ಯೋಗ ಮಾಡಲೇ ಬೇಕಿತ್ತಾಗಿ ಒಂದು ಕಡೆ ಶಾಲಾ ಮಾಸ್ತರಿಕೆ ದೊರೆಯಿತು. ಅದನ್ನು ಖಾಯಂ ಆಗಿಸಿ ಕೊಳ್ಳಲು ಯಾರದೋ ಅಧಿಕಾರಿಯ ವಕೀಲಿಗೆ ಮೊರೆ ಹೋಗುವುದು ಇಷ್ಟವಾಗದೆ

ಅದನ್ನು ಬಿಟ್ಟರು. ಮುಂದೆ ತೀರಾ ತೀರಾ ಕನಿಷ್ಠ ಸ್ವರೂಪದ ಕೆಲಸ ಮಾಡಲು ಮುಂದಾದರಾದರೂ ತಂದೆಯವರ ಸಮ್ಮತಿ ಸಿಗಲಿಲ್ಲ. ಉದ್ಯೋಗಕ್ಕಾಗಿ ಊರೆಲ್ಲ ಅಲೆದಾಟ. ಕೊನೆಗೊಂದು ಕೆಲಸ ಸಿಕ್ಕಿತು. ಅದೂ ಜಟಕಾಗಾಡಿಗೆ ಬಣ್ಣ ಬಳಿಯುವ ಕೆಲಸ ಕೆಲಸ ಸಾಮಾನ್ಯದ್ದೇ ಆದರೂ, ಆದದ್ದೆಲ್ಲ, ಒಳಿತೇ ಆಯಿತು ಎಂಬಂತೆ, ಕೆಲಸದ ನೆಪದಲ್ಲಿ 'ನವರತ್ನ ಪ್ರೆಸ್' ನೊಂದಿಗೆ ಸಂಪರ್ಕ ಬೆಳೆಯಿತು; ಪತ್ರಿಕಾ ಕೆಲಸಕ್ಕಾಗಿ ನಾಂದಿಯಾಯಿತು. ಅಲ್ಲಿ 'ಸೂರ್ಯೋದಯ ಪ್ರಕಾಶಿಕಾ ಪತ್ರಿಕೆಯ ಪರಿಚಯ ಮತ್ತು ದಿವಾನ್ ಮಾಧವ ರಾಯರ ಪರಿಚಯವಾಯಿತು. ಮಾಧವರಾಯರ ಮೇಲೆ ಏನೋ ಒಂದು ಆರೋಪ ಪತ್ರಿಕೆಯೊಂದರಲ್ಲಿ ಪ್ರಕಟವಾಯಿತು. ಆ ಆರೋಪಕ್ಕೆ ಸರಿಯಾದ ಉತ್ತರ ನೀಡಲು ಡಿವಿಜಿ ಅವರನ್ನು ಆಹ್ವಾನಿಸಿ ಸರ್ಕಾರ ತಮ್ಮ ಮೇಲೆ ಹೊರಿಸಿದ ಆರೋಪಕ್ಕೆ ಸರಿಯಾದ ಉತ್ತರ ಬರೆದು ಕೊಡುವಂತೆ ತಿಳಿಸಲಾಯಿತು. ಇದೇ ಅವರ ಪತ್ರಿಕೋದ್ಯಮ ಪ್ರವೇಶಕ್ಕೆ ಮೊದಲ ಹೆಜ್ಜೆಯಾಯಿತು.

**ಪತ್ರಿಕೋದ್ಯಮದಲ್ಲಿ**

'ಸೂರ್ಯೋದಯ ಪ್ರಕಾಶಿಕೆ'ಯಿಂದ ಆರಂಭವಾದ ಅವರ ಪತ್ರಿಕಾವೃತ್ತಿ ಜೀವನ ಮುಂದೆ ನಿರಂತರವಾಗಿ ಸಾಗಿತು. ಅವರ ರಭಸದ, ವ್ಯಾಪಕವಾದ ಬರವಣಿಗೆಗೆ, ವೈಚಾರಿಕ, ವೈಜ್ಞಾನಿಕ, ರಾಜಕೀಯ ಚಿಂತನೆಗಳ ಅಭಿವ್ಯಕ್ತಿಗೆ ಮಹತ್ ಮತ್ತು ಬೃಹತ್ ವೇದಿಕೆಯಾಯಿತು. ಆದರೆ ಪತ್ರಿಕಾವೃತ್ತಿಯಾಗಲೀ ಉದ್ಯಮವಾಗಲೀ ಅಷ್ಟು ಸುಲಭದ ಕೆಲಸವಾಗಿರಲಿಲ್ಲ.

'ಸೂರ್ಯೋದಯ ಪ್ರಕಾಶಿಕಾ' ಪತ್ರಿಕೆಗೆ ಲೇಖನಗಳನ್ನು ಬರೆಯುವುದರ, ಜೊತೆಗೇ ಬೆಂಗಳೂರಿನ ದಂಡು ಪ್ರದೇಶದಿಂದ ಹೊರಡುತ್ತಿದ್ದ 'ಈವನಿಂಗ್ ಮೇಲ್' ಇಂಗ್ಲಿಷ್ ಪತ್ರಿಕೆಗೂ ಇಂಗ್ಲಿಷಿನಲ್ಲಿ ಲೇಖನಗಳನ್ನು ಬರೆದರು. ಅವರ ಬರವಣಿಗೆಗೆ ಒಳ್ಳೆಯ ಪ್ರತಿಕ್ರಿಯೆ ಬರತೊಡಗಿತು. ಡಿವಿಜಿ ಅವರು ಓದಿನ ಮೂಲಕ ಗಳಿಸಿಕೊಂಡಿದ್ದ ಅಪಾರ ಜ್ಞಾನ ಈಗ ಅವರ ಪಾಲಿಗೆ ವರವಾಗಿ ಬಂತು. ರಾಜಕೀಯ ನಾಯಕ, ವಿಶ್ವದ ಮಹಾನ್ ಚಿಂತಕರ, ದಾರ್ಶನಿಕರ, ವಿಜ್ಞಾನಿಗಳ. ಅರ್ಥಶಾಸ್ತ್ರಜ್ಞರ ಸಮಾಜ ಧುರೀಣರ, ಭಾಷಣಗಳನ್ನು ಬರಹಗಳನ್ನು ಓದಿದ್ದ ಅವರಿಗೆ, ಪತ್ರಿಕೆಗಳಿಗೆ ಯಾವುದೇ ವಿಷಯ ಸಂಬಂಧಿ ಲೇಖನಗಳನ್ನು ಬರೆಯುವುದು ಸುಲಭವಾಯಿತು. ನಿತ್ಯನಿರಂತರ ನಡೆಯುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ ಸ್ಥಿತ್ಯಂತರಗಳ ಬಗ್ಗೆ ಗಂಭೀರವಾಗಿ ಸ್ಪಂದಿಸುತ್ತಾ ಪ್ರತಿಕ್ರಿಯಿಸುತ್ತಿದ್ದರು. ಪತ್ರಿಕೋದ್ಯಮ ಕುರಿತು ಅವರು ವಿಶೇಷ ಅಧ್ಯಯನ ನಡೆಸದಿದ್ದರೂ ಸ್ವಾಧ್ಯಾಯ, ಸ್ವಾನುಭವಗಳ ಮೂಲಕ ಈ ಉದ್ಯಮದ ಎಲ್ಲ ಸೂಕ್ಷ್ಮಗಳನ್ನೂ ಏರಿಳಿತಗಳನ್ನೂ ಲಾಭ ನಷ್ಟಗಳನ್ನೂ ಕೂಲಂಕಶವಾಗಿ ಬಲ್ಲವ ರಾಗಿದ್ದರು. ಅವರು ತಮ್ಮ ಪತ್ರಿಕಾವೃತ್ತಿಗೆ ಬರಲು ತಮಗಿದ್ದ ಅರ್ಹತೆ, ಸಾಮರ್ಥ್ಯ 'ಕುರುಡು ಶ್ರದ್ಧೆ ಮತ್ತು ಅಜ್ಞಾನದ ಬಲ' ಎಂದು ಹೇಳುವುದರ ಜೊತೆಗೆ "ಬಹುಕಾಲ ಚಾಕರಿಗಾಗಿ ಒದ್ದಾಡಿದವನಿಗೆ ದೇವರು ಯಾವುದೋ ಒಂದು ಗತಿ ತೋರಿಸಿದನಲ್ಲ"

ಅದನ್ನು ಕಳೆದುಕೊಳ್ಳಬಾರದು ಎಂಬ ನಿಶ್ಚಯದ ಬಲವೊಂದೇ ನನಗಿದ್ದ ಬಂಡವಾಳ ಎನ್ನುವ ಮಾತಿನಲ್ಲಿ ಅವರ ಅಸಹಾಯಕ ಸ್ಥಿತಿ, ನೋವಿನ ಛಾಯೆ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಿದೆ.

ಅವರಿಗಿದ್ದ ಮೊಂಡು ಧೈರ್ಯ, ಬದುಕಿನ ಸವಾಲು, ಸಾಧಿಸಬೇಕೆಂಬ ಛಲ ಅವರನ್ನು ಪತ್ರಿಕೋದ್ಯಮದಲ್ಲಿ ಹಂತ ಹಂತವಾಗಿ ಮೇಲೇರುವಂತೆ ಮಾಡಿತು. ಪತ್ರಿಕೆಗಳ ಯಶಸ್ಸಿಗೆ ಅವುಗಳ ಸ್ವರೂಪ. ಒಳಗಿನ ಹೂರಣ (ವಿಷಯ) ಬಳಸುವ ಭಾಷೆ, ಶೀರ್ಷಿಕೆಗಳ ಆಕರ್ಷಣೆ, ಧ್ಯೇಯ ಧೋರಣೆಗಳು ಇವೆಲ್ಲವೂ ಸರಿಯಾದ ರೀತಿಯಲ್ಲಿ ಇರಬೇಕೆಂಬುದನ್ನು ನಂಬಿದ್ದರು. ಹಲವಾರು ಪತ್ರಿಕೆಗಳಿಗೆ ಕೆಲಸ ಮಾಡಿ ಅವುಗಳ ಒಳಹೊರಗುಗಳನ್ನೆಲ್ಲ ಕರಗತ ಮಾಡಿಕೊಂಡಿದ್ದರು. ಒಂದೇ ಪತ್ರಿಕೆಯೊಂದಿಗೆ ನೆಲೆ ನಿಲ್ಲಲ್ಲು ಅವರಿಗೆ ಸಾಧ್ಯವಾಗಲಿಲ್ಲ. ಕಾರಣ ಪತ್ರಿಕೆಗಳ ಅನಿಶ್ಚಿತತೆ. 'ಸೂರ್ಯೋದಯ ಪ್ರಕಾಶಿಕೆಯ' ಹಣೆಬರಹವೂ ಇದೇ ಆಯಿತು. ಕೊನೆಗೆ ನವರತ್ನ ಕೃಷ್ಣಸ್ವಾಮಿಯವರೊಂದಿಗೆ ಸೇರಿ ಭಾರತಿ ಎಂಬ ಕನ್ನಡ ದಿನಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಗೆ ಒಳ್ಳೆ ಪ್ರತಿಕ್ರಿಯೆ ಬಂತು. ಜನ ಇದಕ್ಕಾಗಿ ಕಾಯುತ್ತಿದ್ದರು. ದ.ಕೃ. ಭಾರದ್ವಾಜರಂತೂ ಈ ಪತ್ರಿಕೆಗೆ ತಮ್ಮ ಉತ್ಸಾಹ ಹೇಗಿತ್ತು ಎಂಬುದನ್ನು ಕನ್ನಡ ನುಡಿ ಸಂಚಿಕೆಯಲ್ಲಿ ಹೀಗೆ ವಿವರಿಸಿದ್ದಾರೆ. ಕಾಲೇಜಿನ ತರಗತಿಯು ಬಿಟ್ಟ ಕೂಡಲೇ ನಾನು ಓಡಿ ಬಂದು ನವರತ್ನ ಸನ್ಸ್ ಮುದ್ರಾಣಲಯದಿಂದ 'ಭಾರತಿ' ಪತ್ರಿಕೆ ಹೊರಬೀಳುವುದನ್ನೇ ಕಾಯುತ್ತಿದ್ದೆ. ಅದು ಹೊರಗೆ ಬಂದ ಕೂಡಲೇ ಮೂರು ಕಾಸುಕೊಟ್ಟು ಒಂದು ಸಂಚಿಕೆಯನ್ನು ಕೊಂಡು ಓಡುತ್ತಾ ಮನೆಯ ಕಡೆ ಹೊರಡುತ್ತಿದ್ದೆನು. ಅದರಿಂದಲೂ ನನ್ನ ಮುಂದಣ ಜೀವನದ ಆದರ್ಶವು ಬಗೆಗೊಳ್ಳಲು ಒಂದು ಕಾರಣವು ದೊರೆಯಿತು. ನನ್ನ ಧಮನಿಗಳಲ್ಲಿ ಹರಿಯುತ್ತಿರುವ ರಕ್ತಕ್ಕೆ ಹೃದಯಕ್ಕೆ ಆ ಬಗೆಯ ಗತಿಯನ್ನೂ ಸ್ಫುರಣವನ್ನೂ ಮತ್ತಾವ ಪತ್ರಿಕೆಯ ಬರಹವೂ (ಗಾಂಧಿಯವರನ್ನುಳಿದು) ಕನ್ನಡದಲ್ಲಿ ಕೊಟ್ಟಿಲ್ಲ." ಈ ಮಾತುಗಳು ಪತ್ರಿಕೆಯ ಸತ್ವ, ಸ್ವರೂಪ ಅದರ ಓದಿನಿಂದ ಲಭ್ಯವಾಗುತ್ತಿದ್ದ ಮೌಲ್ಯಗಳು ಎಂಥ ವೆಂಬುದಕ್ಕೆ ಹಿಡಿದ ಕನ್ನಡಿಯಾಗಿದೆ.

ಇದೇ ಹೊತ್ತಿನಲ್ಲಿ ಡಿವಿಜಿ. "ದಿ ಮೈಸೂರ್ ಸ್ಯಾಂಡರ್ಡ್" ಎಂಬ ಇಂಗ್ಲಿಷ್ ಅರ್ಧವಾರ ಪತ್ರಿಕೆಗೂ, "ನಡೆಗನ್ನಡಿ ಎಂಬ ಕನ್ನಡ ವಾರ ಪತ್ರಿಕೆಗೂ ಎಂ. ಶ್ರೀನಿವಾಸ ಐಯ್ಯಂಗಾರ್ ಅವರ ಪ್ರೋತ್ಸಾಹ ಮಾರ್ಗದರ್ಶನಗಳಲ್ಲಿ ಲೇಖನಗಳನ್ನು ಬರೆಯುತ್ತಿದ್ದರು. ಆದರೆ ಅದೇನು ದುರಾದೃಷ್ಟವೋ ಎಂಬಂತೆ ೧೯೦೮ರಲ್ಲಿ ಮೈಸೂರು ದಿವಾನರಾಗಿದ್ದ ವಿ.ಪಿ. ಮಾಧವರಾಯರು, ಪತ್ರಿಕಾ ಸ್ವಾತಂತ್ರ್ಯಕ್ಕೆ ಮಾರಕವಾಗುವ ಪತ್ರಿಕಾ ನಿರ್ಬಂಧ ಕಾನೂನನ್ನು ಜಾರಿಗೆ ತಂದರು. ಇದರ ಪ್ರಕಾರ ಸರಕಾರದ ಗಮನಕ್ಕೆ ಬಾರದೆ ಮತ್ತು ಅಪ್ಪಣೆಯಿಲ್ಲದೆ ಯಾವ ಪತ್ರಿಕೆಯನ್ನೂ ಹೊರತರುವಂತಿರಲಿಲ್ಲ. ಇದರಿಂದ ಕುಪಿತರಾದ ಪತ್ರಿಕೋದ್ಯಮಿಗಳು ಪತ್ರಕರ್ತರು ಪ್ರತಿಭಟನೆಯ ಸಂಕೇತವಾಗಿ ಪತ್ರಿಕೆಗಳನ್ನು ನಿಲ್ಲಿಸಿ ಬಿಟ್ಟರು. ಡಿವಿಜಿ ಅವರಿಗೆ ಮತ್ತೆ ಸಮಸ್ಯೆ ಎದುರಾಯಿತಾದರೂ, ಶ್ರೀನಿವಾಸ ಐಯ್ಯಂಗಾರರ ಜೊತೆಗೆ ಮದರಾಸಿಗೆ ಹೋಗಿ, ಮೈಸೂರಿನ ವೃತ್ತ ಪತ್ರಿಕಾ ಕಾನೂನಿನ ಮೇಲೆ ಹೊರಗಣ

ಪತ್ರಿಕೆಗಳಲ್ಲಿ ಬಂದಿದ್ದ ಟೀಕೆ ಟಿಪ್ಪಣಿಗಳನ್ನು ಸಂಗ್ರಹಿಸಿ ಪುಸ್ತಕ ಮಾಡುವ ಕೆಲಸಕ್ಕೆ ಸಹಾಯಕರಾಗಿ ನಿಂತರು. ``Press gag in mysore'' (ಪತ್ರಿಕೆಗಳ ವಾಗ್ಬಂದನ) ಹೆಸರಿನಲ್ಲಿ ಪುಸ್ತಕ ಪ್ರಕಟವಾಯಿತು ಮುಂದೆ 'ಹಿಂದೂ' ಮತ್ತು ಇಂಡಿಯನ್ ಪೇಟ್ರಿಯಟ್' ಪತ್ರಿಕೆಗಳಿಗೆ ಸಣ್ಣಪುಟ್ಟ ಲೇಖನಗಳನ್ನು ಬರೆಯುತ್ತಲೇ 'ವೀರಕೇಸರಿ' ಪತ್ರಿಕೆಗೆ ಸಹಾಯ ಮಾಡಲು ಮುಂದಾದರು, ಆದರೆ ಡಿವಿಜಿ ಅವರ ನಿಷ್ಠುರ ನಿಲುವು ಖಡಾ ಖಂಡಿತತ್ವ ನೇರ ನುಡಿ ಇವುಗಳಿಂದಾಗಿ ಮದ್ರಾಸಿನಲ್ಲಿ ಉಳಿಯುವುದಕ್ಕೂ ತತ್ವಾರ ಬಂತು. ಅಲ್ಲಿ ರಾಜಕೀಯ ಚಳವಳಿ ನಡೆಯುತ್ತಿದ್ದ ಸಂದರ್ಭದಲ್ಲಿ ಒಂದು ಉಪನ್ಯಾಸ ಮಾಡಬೇಕಾಗಿ ಬಂತು. ಉಪನ್ಯಾಸದಿಂದ ಏನೂ ಆಗದಿದ್ದರೂ ಅಲ್ಲಿನ ಪರಿಸ್ಥಿತಿಯಲ್ಲಿ ಡಿವಿಜಿ ಅವರು ಅಲ್ಲಿದ್ದರೆ ಅಪಾಯವೆಂಬ, ಒಬ್ಬ ಹಿತೈಷಿಯ ಮಾತಿನಿಂದ ಬೆಂಗಳೂರಿಗೆ ಹಿಂತಿರುಗಿ ಬಂದು, ಪುಸ್ತಕ ಭಂಡಾರ ಇಲ್ಲವೆ ಪತ್ರಿಕೆಯೊಂದನ್ನು ಆರಂಭಿಸುವ ಯೋಚನೆ ಮಾಡಿದರು. ಚಿಕ್ಕಪೇಟೆಯಲ್ಲಿ ಸ್ವದೇಶಿ ಲೈಬ್ರರಿ ಹೆಸರಿನಲ್ಲಿ ಪುಸ್ತಕ ಭಂಡಾರ ಪ್ರಾರಂಭದ ಜೊತೆಗೆ "ವಂದೇಮಾತರಂ ಸೀರೀಸ್" ಪುಸ್ತಕ ಮಾಲೆಯೂ ಆರಂಭ ವಾಯಿತು. ಈ ಮಾಲೆಯಲ್ಲಿ ಸಂಯುಕ್ತ ಅಂಡ್ ಯುನೈಟೆಡ್ ಇಂಡಿಯಾ ರಿಲಿಜನ್ ಅಂಡ್ ನ್ಯಾಷನಲಿಜಂ' ವೇದಾಂತ ಮತ್ತು ರಾಷ್ಟ್ರೀಯತೆ ಇತ್ಯಾದಿ ಪುಸ್ತಕಗಳು ಹೊರಬಂದವು. ವೇದಾಂತ ಮತ್ತು ರಾಷ್ಟ್ರೀಯತೆ ಕೃತಿ ಅವರ ಅಧ್ಯಾತ್ಮ ಚಿಂತನೆ ರಾಷ್ಟ್ರಚಿಂತನೆಗಳ ಸ್ವರೂಪವನ್ನು ಸ್ಪಷ್ಟವಾಗಿ ವಿವರಿಸುತ್ತದೆ. ಪಾರಮಾರ್ಥಿಕತೆ ಮತ್ತು ಲೌಕಿಕತೆಗಳ ಸಂಬಂಧ ಮತ್ತು ಅವೆರಡೂ ಕೂಡಾ ಜೀವನ ಸಾರ್ಥಕತೆಗೆ ಹೇಗೆ ಪೂರಕ ಎಂಬುದರ ವಿವರಣೆ ಇದೆ. ಇಷ್ಟೆಲ್ಲ ೧೯೧೦ರಲ್ಲಿ ನಡೆದರೆ ೧೯೧೨ಕ್ಕೆ ಮತ್ತೆ ಡಿವಿಜಿ ಅವರು ಮತ್ತೊಂದು ಸಾಹಸದ ಹೆಜ್ಜೆಗೆ ಮುಂದಾದರು. 'ಸುಮತಿ' ಎಂಬ ಪತ್ರಿಕೆ, ಸಾಮಾನ್ಯ ಪತ್ರಿಕೆಗಳಿಗಿಂತ ಭಿನ್ನವಾಗಿ, ಸುದ್ದಿ ಸಮಾಚಾರಗಳಾಗಲಿ, ಹೊಗಳಿಕೆ ತೆಗಳಿಕೆಗಳಾಗಲಿ ಇಲ್ಲದೆ ಮತ, ನೀತಿ, ವಿದ್ಯಾ ವಿಷಯ ಸಂಬಂಧಿ ಲೇಖನಗಳು ಮಹಾಪುರುಷರ ಜೀವನ ಚರಿತ್ರೆಗಳು, ಕಥೆ, ಕಾವ್ಯ, ನಾಟಕ, ಚರಿತ್ರೆ, ವಿದ್ವತ್ಪೂರ್ಣವಾದ ಲೇಖನಗಳೂ ಭಾಷಾಂತರಗಳೂ ವ್ಯವಸಾಯ, ಆರೋಗ್ಯ ವಿಷಯ ಸಂಬಂಧಿ ಬರಹಗಳು, ಸುಮತಿ, ಪತ್ರಿಕೆ, ಸುಮತಿ ಗ್ರಂಥಮಾಲೆಯ ಪ್ರಕಟಣೆಗಳಾಗಿ ಹೊರಬಂದವು. ಈ ಗ್ರಂಥಮಾಲೆಯಿಂದ ಅತ್ಯಂತ ಮೌಲಿಕವಾದ ಕೃತಿಗಳು ಹೊರಬಂದವು ಆದರೂ ಇದೂ ಏಳ್ಗೆ ಆಗಲಿಲ್ಲ. ಈ ಗ್ರಂಥಮಾಲೆಯಿಂದ ಹೊರಬಂದ ರಂಗಾಚಾರ್ಲು ಜೀವನ ಚರಿತ್ರೆ ಡಿವಿಜಿ ಅವರ ಸಾರ್ವಜನಿಕ ಪ್ರವೇಶಕ್ಕೆ ಮೆಟ್ಟಿಲಾಯಿತು. ಈ ಜೀವನ ಚರಿತ್ರೆಗೆ ಅಪಾರವಾದ ಮೆಚ್ಚುಗೆ ಪ್ರಶಂಸೆಗಳು ದೊರೆತವು. ಮುಂದೆ ಮೈಸೂರ್ ಟೈಮ್ಸ್ ಪತ್ರಿಕೆಗೆ ಸಹ ಸಂಪಾದಕರಾಗಿ ಕೆಲಸ ವಹಿಸಿಕೊಂಡರು. ಈ ಪತ್ರಿಕೆಗೆ ಡಿವಿಜಿ ಅವರು ಭಾರತದ ಸಮಾಜ ಮತ್ತು ಮತಗಳ ಮೇಲೆ ಪಾಶ್ಚಾತ್ಯ ಪ್ರಭಾವ (Western unfluence on Indian) ಎನ್ನುವ ಇಂಗ್ಲಿಷ್ ಲೇಖನವನ್ನು ಬರೆದರು. ಈ ಲೇಖನದಲ್ಲಿ ಬ್ರಿಟಿಷರ ಸಂಪರ್ಕದಿಂದ ಭಾರತೀಯರ ಮೇಲಾದ ಪರಿಣಾಮ (ಒಳ್ಳೆಯ)ಗಳನ್ನು ಗುರುತಿಸಿ ವಿವರಿಸಿದ್ದಾರೆ. ಅವರ ಗ್ರಹಿಕೆಯಲ್ಲಿ ಬೌದ್ಧಿಕ ಎಚ್ಚರ, ವ್ಯಕ್ತಿ ಸ್ವಾತಂತ್ರ್ಯ, ಮಹಿಳಾ ಮುಕ್ತಿ, ವೈಜ್ಞಾನಿಕ, ವೈಚಾರಿಕ

ಪ್ರಜ್ಞೆ, ಸಮಾಜ ಸುಧಾರಣಾ ದೃಷ್ಟಿ, ಪ್ರಯಾಣಾನುಕೂಲಗಳು – ಇವೆಲ್ಲವೂ ಸಾಧ್ಯವಾದದ್ದು ಬ್ರಿಟಿಷರ ಸಂಪರ್ಕದಿಂದಲೇ ಎನ್ನುವುದು, ಮೈಸೂರು ಟೈಮ್ಸ್ ಪತ್ರಿಕೆಯ ಸಂಪಾದಕರ ಮತ್ತು ಇವರ ನಡುವೆ ಉಂಟಾದ ಅಭಿಪ್ರಾಯ ಭೇದ, ಮಾತಿನ ಚಕಮಕಿಯಿಂದ ಸಹ ಸಂಪಾದಕತ್ವಕ್ಕೆ ರಾಜಿನಾಮೆ ಸಲ್ಲಿಸಿ ಹೊರಬಿದ್ದರು. ಆತ್ಮಪ್ರತಿಷ್ಠೆ, ಆತ್ಮಗೌರವಗಳಿಗೆ ಒತ್ತು ಕೊಡುತ್ತಿದ್ದ ಡಿವಿಜಿ ಅವರ ಸ್ನೇಹಿತರ ಹಿತೈಷಿಗಳ ಮಾತನ್ನು ಲೆಕ್ಕಿಸದೆ ವಿಶಾಲ ಪ್ರಪಂಚದಲ್ಲಿ ಬದುಕುವುದಕ್ಕೆ ಹತ್ತು ಹಲವು ದಾರಿಗಳಿವೆ ಎಂಬ ವಿಶ್ವಾಸ, ನಂಬುಗೆಗಳ ಜೊತೆಗೆ ಅವರಿಗಿದ್ದ ಆತ್ಮಸ್ಥೈರ್ಯವೂ ಕೂಡಿದ್ದರಿಂದ ಅಲ್ಲಿಂದ ಹೊರಬಿದ್ದು ಎನ್. ನರಸಿಂಹಮೂರ್ತಿ ಎಂಬುವರ ಸ್ನೇಹ ವಲಯಕ್ಕೆ ಬಂದು ಸೇರಿ, ಅವರ ಸಹವಾಸದಿಂದ ಇಂಗ್ಲಿಷ್ ಸಾಹಿತ್ಯದ ಪರಿಚಯ ಮಾಡಿಕೊಂಡರು. ಹಾಗೆಯೇ ಸಾರ್ವಜನಿಕ ಬದುಕಿನ ಪರಿಚಯವನ್ನೂ ಪಡೆದರು.

ರಂಗಾಚಾರ್ಲು ಅವರನ್ನು ಕುರಿತು 'ಇಂಡಿಯನ್ ರೆವ್ಯೂ' ಪತ್ರಿಕೆಯ ಆಗಸ್ಟ್ ೧೯೧೨ರ ಸಂಚಿಕೆಯಲ್ಲಿ ಬರೆದ ಲೇಖನ ಡಿವಿಜಿ ಅವರಿಗೆ ಸಾಕಷ್ಟು ಕೀರ್ತಿಯನ್ನು ಮತ್ತು ಮೋಕ್ಷ ಗುಂಡಂ ವಿಶ್ವೇಶ್ವರಯ್ಯ ಶ್ರೀ ಅರ್ಕಾಟ್ ಶ್ರೀನಿವಾಸಚಾರ್ಲು ಮೊದಲಾದ ಮಹಾನ್ ವ್ಯಕ್ತಿಗಳ ಸಂಪರ್ಕವನ್ನೂ ಗಳಿಸಿಕೊಟ್ಟಿತು. ಡಿವಿಜಿ ಅವರ ಈ ಪತ್ರಿಕಾ ಸಾಹಸಗಳಿಂದಾಗಿ ಮತ್ತು ಅವರು ಪತ್ರಿಕೆಗಳಿಗೆ ಬರೆಯುತ್ತಿದ್ದ ಮಹತ್ವಪೂರ್ಣ ಲೇಖನಗಳಿಂದಾಗಿ ಕರ್ಣಾಟಕ ಅಥವಾ ಮೈಸೂರು ಸಂಸ್ಥಾನದ ವೃತ್ತಪತ್ರಿಕೆಗಳ ಚರಿತ್ರೆಯಲ್ಲಿ ಅವರಿಗೆ ಒಂದು ವಿಶಿಷ್ಟ ಸ್ಥಾನ ಲಭ್ಯವಾಯಿತು.

ವೃತ್ತಪತ್ರಿಕಾ ನಿರ್ಬಂಧ ಶಾಸನವನ್ನು ಜಾರಿಗೊಳಿಸಿದ ವಿ.ಪಿ. ಮಾಧವರಾಯರಿಗೆ ನಾಮಾಂತರದೊಂದಿಗೆ ಒಂದು ಬಹಿರಂಗ ಪತ್ರವನ್ನು ಬರೆದು ಅವರ ಆಡಳಿತದಲ್ಲಿನ ಅಕ್ರಮಗಳನ್ನು ವಿವರಿಸಿ, ಇನ್ನಾದರೂ ಅವರು ತಮ್ಮ ನಿಲುವನ್ನು ಬದಲಾಯಿಸಿ ಕೊಳ್ಳುವುದು ಕ್ಷೇಮಕರವೆಂಬ ಅರ್ಥಬರುವಂತೆ ಬರೆದಿದ್ದರು. ಆದರೆ ಇದರಿಂದಾಗಿ ಸ್ವಲ್ಪ ಅಸಮಾಧಾನದ ವಾತಾವರಣ ನಿರ್ಮಾಣವಾಗಿ ಇದನ್ನು ಬರೆದದ್ದು ಡಿವಿಜಿ ಎಂದು ತಿಳಿದು ಬಂದು, ಅವರಿಂದ ಇನ್ನು ಮುಂದೆ ಬೇನಾಮಿಯಾಗಿ ಏನನ್ನೂ ಬರೆಯ ಬಾರದೆಂಬ ಪ್ರತಿಜ್ಞೆಗೆ ಒತ್ತಾಯಿಸಲಾಯಿತು.

ಪತ್ರಿಕಾ ಕೆಲಸಕ್ಕಾಗಿ ಅವರ ಅಲೆದಾಟ ನಿಲ್ಲದೆ ಮುಂದುವರೆದಿತ್ತು, ಸಣ್ಣ ಸಣ್ಣ ಪತ್ರಿಕೆಗಳಿಗೂ ಬರೆಯಲು ಸಂಕೋಚಪಡಲಿಲ್ಲ. ಅಷ್ಟರಲ್ಲಿ ವಿಶ್ವೇಶ್ವರಯ್ಯನವರಿಂದ ತಾವೊಂದು ಪತ್ರಿಕೆ ಪ್ರಾರಂಭಿಸುವ ನಿಟ್ಟಿನಲ್ಲಿ ಸಲಹೆ ಸಹಾಯಗಳನ್ನು ಪಡೆಯಲು ಹೋದರು. ಅವರಿಂದ ಭರವಸೆ ಪಡೆದು, 'ದಿ ಕರ್ನಾಟಕ' ಎಂಬ ಇಂಗ್ಲಿಷ್ ಪತ್ರಿಕೆಯನ್ನು ವಾರಕ್ಕೆ ಎರಡು ಬಾರಿ ಮುದ್ರಿಸುವುದಾಗಿ ೨-೪-೧೯೧೩ರಂದು ಡಿಸ್ಟ್ರಿಕ್ಸ್ ಮ್ಯಾಜಿಸ್ಟ್ರೇಟರ ಮುಂದೆ ಘೋಷಣೆ ಮಾಡಿದರು. ಪತ್ರಿಕಾ ವ್ಯವಸಾಯವೆಂಬುದು 'ಹಿಮಾಲಯನ್ ಟಾಸ್ಕ್', ಜೀವವನ್ನೇ ತೇಯಬೇಕಾಗಿ ಬರುತ್ತದೆ. ಆದರೆ ಅದರಿಂದ, ಪತ್ರಕರ್ತ ಬದುಕಿರುವವರೆಗೂ ಚಟುವಟಿಕೆಯಿಂದ ಇರುವಂತೆ ಮಾಡುತ್ತದೆ ಎಂಬ ಮೂರ್ತಿ ಯವರ ಮಾತುಗಳು ಡಿವಿಜಿ ವಿಷಯದಲ್ಲಿ ಸತ್ಯಸ್ಯ ಸತ್ಯವೆಂಬುದು ಸಾಬೀತಾಯಿತು.

ಅದ್ಭುತವಾದ ಪತ್ರಿಕೆ ಇದಾಗಿತ್ತು. ವಿಚಾರ ಪೂರ್ಣವಾದ ಸಂಪಾದಕೀಯಗಳು `Views and Reviews' ಶೀರ್ಷಿಕೆಯಡಿಯಲ್ಲಿ ವಿದ್ವತ್ಪೂರ್ಣ ಲೇಖನಗಳು ಕರ್ನಾಟಕದ ಏಕೀಕರಣ, ಸರಕಾರದ ಆಡಳಿತ, ಸಮಾಜ ಸುಧಾರಣೆ ಇತ್ಯಾದಿ ವಿಷಯಗಳ ಬಗ್ಗೆಯೂ ಲೇಖನಗಳಿದ್ದು ಎಲ್ಲ ಓದುಗರ ಮೆಚ್ಚಿಗೆ ಮತ್ತು ಬೇಡಿಕೆಗಳಿದ್ದೂ ಅದು ೧೯೨೧ರಲ್ಲಿ ನಿಂತು ಹೋಯಿತು. ಡಿವಿಜಿ ಅವರ ಈ ಕುರಿತು "ನಿರ್ದಾಕ್ಷಿಣ್ಯವೂ ಕಟುವೂ ಆದ ಟೀಕೆಯನ್ನು ಸಹಿಸಬಲ್ಲವರು ಸಮರ್ಥ ಅಧಿಕಾರಿಗಳು, ಅಸಮರ್ಥರೂ ಸಣ್ಣ ಮನಸ್ಸಿನವರೂ ಅಧಿಕಾರ ಪದವಿಗೆ ಏರಿದ ಮೇಲೆ ಪತ್ರಿಕಾ ವೃತ್ತಿ ಸಂತೋಷ ವಿಲ್ಲದ್ದಾಗುತ್ತದೆ. ಮೈಸೂರಿನಲ್ಲಿ ಪ್ರಜಾಪಕ್ಷವೆಂಬ ಪಾರ್ಟಿ ಹೊರಟ ಮೇಲೆ 'ಕರ್ನಾಟಕ' ಪತ್ರಿಕೆ ನಿಲ್ಲಿಸತಕ್ಕದೆಂದು ನನಗೆ ತೋರಿತು. ಆ ನಿರ್ಧಾರವನ್ನು ಒಪ್ಪಿದವರು ಕೆಲವರು; ಒಪ್ಪದಿದ್ದವರು ಕೆಲವರು ಎಂದು ಹೇಳಿರುವ ಮಾತುಗಳ ಆಳದಲ್ಲಿನ ಅರ್ಥ ಮತ್ತು ನೋವನ್ನು ಗ್ರಹಿಸುವುದು ಅಸಾಧ್ಯವಾಗುವುದಿಲ್ಲ!

ಒಂದಾದ ಮೇಲೊಂದು, ಪತ್ರಿಕಾ ಸಂಬಂಧವಾಗಿ ಆಘಾತಗಳು ಎದುರಾಗುತ್ತಿದ್ದರೂ. ಮತ್ತೆ ಮತ್ತೆ ಹೊಸ ಹೊಸ ಪತ್ರಿಕೆಗಳನ್ನು ಆರಂಭಿಸುವ ಸಾಹಸಕ್ಕೆ ಹೊರಡುವುದು ಅವರಲ್ಲಿದ್ದ ಮೊಂಡು ಧೈರ್ಯ. ಛಲ ಮತ್ತು ಪತ್ರಿಕೋದ್ಯಮದ ಬಗ್ಗೆ ಅವರಿಗಿದ್ದ ಅದಮ್ಯ ಪ್ರೀತಿ ಮತ್ತು ಬದ್ಧತೆಗಳಿಗೆ ಸಾಕ್ಷಿಯಾಗಿದೆ. ಪ್ರತಿಬಾರಿಯೂ ಹೊಸ ಪತ್ರಿಕೆಯೊಂದನ್ನು ಹೊರತಂದಾಗ ಅದು ವಿಭಿನ್ನ ಸ್ವರೂಪದ್ದಾಗಿರುತ್ತಿದ್ದಂತೆ. ಈಗಲೂ ಇಂಗ್ಲೆಂಡಿನಿಂದ ಹೊರಡುತ್ತಿದ್ದ `Review of Reviews' ಮಾದರಿಯಲ್ಲಿ ದಿ ಕರ್ನಾಟಕ ಅಂಡ್ 'ದಿ ಇಂಡಿಯನ್ ರೆವ್ಯೂ ಆಫ್ ರೆವ್ಯೂಸ್' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸಿ, ಒಂದೆರಡು ವರ್ಷ ನಡೆಸಿದವು. ದೊಡ್ಡ ದೊಡ್ಡ ಅಧಿಕಾರಿಗಳಿಂದ ವಿದ್ವಾಂಸರಿಂದ ಸ್ವತಃ ಮಹಾರಾಜರಿಂದ ಮೆಚ್ಚಿಗೆ ದೊರೆತರೂ ಮುಂದುವರೆಯದೆ ಅಲ್ಪಾಯುವಿನಲ್ಲಿ ಅಸ್ತಂಗತ ವಾಯಿತು. ಡಿವಿಜಿ ಅವರು ತಮ್ಮ ಪತ್ರಿಕಾ ವ್ಯವಸಾಯದಲ್ಲಿ ಎಷ್ಟರಮಟ್ಟಿಗೆ ಲೀನರಾಗಿದ್ದ ರೆಂದರೆ ಸಾಯುವ ಕ್ಷಣದವರೆಗೆ ಪತ್ರಿಕೆಗಳಿಗೆ ಬರೆಯುತ್ತಲೇ ಇದ್ದರು. ಪತ್ರಿಕೆಗಳ ಮೂಲಕ ತಮ್ಮ ರಾಜಕೀಯ, ಸಾಮಾಜಿಕ, ಆರ್ಥಿಕ ಚಿಂತನೆಗಳನ್ನು, ನಿಲುವುಗಳನ್ನು ಓದುಗರಿಗೆ ತಲುಪಿಸುತ್ತಿದ್ದರು. ಪತ್ರಿಕೆಗಳಿಗೆ ಬರೆಯುವ ಲೇಖನಗಳ ಹಿಂದೆಯೂ ಒಂದು ತಾತ್ತ್ವಿಕ ಚಿಂತನೆ, ಬದ್ಧತೆಗಳಿರುತ್ತಿದ್ದವು. ಪತ್ರಿಕೆಯ ಬರಹಗಳು ಹೇಗಿರಬೇಕೆಂಬುದರ ಬಗ್ಗೆ ಖಚಿತವಾದ ನಿಲುವುಗಳನ್ನು ತಳೆದಿದ್ದರು. ಇಂಡಿಯನ್ 'ರೆವ್ಯೂ ಆಫ್ ರೆವ್ಯೂಸ್' ಪತ್ರಿಕೆ ನಿಂತ ಮೇಲೆ. ಗೋಖಲೆ ಸಾರ್ವಜನಿಕ ಸಂಸ್ಥೆಯಿಂದ ಹೊರಡುತ್ತಿದ್ದ 'ಸಾರ್ವಜನಿಕ ಎಂಬ ಕನ್ನಡ ಪುರವಣಿ' 'ಪಬ್ಲಿಕ್ ಅಫೈರ್ಸ್'ನ ಭಾಗವಾಗಿ ಪ್ರಕಟವಾಗುತ್ತಿತ್ತು. ಪತ್ರಿಕೆಯ ಪ್ರಸಾರ ಕಿರಿದಾಗಿದ್ದರೂ, (ಸದಸ್ಯರಲ್ಲಿ ಮಾತ್ರ) ಪ್ರಚಲಿತ ವಿದ್ಯಮಾನಗಳ ಬಗ್ಗೆ ಟೀಕೆ ಟಿಪ್ಪಣಿಗಳು ಗೋಖಲೆ ಸಂಸ್ಥೆಯ ಕಾರ್ಯಕ್ರಮ ವಿವರಗಳು, ಉಪನ್ಯಾಸ, ಸಮಾರಂಭ ಇತ್ಯಾದಿಗಳ ವರದಿಗಳು ಈ ಪತ್ರಿಕೆಯಲ್ಲಿನ ವಿಷಯಗಳಾಗಿರುತ್ತಿದ್ದವು. ಸ್ವತಂತ್ರ ಲೇಖನಗಳಿಗೆ ಅವಕಾಶಗಳಿಲ್ಲದಿದ್ದರೂ ಇದ್ದುದರಲ್ಲೇ ಡಿವಿಜಿ ತಮ್ಮ ಚಿಂತನೆಗಳಿಗೆ ಎಡೆಮಾಡಿಕೊಳ್ಳುತ್ತಿದ್ದರು. ಅವರ ಟಿಪ್ಪಣಿಗಳು ವಿಷಯಗಳ ಅಧ್ಯಯನ ಹಾಗೂ ಅವುಗಳ

ಮೇಲಿನ ಸಮತೂಕದ ವಿಮರ್ಶೆಗಳಿಗೆ ಮಾದರಿ ಯಾಗಿಯೂ, ನಿಷ್ಪಕ್ಷಪಾತ, ಉದ್ವೇಗ ರಹಿತವಾಗಿಯೂ ಇರುತ್ತಿದ್ದವೆಂಬುದು ಹಿರಿಯ ವಿದ್ವಾಂಸರ, ಅವರ ಆಪ್ತವಲಯದ ಓದುಗರ ಅಭಿಪ್ರಾಯಗಳಾಗಿದ್ದವು. ಪತ್ರಿಕಾ ಬರಹಗಳಿಗೆ ಪ್ರೇರಣೆ, ಮಾರ್ಗದರ್ಶನ ಇಂಗ್ಲೆಂಡಿನ ಚಿಂತಕರಾದ ಮಿಲ್ ಮತ್ತು ಮಾರ್ಲೆ ಅಲ್ಲದೆ ರಾಷ್ಟ್ರಭಕ್ತ ಗೋಖಲೆ ಅವರುಗಳೇ ಆಗಿದ್ದರು. ಅವರ ಪತ್ರಿಕಾ ವ್ಯವಸಾಯ ಕುರಿತು ಶ್ರೀ ವಿ.ಎಸ್. ನಟರಾಜನ್ ಹೀಗೆ ಹೇಳಿದ್ದಾರೆ. "ಡಾ. ಗುಂಡಪ್ಪನವರು ಮಹಾಪತ್ರಕರ್ತರು ಅವರ ಬರೆಹದ ಶೈಲಿ ಗ್ಲಾಡ್‌ಸ್ಟನ್ ಶೈಲಿಯ ಹಾಗೆ, ಸ್ಪಷ್ಟ ಸಂಕ್ಷೇಪ ಹಾಗೂ ಹರಿತ ಗೋಖಲೆ ಸಂಸ್ಥೆಯ ಪತ್ರಿಕೆಯಲ್ಲಿ 'ಡಿವಿಜಿ' ಎಂಬ ಅಂಕಿತದಲ್ಲಿ ಅವರು ಬರೆಯುತ್ತಿದ್ದ ಟಿಪ್ಪಣಿಗಳು ಪ್ರಚಲಿತ ಘಟನೆಗಳನ್ನು ಯಥಾವತ್ತಾಗಿ ನಿಚ್ಚಳವಾಗಿ ಚಿತ್ರಿಸುತ್ತಿದ್ದವು. ಮಾತ್ರವಲ್ಲ ಅವು ಗಂಭೀರ ಸಾಹಿತ್ಯಕ್ಕೆ ಉದಾಹರಣೆ ಕೂಡ. ಅವರ ಟೀಕೆ ಯಾವಾಗಲೂ ಸೌಜನ್ಯಯುತ ಅವರ ಟಿಪ್ಪಣಿಗಳನ್ನೆಲ್ಲ ಕೂಡಿಸಿ ಪುಸ್ತಕವಾಗಿ ಪ್ರಕಟಿಸಬೇಕು ಅದರಿಂದ ಮುಂದಿನ ಪೀಳಿಗೆಗೆ ಲಾಭ" ಈ ಮಾತುಗಳು ಡಿವಿಜಿಗೆ ಸಂದ ಪ್ರಶಸ್ತಿ, ಗೌರವಗಳೇ ಆಗಿವೆ.

ಆಕಸ್ಮಿಕವಾಗಿ ಪತ್ರಿಕಾವೃತ್ತಿಗೆ ಬಂದರೂ, ಅತ್ಯಲ್ಪ ಕಾಲದಲ್ಲಿಯೇ ಅದರ ಆಳ ವಿಸ್ತಾರಗಳನ್ನು ಹೃದ್ಗತ ಮಾಡಿಕೊಂಡರು. ಪತ್ರಿಕೋದ್ಯಮ ಸಂಬಂಧವಾಗಿ ತಮ್ಮ ಅನುಭವದ ಮೂಲಕ ಕಲಿತದ್ದೆಲ್ಲವನ್ನೂ ತಿಳಿದದ್ದೆಲ್ಲವನ್ನೂ ತಿಳಿಸಬೇಕೆನ್ನುವ ಅವರ ಮೂಲ ಉದ್ದೇಶದಂತೆ ಒಂದು ಕಿರು ಕೈಹೊತ್ತಿಗೆಯನ್ನು 'ವೃತ್ತ ಪತ್ರಿಕೆ' ಎಂದು ೧೯೨೮ರಲ್ಲಿ ತಂದದ್ದನ್ನು ಮತ್ತೆ ಅವರ ಪತ್ರಿಕಾ ವೃತ್ತಿಯ ೬೦ನೇ ವರ್ಷದ ನೆನಪಿಗೆಂದು ಮರುಮುದ್ರಣಗೊಂಡು ೧೯೬೬-೬೭ರಲ್ಲಿ ಒಂದು ಕೈಪಿಡಿಯಾಗಿ ಮಾರ್ಗದರ್ಶಕ ಕೃತಿಯಾಗಿ ಓದುಗರ ಕೈ ಸೇರಿತು. ಈ ಹೊತ್ತಿಗೆಯಲ್ಲಿ ವೃತ್ತಪತ್ರಿಕೆಯ ಸ್ವರೂಪ, ಕರ್ತವ್ಯ, ಅದರ ಸಹಾಯ, ಪತ್ರಿಕಾ ಸ್ವಾತಂತ್ರ್ಯ ಪತ್ರಿಕೆ ಮತ್ತು ಶಾಸನ ಸಂಸ್ಥೆ, ಪತ್ರಿಕಾ ಸ್ವಾತಂತ್ರ್ಯದಲ್ಲಿ ಸ್ಥಾನಗೌರವ, ಪತ್ರಿಕೋದ್ಯೋಗಿಯ ಪ್ರತಿಜ್ಞೆ, ಮೈಸೂರಿನಲ್ಲಿ ಪತ್ರಿಕಾವೃತ್ತಿ ಹುಟ್ಟಿ ಬೆಳೆದ ಬಗೆ, ಅದರ ಇತಿಹಾಸ, ಆದ್ಯ ಪ್ರವರ್ತಕರು, ಮುದ್ರಣಯಂತ್ರ ಸೌಕರ್ಯಗಳ ವಿಚಾರ, ಪತ್ರಿಕಾ ಲೇಖನದ ಶೀಲ ಸ್ವಭಾವಗಳು, ವರದಿ, ಟೀಕೆಗಳು, ಶೈಲಿ, ಜ್ಞಾನ ಪ್ರಸಾರ, ಪದಗಳ ಬಳಕೆ, ಕನ್ನಡ ಭಾಷಾಜ್ಞಾನ ಇತರ ಭಾಷೆಗಳ ಪದಗಳ ನೆರವು ಟೀಕೆಯಲ್ಲಿನ ಹಿಡಿತ ವಿವರಣೆಯಲ್ಲಿನ ಹಾಳತ, ವಿಮರ್ಶೆಯಲ್ಲಿರಬೇಕಾದ ಸಮತೂಕ, ಉದ್ವೇಗರಾಹಿತ್ಯತೆ, ಲೋಕಹಿತ ಚಿಂತನೆಯ ಅಗತ್ಯ, ಪತ್ರಕರ್ತನಾಗಿ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ನ್ಯಾಯ ತತ್ವಶಾಸ್ತ್ರ, ತರ್ಕ ವಿಮರ್ಶೆಗಳ ಪರಿಚಯ, ಪತ್ರಕರ್ತರ ಜವಾಬ್ದಾರಿ ಸಂಘಟನೆ ಇತ್ಯಾದಿ ಸಮಗ್ರ ವಿವರಣೆಯನ್ನು ನೀಡಿದ್ದಾರೆ. ಪತ್ರಿಕೋದ್ಯಮಕ್ಕೂ ಒಂದು ಆದರ್ಶದ ನೆಲೆಗಟ್ಟು ಇರಬೇಕೆಂಬುದು ಅವರ ದೃಢವಾದ ನಂಬಿಕೆಯಾಗಿತ್ತು. ಪತ್ರಕರ್ತ ಯಾವ ಬಾಹ್ಯ ನಿರ್ಬಂಧಕ್ಕೂ ಒಳಗಾಗುವಂತಾಗಬಾರದು ಆದರೆ ತಾನೇ ತನ್ನನ್ನು ಸ್ವಯಂ ನಿಯಂತ್ರಿಸಿ ಕೊಳ್ಳಬೇಕು. ಶಿಸ್ತು, ಸಂಯಮಗಳನ್ನು ಪಾಲಿಸಬೇಕು. ಎಂಬ ಅಭಿಪ್ರಾಯದ ಜೊತೆಗೆ ಪತ್ರಕರ್ತರದಲ್ಲಿ ಅಥವಾ ಪತ್ರಿಕೋದ್ಯಮಿಗಳಲ್ಲಿ ಅವರ ನಿವೇದನೆ ಹೀಗೆ ಉಕ್ತವಾಗಿದೆ–"ನಮ್ಮ ಪತ್ರಿಕೋದ್ಯಮಿಗಳಲ್ಲಿ ನನ್ನದು ಎರಡೇ ವಿಜ್ಞಾಪನೆ. ಮೊದಲನೆಯದು:

ಪ್ರತಿಯೊಬ್ಬ ಪತ್ರಕರ್ತನೂ ಯತ್ಕಿಂಚಿತ್ತಾದರೂ ಸಾಹಿತ್ಯ ವ್ಯಾಸಂಗ ಮಾಡಬೇಕು. ಯಾವುದಾದರೂ ಒಂದು ಕಾವ್ಯವನ್ನು ಬಲವಾಗಿ ಹಿಡಿದಿರಬೇಕು. ಶ್ರೀಮದ್ ರಾಮಾಯಣವನ್ನು ಓದಬೇಕು ಇಲ್ಲ ಗದುಗಿನ ಭಾರತವನ್ನು ಓದಬೇಕು. ಆಮೂಲಾಗ್ರವಾಗಿ ಚೆನ್ನಾಗಿ ಓದಬೇಕು."

ಎರಡನೇದಾಗಿ, ಕನ್ನಡ ಸಾಹಿತ್ಯದ ಜೊತೆ ಜೊತೆಗೆ ಇಂಗ್ಲಿಷ್ ಲೇಖಕರಾದ ಷೇಕ್ಸ್‌ಪಿಯರ್, ಡಿಕೆನ್ಸ್ ಕೃತಿಗಳು, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಇತ್ಯಾದಿಯಾಗಿ ಹಲ ಕೆಲವು ಶಾಸ್ತ್ರಗಳನ್ನು ಓದಿರಬೇಕೆಂಬುದು ಡಿವಿಜಿ ಅವರ ಮತ.

ಪತ್ರಿಕೋದ್ಯಮ ಕುರಿತು ಮಾತಾಡುವುದು ಬರೆಯುವುದು ಅಷ್ಟಕ್ಕೆ ನಿಲ್ಲದೆ ಪತ್ರಕರ್ತರ ಕ್ಷೇಮ ಚಿಂತನೆಯನ್ನೂ ಮಾಡಿದ್ದರು. ಫಲವಾಗಿ ಪತ್ರಕರ್ತರ 'ಸಂಘಟನೆ' ಸ್ಥಾಪಿಸಿ ತನ್ಮೂಲಕ ಪತ್ರಕರ್ತರ ಅಗತ್ಯಗಳಿಗೆ ನೆರವಾಗುತ್ತಿದ್ದರು. ಮಾರ್ಗದರ್ಶಕರಾಗುತ್ತಿದ್ದರು. ಪತ್ರಕರ್ತರಿಗಾಗಲೀ ಪತ್ರಿಕೋದ್ಯಮಕ್ಕಾಗಲೀ ಅನ್ಯಾಯವಾದಾಗ ಸಾಮೂಹಿಕ ಅಥವಾ ಸಂಘಟಿತ ಪ್ರತಿಭಟನೆ, ಚಳವಳಿಗೆ ಮುಂದಾಗುತ್ತಿದ್ದರು. ಪತ್ರಕರ್ತರ ಸಂಘದ ಜೀವನಾಡಿಯಾಗಿದ್ದ ಡಿವಿಜಿ ಅವರ ಕಲ್ಯಾಣಕ್ಕಾಗಿ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ರೂಪಿಸಿದ್ದರು. ಹೀಗಾಗಿ ಡಿವಿಜಿ ಅವರು ಪತ್ರಿಕಾವೃತ್ತಿಗೆ ಅತ್ಯಮೂಲ್ಯವಾದ ಕೊಡಿಗೆ ನೀಡಿ ಅನನ್ಯ ಪತ್ರಿಕೋದ್ಯಮಿ ಎಂಬ ಹೊಗಳಿಕೆಗೆ ಪಾತ್ರರಾಗಿದ್ದಾರೆ.

### ಡಿವಿಜಿ ಮತ್ತು ರಾಜಕಾರಣ

ಡಿವಿಜಿ ಬದುಕಿನ ಮೊದಲ ಹೆಜ್ಜೆ, ಅಪ್ರತಿಮ ಸಾಧನೆ ಪತ್ರಿಕಾ ವ್ಯವಸಾಯವಾದರೆ, ಎರಡನೇ ಹೆಜ್ಜೆ ರಾಜಕಾರಣಕ್ಕೆ ಪಾದಾರ್ಪಣೆ. ಮೂಲಭೂತವಾಗಿ ಡಿವಿಜಿ ಅವರದು ಅಧ್ಯಾತ್ಮಿಕ ಪ್ರವೃತ್ತಿಯಾದರೂ ತತ್ವಜ್ಞಾನಿ, ದಾರ್ಶನಿಕ ಎಂಬುದು ಒಳಪ್ರವೃತ್ತಿಯಾಗಿದ್ದರೂ ತೀರಾ ವ್ಯವಹಾರಿಕ, ಲೌಕಿಕ ಎನ್ನಬಹುದಾದ, ಪತ್ರಿಕಾ ಜಗತ್ತನ್ನು ರಾಜಕೀಯ ಜಗತ್ತನ್ನು ಪ್ರವೇಶಿಸಿದ್ದು ಹೇಗೆ ಏಕೆ ಎಂಬ ಪ್ರಶ್ನೆಗಳು ಸಹಜವಾಗಿ ಏಳುತ್ತವೆ. ಡಿವಿಜಿ ವಿದ್ಯಾರಣ್ಯರನ್ನು ಬಹುವಾಗಿ ಹಚ್ಚಿಕೊಂಡಿದ್ದರು. ಅವರ ವಿಷಯವಾಗಿ ಸಾಕಷ್ಟು ಸಂಶೋಧನೆ ನಡೆಸಿ, ವಿಷಯ ಸಂಗ್ರಹಣೆ ಮಾಡಿ, 'ವಿದ್ಯಾರಣ್ಯ' ಎಂಬ ನಾಟಕವಲ್ಲದೆ ಅವರ ವೃತ್ತಾಂತ ಕುರಿತ ಮೂರು ಕೃತಿಗಳನ್ನೂ ರಚಿಸಿದ್ದರು. ವಿದ್ಯಾರಣ್ಯರು ಸಂನ್ಯಾಸಿಗಳಾಗಿದ್ದೂ ವಿಜಯನಗರ ಸ್ಥಾಪನೆ ಮಾಡಿದ್ದು, ಅವರ ರಾಜಕೀಯ ಧಾರ್ಮಿಕ ನೆಲೆಗಳ ಪರಿಚಯವನ್ನು ಮಾಡಿಸಿತು. 'ನಿತ್ಯಧರ್ಮವಾದ ಆಧ್ಯಾತ್ಮವನ್ನು ಬದಿಗಿರಿಸಿ ಆಪದ್ಧರ್ಮವಾದ ರಾಜಕಾರಣಕ್ಕೆ ಬಂದ ಸಂಗತಿ ಡಿವಿಜಿ ಅವರಿಗೆ ಮಹದ್ಪ್ರೇರಣೆಯಾಯಿತು. ಇವರಂತೆಯೇ ಚಾಣಕ್ಯರೂ ಕೂಡಾ ರಾಜ್ಯಸ್ಥಾಪನೆಗೆ ಪ್ರೇರಕ, ಪೋಷಕ ಶಕ್ತಿಯಾಗಿದ್ದರೇ ಹೊರತು ತಾವೇ ರಾಜಕೀಯ ಅಧಿಕಾರದಲ್ಲಿ ಇರಬೇಕೆಂದು ಬಯಸಲಿಲ್ಲ. ಇವೆಲ್ಲದರ ಅರಿವಿನೊಂದಿಗೆ ಅನೇಕ ಅನಿವಾರ್ಯ ಸಂದರ್ಭಗಳಲ್ಲಿ ರಾಜಕಾರಣದಲ್ಲಿಯೂ ಆಸಕ್ತಿಯಿಂದ ತೊಡಗಿಸಿಕೊಳ್ಳಲೇಬೇಕಾದ ಪರಿಸ್ಥಿತಿ ಏರ್ಪಟ್ಟಿತು. ಒಂದು ಕಡೆ ಸ್ವಾತಂತ್ರ್ಯ ಹೋರಾಟದ ಪರಿಸರ, ಗಾಂಧಿ, ಗೋಖಲೆ ಅಂತಹ ರಾಷ್ಟ್ರಭಕ್ತರ ಧ್ಯೇಯೋದ್ದೇಶಗಳನ್ನು ನಿರ್ಲಕ್ಷಿಸುವುದು ಸಾಧ್ಯವೇ

ಇಲ್ಲದಂತೆ ಆಗಿತ್ತು. ಅಂದಿನ ಪರಿಸರ ತರುಣರಾಗಿದ್ದ ಡಿವಿಜಿ ಅವರ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಕಾಂಗ್ರೆಸ್ ಸಭೆ ಸಮಿತಿಗಳಲ್ಲಿ ಓಡಾಡುತ್ತಾ ಸಭೆಯ ಕಲಾಪಗಳು, ನಾಯಕರ ಭಾಷಣಗಳು ಡಿವಿಜಿಯಾದಿಯಾಗಿ ಅನೇಕ ತರುಣರಲ್ಲಿ ರಾಷ್ಟ್ರಪ್ರೇಮ ಉಕ್ಕಿಸುತ್ತಿದ್ದವು. ಮೈಸೂರು ಸಂಸ್ಥಾನದ ಆಡಳಿತಗಾರರು ಮಹಾರಾಜರಾಗಿದ್ದರು. ಆಗಿನ ಕಾಲದಲ್ಲಿ ರಾಜರಲ್ಲಿ ಜನರಿಗೆ ಅತಿಯಾದ ಭಕ್ತಿಗೌರವಗಳು. ಡಿವಿಜಿ ಅವರಿಗೂ ಅಪಾರವಾದ ರಾಜಭಕ್ತಿ ಜೊತೆಗೆ ಬ್ರಿಟಿಷ್ ಚಕ್ರವರ್ತಿಗಳ ಬಗ್ಗೆಯೂ ಅವರಿಗೆ ಆದರ ಗೌರವಗಳಿದ್ದವು. ಸಂಸ್ಥಾನಗಳ ಜನತೆ ರಾಷ್ಟ್ರೀಯ ಭಾವನೆಗಳಿಗೆ ಸ್ಪಂದಿಸಬೇಕು; ರಾಷ್ಟ್ರೀಯ ಚಳವಳಿಯಲ್ಲಿ ತೊಡಗಿಸಿಕೊಳ್ಳಬೇಕು ಎಂಬುದು ಡಿವಿಜಿ ಅವರ ಆಸೆಯಾಗಿತ್ತು. ಜನಸ್ಪಂದನದ ಅಗತ್ಯ ಕುರಿತು ಅನೇಕ ಲೇಖನಗಳನ್ನು ಬಿಕಾನೇರ ಮಹಾರಾಜರಿಗೆ ಹಲವು ಪತ್ರಗಳನ್ನು ಬರೆದರು. ಆ ಪತ್ರಗಳನ್ನೆಲ್ಲ ಸಂಕಲಿಸಿ ``The problems of Indian Native States'' ಎಂಬ ಕೃತಿಯನ್ನು ಪ್ರಕಟಿಸಿದರು. ಹೋಂರೂಲ್ ಅಥವಾ ಸ್ವರಾಜ್ಯ ಬಂದರೆ ದೇಶೀಯ ಸಂಸ್ಥಾನಗಳ ಸ್ಥಿತಿಗತಿ ಕುರಿತ ಅನೇಕ ಪ್ರಶ್ನೆಗಳನ್ನು ಎತ್ತಿದರು. ದೊಡ್ಡ ದೊಡ್ಡ ಸಂಸ್ಥಾನಗಳನ್ನು ಹೊರತು ಪಡಿಸಿ ಮಿಕ್ಕೆಲ್ಲವೂ ಭಾರತದ ಒಕ್ಕೂಟದಲ್ಲಿ ಸೇರಬೇಕು, ದೊಡ್ಡ ಸಂಸ್ಥಾನಗಳಲ್ಲಿ ಪ್ರಜಾಪ್ರತಿನಿಧಿ ಸರಕಾರ ಬರಬೇಕು ಎಂಬುದು ಡಿವಿಜಿ ಅವರ ಆಶಯವಾಗಿತ್ತು. ಹಲವು ಕಾಂಗ್ರೆಸ್ ಅಧಿವೇಶನಗಳಲ್ಲಿ ಭಾಗವಹಿಸಿದರು. ಅಲ್ಲಿ ದೇಶೀ ಸಂಸ್ಥಾನಗಳ ವಿಷಯವೇ ಚರ್ಚೆಗೆ ಬಾರದಿದ್ದು ನೋಡಿ ಬೇಸರಗೊಂಡರು. ಆದರೆ ವಿ.ಎಸ್. ಶ್ರೀನಿವಾಸಶಾಸ್ತ್ರಿಯವರು ಪರಿಚಯವಾಗಿ, ದೇಶೀಯ ಸಂಸ್ಥಾನಗಳ ಪ್ರಸ್ತಾಪವಾಗಿ, ಅದರ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಣೆಗೆ ಡಿವಿಜಿ ದೆಹಲಿಗೆ ಹೋಗಿ ಬರಬೇಕೆಂದು ತಿಳಿಸಿದರು. ಡಿವಿಜಿ ಕೂಡಲೇ ತಮ್ಮ ಪತ್ರಿಕಾ ಮನೋಧರ್ಮಕ್ಕೆ ಸ್ಪಂದಿಸಿ ``Karnataka and Indian Native States'' ಎಂಬ ಪತ್ರಿಕೆ ಪ್ರಾರಂಭಿಸಿ ಲೇಖನಗಳನ್ನು ಬರೆದರು. ಆದರೆ ಅದು ಅತಿ ಶೀಘ್ರವಾಗಿಯೇ ನಿಂತು ಹೋಯಿತು. ಏನೇ ಆದರೂ ದೇಶೀಯ ಸಂಸ್ಥಾನಗಳ ಆಲೋಚನೆಯ ಹುಳ ಹೊಕ್ಕು ಅದರ ಬಗ್ಗೆ ಲೇಖನಗಳನ್ನು ಪುಸ್ತಕಗಳನ್ನು ಬರೆಯುತ್ತಲೇ ಹೋದರು.

೧೯೧೮ರಲ್ಲಿ ಲಾರ್ಡ್ ಮಾಂಟೆಗೊ ಚೇಲ್ಸ್‌ಫರ್ಡ್ ಸುಧಾರಣೆ ಬಂದಾಗ, Indian Native States ಕುರಿತು ವಿಮರ್ಶೆ ಬರೆದರು. `Govt. of India and Indian States' ಎಂಬ ಯೋಜನೆ ಸಿದ್ಧಪಡಿಸಿದರು. ೧೯೨೮ರಲ್ಲಿ ಬಟ್ಲರ್ ಸಮಿತಿಗೆ ಒಂದು ಟಿಪ್ಪಣಿ ರಚಿಸಿ ಸಲ್ಲಿಸಿದರು. ೧೯೩೧ರಲ್ಲಿ `The States and their people in the Indian Constitution' ಎಂಬ ಪುಸ್ತಕ ಬರೆದರು. ಈ ಪುಸ್ತಕಕ್ಕೆ ದೇಶವಿದೇಶಗಳಿಂದ ಪ್ರಶಂಸೆಯ ಮಾತುಗಳು ಕೇಳಿ ಬಂದವು.

ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಬಹಳ ಬಿರುಸಾಗಿತ್ತಾದರೂ ಡಿವಿಜಿ ನೇರವಾಗಿ ಅದರಲ್ಲಿ ತೊಡಗಲಿಲ್ಲವಾದರೂ ಸ್ವಾತಂತ್ರ್ಯ ಚಳವಳಿಯ ಮಹಾನ್ ನಾಯಕ ಗಾಂಧಿಯವರ ಮತ್ತು ಗೋಖಲೆಯವರ ತತ್ವಾದರ್ಶ, ವ್ಯಕ್ತಿತ್ವಗಳಿಗೆ ಮಾರು ಹೋದರು. ಗಾಂಧೀಜಿ ಅವರ ಖಾದಿ ಚಳವಳಿಗೆ ಮಾತ್ರ ತಮ್ಮನ್ನು ಒಪ್ಪಿಸಿಕೊಂಡರು.

ಮೊದಲಿನಿಂದಲೂ ಡಿವಿಜಿ. ಎಷ್ಟೇ ರಾಜಭಕ್ತಿ, ನಿಷ್ಠೆ ಉಳ್ಳವರಾಗಿದ್ದರೂ ಪ್ರಜಾ ಸರಕಾರವನ್ನೇ ಪುರಸ್ಕರಿಸುತ್ತಾ ಬಂದಿದ್ದರು. ಜವಾಬ್ದಾರಿ ಸರಕಾರ ಬರಬೇಕೆಂಬುದು ಅವರ ಹಂಬಲವಾಗಿತ್ತು ಪರೋಕ್ಷವಾಗಿ ತಮ್ಮ ಚಿಂತನೆಗಳ ಮೂಲಕ ರಾಜಕೀಯ ಕ್ಷೇತ್ರದಲ್ಲಿ ಸಕ್ರಿಯವಾಗಿ ಸ್ಪಂದಿಸಿದರಾದರೂ ನೇರವಾಗಿ ಯಾವುದೇ ರಾಜಕೀಯ ಜವಾಬ್ದಾರಿಯನ್ನು ವಹಿಸಿಕೊಂಡಿರಲಿಲ್ಲ. ರಾಜಕೀಯಕ್ಕೆ ನಿಜವಾದ ಪ್ರವೇಶ ಆದದ್ದು ಸರ್.ಎಂ. ವಿಶ್ವೇಶ್ವರಯ್ಯನವರಿಂದ. ಡಿವಿಜಿ ಅವರನ್ನು ಬೆಂಗಳೂರು ನಗರ ಸಭೆಗೆ ಸದಸ್ಯರನ್ನಾಗಿ ಮಾಡಿದರು. ನಂತರ ಮಿರ್ಜಾ ಇಸ್ಮಾಯಿಲ್ ದಿವಾನರಾದಾಗ ಡಿವಿಜಿ ಅವರನ್ನು ನ್ಯಾಯವಿಧಾಯಕ ಸಭೆಗೆ ಸದಸ್ಯರನ್ನಾಗಿ ನಾಮಕರಣ ಮಾಡಿದರು. ಆದರೆ ಯಾರೋ ಒಂದು ಸಂದರ್ಭದಲ್ಲಿ ಮಾಡಿದ ಟೀಕೆಯಿಂದ ಬೇಸರಗೊಂಡು, ಸದಸ್ಯತ್ವದ ಅವಧಿ ಮುಗಿಯುತ್ತಿದ್ದಂತೆ ಹೊರಬಂದರು. ಮತ್ತೆ ಸದಸ್ಯತ್ವಕ್ಕೆ ಆಹ್ವಾನ ಬಂದಾಗ ಡಿವಿಜಿ ಒಪ್ಪಿಕೊಳ್ಳಲಿಲ್ಲ. ಆದರೆ ಸ್ವತಃ ಸ್ಪರ್ಧಿಸಿ ಗೆಲುವು ಪಡೆದರು. ಹಲವು ದಿವಾನರುಗಳ ಕಾಲದಲ್ಲಿ ಅವರ ಜೊತೆ ಕೆಲಸ ಮಾಡಿದರಾದರೂ, ತಮ್ಮ ತತ್ವಾದರ್ಶಗಳಿಗೆ, ನಂಬಿಕೆ, ವಿಶ್ವಾಸಗಳಿಗೆ ಧಕ್ಕೆ ಬಂದಾಗ ನಿಷ್ಠುರವಾಗಿ ವಿರೋಧಿಸುತ್ತಿದ್ದರು. ರಾಜಕೀಯ ಸುಧಾರಣಾ ಸಮಿತಿಗಳಲ್ಲಿದ್ದು ಪ್ರಜಾಪ್ರಭುತ್ವವನ್ನು ಬಲವಾಗಿ ಬೆಂಬಲಿಸಿದರು.

ಹಳೆ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಜಯ ದೊರೆತಾಗ ಡಿವಿಜಿ ಸಂಭ್ರಮಿಸಿದರು. ಡಿವಿಜಿ ನಿರಂತರವಾಗಿ ರಾಷ್ಟ್ರಹಿತ ಚಿಂತನೆಯಲ್ಲಿಯೇ ತಮ್ಮನ್ನು ತೊಡಗಿಸಿಕೊಂಡರು. ಡಿವಿಜಿ ಅವರ ಒಲವು 'ಲಿಬರಲಿಸಂ' (ಮಿತವಾದ, ಸೌಮ್ಯವಾದ) ಕಡೆಗಿತ್ತು. ಇಂಗ್ಲೆಂಡಿನ ಜಾನ್ ಸ್ಟೂಯರ್ಟ್‌ಮಿಲ್, ಎಡ್ಮಂಡ್ ಬರ್ಕ್, ಲಾರ್ಡ್ ಮಾರ್ಲೆ ಮೊದಲಾದವರ ಲಿಬರಲ್ ಧೋರಣೆ ಅವರಿಗೆ ಅತ್ಯಂತ ಪ್ರಿಯವಾಗಿತ್ತು. ಭಾರತೀಯ ನೆಲೆಯಲ್ಲಿ ಗೋಪಾಲಕೃಷ್ಣ ಗೋಖಲೆಯಂತಹ ನಾಯಕರ ಸೌಮ್ಯವಾದಿ ರಾಜಕೀಯ ಧೋರಣೆ ಮತ್ತು ಅದರಿಂದ ರೂಪಿತವಾದ ಅವರುಗಳ ಜೀವನ ವಿಧಾನ ಡಿವಿಜಿ ಅವರಿಗೆ ತುಂಬಾ ಮೆಚ್ಚುಗೆಯಾಗಿದ್ದುದರಿಂದ ``Gokhale for to-day; Liberalism Restated'' ಎಂಬ ಲೇಖನ ಬರೆದು ಅದರ ಬಗ್ಗೆ ತಮ್ಮ ವಿಚಾರಗಳನ್ನು ಮಂಡಿಸಿದರು. ಮಹಾತ್ಮ ಗಾಂಧಿ ಅವರ ಅಹಿಂಸಾಮಾರ್ಗವನ್ನು ಒಪ್ಪಿದರಾದರೂ ಅದು ವ್ಯಾವಹಾರಿಕವಾಗಿ ಆಚರಣೆಯಲ್ಲಿ ಸಾಧ್ಯವಿಲ್ಲ ಎಂಬುದು ಡಿವಿಜಿ ಅವರ ವಾದ. ಡಿವಿಜಿ ಅವರ ರಾಜಕೀಯ ಸಿದ್ಧಾಂತಗಳು ಚಿಂತನೆಗಳು ವಿಶ್ವದ ಉಳಿದ ದೇಶಗಳಲ್ಲಿನ ರಾಜಕೀಯ ವ್ಯವಸ್ಥೆಗಳ ತೌಲನಿಕ ಅಧ್ಯಯನ. ಅನುಸಂಧಾನಗಳ ಹಿನ್ನಲೆಯಲ್ಲಿ ಮೂಡಿದವು. ಪ್ರಾಚೀನ ಗ್ರೀಕ್, ರೋಮನ್ನರ ಸಿದ್ಧಾಂತಗಳು, ಅರಿಸ್ಟಾಟಲ್, ಪ್ಲೇಟೋರ ಸಿದ್ಧಾಂತಗಳು ಭಾರತದ ಹಿಂದಿನ ಶ್ರುತಿ ಸ್ಮೃತಿಗಳು! ವಿದ್ಯಾರಣ್ಯರ ದರ್ಶನ ಬ್ರಿಟನ್ನಿನ ಲಿಬರಲಿಸಂ, ರಷ್ಯಾದ ಕಮ್ಯುನಿಸಂ, ಮೊದಲಾದವುಗಳ ಆಳವಾದ ಅಧ್ಯಯನ ಮಾಡಿದ್ದರು. ವ್ಯಕ್ತಿಹಿತ–ರಾಷ್ಟ್ರಹಿತ ಮುಖ್ಯವೇ ಹೊರತು ಪಕ್ಷಹಿತವಲ್ಲ ಎಂಬುದು ಅವರ ದೃಢವಾದ ನಂಬಿಕೆಯಾಗಿತ್ತು. ಈ ಬಗೆಯ ವ್ಯಾಪಕ ಅಧ್ಯಯನದ ಹಿನ್ನೆಲೆಯೊಂದಿಗೆ ಹಲವಾರು ರಾಜ್ಯಶಾಸ್ತ್ರ ಗ್ರಂಥಗಳನ್ನು ರಚಿಸಿದರು. ರಾಜ್ಯಾಂಗ ತತ್ವಗಳು; ರಾಜ್ಯಶಾಸ್ತ್ರ; ರಾಜ್ಯಕುಟುಂಬ;

ರಾಜಕೀಯ ಪ್ರಸಂಗಗಳು ಇತ್ಯಾದಿ ಕೃತಿಗಳು ಅವರ ರಾಜಕೀಯ ಚಿಂತನೆಯ ಫಲಗಳಾಗಿವೆ. ಈ ಕೃತಿಗಳಲ್ಲಿ ಡಿವಿಜಿ ಅವರು ರಾಜಕೀಯ ಇತಿಹಾಸವನ್ನು ಹಲವು ಆಯಾಮಗಳೊಂದಿಗೆ ಕಟ್ಟಿ ಕೊಡುತ್ತಾರೆ. ಇಂತಹ ಕೃತಿಗಳನ್ನು ಬರೆಯುವ ಹಿನ್ನೆಲೆಯ ಉದ್ದೇಶವನ್ನು ಹೀಗೆ ವಿವರಿಸುತ್ತಾರೆ. "ರಾಷ್ಟ್ರರಾಷ್ಟ್ರಕ ಸಂಬಂಧದ ಭಾವನೆಯೂ ರಾಷ್ಟ್ರಕ ಕರ್ತವ್ಯವೂ ಸರ್ವ ಸಾಮಾನ್ಯ ಧರ್ಮದ ಒಂದು ಮುಖ್ಯಾಂಶವೆಂಬ ಭಾವನೆಯು ನಮ್ಮ ದೇಶಕ್ಕೆ ಹೊಸದೆಂದು ಕಾಣುತ್ತದೆ. ಇಂಥಾ ಭಾವನೆಯನ್ನು ಪ್ರಚಾರಪಡಿಸುವುದು ಈ ಗ್ರಂಥದ ಉದ್ದೇಶ" ಎಂದು. ಸೃಜನಶೀಲ ಮನಸ್ಸಾದರೇನು ರಾಜಕೀಯ ಅರಿವು ಪ್ರಜ್ಞೆ ಪ್ರತಿಯೊಬ್ಬ ಪ್ರಜೆಗೂ ಅನಿವಾರ್ಯ. ಆದ್ದರಿಂದ ರಾಜಕಾರಣವೂ ಪುರುಷಾರ್ಥಗಳ ಹಾಗೆಯೇ ಬದುಕಿನ ಮುಖ್ಯ ಅಂಗವಾಗಬೇಕು. ಚಾಣಕ್ಯ ಸೂತ್ರವಾದ, "ಸುಖಸ್ಯ ಮೂಲಂ ಧರ್ಮ; ಧರ್ಮಸ್ಯ ಮೂಲಂ ಅರ್ಥಃ; ಅರ್ಥಸ್ಯ ಮೂಲಂ ರಾಜ್ಯಂ" ಎಂಬುದು ಹೇಳುವುದೂ ಇದನ್ನೇ.

### ಸಾರ್ವಜನಿಕ ಕ್ರಿಯಾಶೀಲತೆ

ಡಿವಿಜಿ ಅವರದು ಮೂಲತಃ ಆಸ್ತಿಕ ಮನಸ್ಸು ಆತ್ಮ, ಪರಮಾತ್ಮ ಪರಮಾರ್ಥ ಮುಂತಾದವುಗಳಲ್ಲಿ ಅಪಾರಶ್ರದ್ಧೆ ಆದರೆ ಇವುಗಳಿಂದಾಗಿ ಜೀವನ, ಜಗತ್ತು, ಸಮಾಜಗಳಿಂದ ಪಲಾಯನ ಮಾಡುವುದು ಸರಿಯಲ್ಲವೆಂಬ ನಂಬಿಕೆಯನ್ನೂ ಜೊತೆಗೆ ಇರಿಸಿಕೊಂಡಿದ್ದರು ಅವರ ಎಲ್ಲ ಲೌಕಿಕ ಚಿಂತನೆಗಳಿಗೂ ಆಧ್ಯಾತ್ಮದ ಹಿನ್ನೆಲೆ ಇದ್ದೇ ಇರುತ್ತಿತ್ತು. ಒಂದೆಡೆ ಲೋಕ ಸಂಪರ್ಕದ ಬಗ್ಗೆ ಹೀಗೆ ಹೇಳುತ್ತಾರೆ. "ಭಗವಂತನನ್ನು ನಂಬುವುದರಿಂದ ಅವನ ಶರೀರವಾದ ಈ ಜಗತ್ತಿನ ವಿಷಯದಲ್ಲಿ ಗೌರವವುಂಟಾಗುತ್ತದೆ. ಈಶ್ವರನನ್ನು ಒಪ್ಪಿಕೊಳ್ಳುವುದು ಮೊದಲ ಜೀವನ ಸೂತ್ರ. ಜಗತ್ತು ಈಶ್ವರ ಜನ್ಯವಾದದ್ದರಿಂದ ಶ್ರೇಷ್ಠ; ಕನಿಷ್ಠವಲ್ಲ; ತುಚ್ಛವಲ್ಲ; ಹೇಯವಲ್ಲ; ದೂಷ್ಯವಲ್ಲ; ಅದು ಗೌರವಯೋಗ್ಯ. ಪ್ರತಿಯೊಂದು ಜೀವವೂ ನನಗೆ ಸಂಬಂಧ ಪಟ್ಟದ್ದು ನನಗೆ ಬಂಧು ವಾದದ್ದು. ಜಗತ್ತನ್ನು ನನ್ನಂತೆಯೇ ತಿಳಿಯಬೇಕು; ನನ್ನ ಹಿತಾಹಿತಗಳಂತೆಯೇ ಅದರ ಹಿತಾಹಿತಗಳನ್ನೂ ಕಾಪಾಡಬೇಕು – ಎಂಬ ತಿಳಿವಳಿಕೆ ಬರುತ್ತದೆ." ಎಂಬ ಈ ಮಾತುಗಳು ಅವರು ಸಾರ್ವಜನಿಕ ಬದುಕನ್ನೂ ಪರಮಾತ್ಮನನ್ನು ಪ್ರೀತಿಸಿದಷ್ಟೇ ಗಾಢವಾಗಿ ಪ್ರೀತಿಸುತ್ತಿದ್ದರೆಂಬುದು ಸ್ಪಷ್ಟ. ಭಗವಂತ ಜಗತ್ತು, ದೇಹ–ಆತ್ಮಗಳಂತೆ ಅನನ್ಯ. ಆತ್ಮದ ಅಸ್ತಿತ್ವಕ್ಕೆ ದೇಹದ ಕವಚ ಹೇಗೆ ಅನಿವಾರ್ಯವೋ ಭಗವಂತನಿಗೆ ಜಗತ್ತೇ ದೇಹವೆಂದು ಭಾವಿಸಿದಾಗ ಜಗತ್ತಿನೊಂದಿಗೇ ಭಗವಂತನನ್ನು ಪ್ರೀತಿಸಬೇಕು. ಅಲ್ಲದೆ ಜಗತ್ತನ್ನು ತನ್ನದೆಂದೇ ಭಾವಿಸಿ ಅದರ ಹಿತಾಹಿತಗಳನ್ನೂ ಕಾಪಾಡುವ ಹೊಣೆಗಾರಿಕೆಯನ್ನೂ ಹೊರಬೇಕಾಗಿರುವುದರಿಂದ ಜಗನ್ನಿರಾಕರಣೆ ಸಲ್ಲದು; ಪಲಾಯನವಂತೂ ಮಾಡಲೇ ಬಾರದು. ಎಂಬುದು ಅವರ ದೃಢವಾದ ನಂಬಿಕೆಯಾಗಿದ್ದುದರಿಂದ ಮತ್ತು ಅವರ ಪತ್ರಿಕಾವೃತ್ತಿಯಂತೂ ಲೋಕ ಸಂಪರ್ಕ ಜನಸಂಪರ್ಕ, ಸಮಾಜ ಸಂಪರ್ಕಗಳಿಲ್ಲದಂತೂ ಸಾಧ್ಯವೇ ಆಗದ್ದಾಗಿತ್ತು. ಅವರ ಯಾವುದೇ ಬರಹದಲ್ಲಿಯಾಗಲೀ ಎಲ್ಲೋ ಒಂದು

ಕಡೆಯಾದರೂ ಜನಪರ. ಸಮಾಜಪರ ಪ್ರಜಾಪರ ಕಾಳಜಿಗಳು ಕಾಣಿಸಿಕೊಳ್ಳುತ್ತವೆ. ಸಮಸ್ತ ಜನಸಮುದಾಯದ ಅಭಿವೃದ್ಧಿ, ಕಲ್ಯಾಣ, ಜಾಗೃತಿಗಳು ತೀರಾ ಅನಿವಾರ್ಯ ವೆಂದು ಭಾವಿಸಿದ್ದರಿಂದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಜನಸಮುದಾಯಗಳಲ್ಲಿ ರಾಜಕೀಯ ಸಾಮಾಜಿಕ, ವೈಚಾರಿಕ ಜಾಗೃತಿಯನ್ನು ಮೂಡಿಸುವ ಪ್ರಯತ್ನ ಮಾಡಿದರು. ಹಾಗೆಯೇ ಭೌತಿಕ ಹಿತ ಚಿಂತನೆಯಿಂದ ಅಸಹಾಯಕರಿಗೆ, ಅನ್ಯಾಯಕ್ಕೆ ಒಳಗಾದವರಿಗೆ, ದುರ್ಬಲರಿಗೆ ಮತ್ತು ಆರ್ಥಿಕ, ಔದ್ಯೋಗಿಕ ಸಮಸ್ಯೆಗಳಿಗೆ ಒಳಗಾದವರಿಗೆ, ನೆರವು ನ್ಯಾಯಗಳನ್ನು ಕೊಡಿಸುವುದಕ್ಕಾಗಿ ಸಂಘ, ಸಂಸ್ಥೆಗಳನ್ನು ಹುಟ್ಟುಹಾಕಿದರು. ಈ ಸಂಸ್ಥೆಗಳಲ್ಲಿ ಕೆಲವು ಸೇವಾ ಸಂಸ್ಥೆಗಳೂ ಮತ್ತೆ ಕೆಲವು ಸ್ನೇಹ ಸಂಸ್ಥೆಗಳೂ ಆಗಿದ್ದವು. ಇದಕ್ಕೆ ನಿದರ್ಶನವಾಗಿ ಪತ್ರಕರ್ತರ ಯೋಗಕ್ಷೇಮದ ದೃಷ್ಟಿಯಿಂದ ಹುಟ್ಟು ಹಾಕಿದ ಪತ್ರಕರ್ತರ ಸಂಘಟನೆ ಅವರ ಸಾರ್ವಜನಿಕ ಕ್ರಿಯಾಶೀಲತೆಗೆ ಹಿಡಿದ ಕನ್ನಡಿಯಾಗಿದೆ. ಸಕ್ರಿಯವಾದ ಸಾರ್ವಜನಿಕ ಚಟುವಟಿಕೆಗಳು ಆರಂಭವಾದದ್ದು, ಅವರ ಸಮಕಾಲೀನ ವಿದ್ವಾಂಸರು ಹೇಳಿದಂತೆ 'ಕರ್ಣಾಟಕ ಪತ್ರಿಕೆ'ಯೇ ಅವರ ಸಾರ್ವಜನಿಕ ಚಟುವಟಿಕೆಗಳಿಗೆ ಕಾರಣವಾಯಿತು. 'ಕರ್ಣಾಟಕ' ಪತ್ರಿಕಾಲಯದಿಂದ ಪ್ರಕಟವಾದ ಮೈಸೂರಿನ ಕೈಗನ್ನಡಿ ಯೆಂಬ 'ಕರ್ಣಾಟಕ ವಾರ್ಷಿಕ ಪುಸ್ತಕ' ಹಾಗೆಯೇ ``All about mysore'' ಎಂಬ ಪುಸ್ತಕಗಳು ಕನ್ನಡದಲ್ಲಿಯೇ ಅತ್ಯಂತ ವಿಶಿಷ್ಟವಾದ ಮತ್ತು ಮೊದಲ ಬಾರಿಗೆ ಪ್ರಕಟವಾದ ಪುಸ್ತಕಗಳೆಂಬ ಹೊಗಳಿಕೆಗೆ ಪಾತ್ರವಾದವು. "ದೇಶದ ಪ್ರಕೃತ ಸ್ಥಿತಿಯನ್ನು ಸಾಧ್ಯವಾದಷ್ಟು ವಿಶದವಾಗಿ ತಿಳಿಸಬೇಕೆಂಬುದೇ ಈ ಪುಸ್ತಕದ ಉದ್ದೇಶ್ಯ" ಎಂದು ಡಿವಿಜಿಯವರು ಕೃತಿಯ ಬಗ್ಗೆ ತಿಳಿಸಿದ್ದಾರೆ. ಡಿವಿಜಿ ಈ ಕೃತಿಯಲ್ಲಿ ಮೈಸೂರು ದೇಶಕ್ಕೆ ಸಂಬಂಧಪಟ್ಟ, ಸಾರ್ವಜನಿಕ ಕಾರ್ಯಕ್ಕೆ ಬೇಕಾದ ಎಲ್ಲ ವಿಷಯಗಳನ್ನೂ ಸಂಗ್ರಹಿಸಿಕೊಟ್ಟಿದ್ದಾರೆ. ಆಹಾರ, ಸಸ್ಯವರ್ಗ, ಪ್ರಾಣಿವರ್ಗ, ಲೋಹವರ್ಗ, ಜನಸಂಖ್ಯೆ, ಮತ, ಭಾಷೆಗಳು, ಚರಿತ್ರೆ, ಪ್ರಜೆಗಳ ಸಂಪತ್ತು, ಕೈಗಾರಿಕೆಗಳು, ಸರಕಾರ. ತಾಲ್ಲೂಕುಗಳ ವಿವರ, ಆಮದು, ರಫ್ತು, ಪುಸ್ತಕ, ಪತ್ರಿಕೆಗಳು, ಆದಾಯ ವ್ಯಯ ಮುಂತಾದ ಅನೇಕ ಶೀರ್ಷಿಕೆಗಳಲ್ಲಿ ಮೈಸೂರಿಗೆ ಸಂಬಂಧಪಟ್ಟ ವಿವರಗಳು ಹೇರಳವಾಗಿವೆ.

ಡಿವಿಜಿ ಅವರ ಸ್ನೇಹವಲಯ ಬಹಳ ದೊಡ್ಡದು. ಆ ವಲಯದ ವ್ಯಾಪ್ತಿಯಲ್ಲಿ ಎನ್.ನರಸಿಂಹಮೂರ್ತಿ ಮೊದಲುಗೊಂಡು, ಅಸಂಖ್ಯಾತ ವಿದ್ವಾಂಸರು, ಸಂಗೀತನೃತ್ಯ ಕಲಾವಿದರು ರಂಗನಟರು, ಸಾರ್ವಜನಿಕ ಬಂಧುಗಳು ಇತ್ಯಾದಿಯಾಗಿ ಹತ್ತು ಹಲವಾರು ಮಂದಿಯಿದ್ದರು. ಅವರ ಒಡನಾಟ ಅವರು ಪ್ರತಿನಿಧಿಸುತ್ತಿದ್ದ ಸಂಘ, ಸಂಸ್ಥೆ, ಸಮಿತಿಗಳಲ್ಲಿ ಸದಸ್ಯರಾಗಿಯೋ ಪದಾಧಿಕಾರಿಗಳಾಗಿಯೋ ಡಿವಿಜಿ ಅವರ ಭಾಗವಹಿಸುವಿಕೆ ನಿರಂತರವಾಗಿ ನಡೆಯುತ್ತಿತ್ತು. ಅವರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಸಂಸ್ಥೆ ಗಳೆಂದರೆ ಅಮೆಚೂರ್ ಡ್ರಮ್ಯಾಟಿಕ್ ಅಸೋಸಿಯೇಷನ್, ಗೆಳೆಯರ ಬಳಗ, ಮೈಸೂರು ಸಾರ್ವಜನಿಕ ಸಭೆ, ಶ್ರೀರಾಮಕೃಷ್ಣ ಸೇವಾ ಸಂಘ, ಪಾಪ್ಯೂಲರ್ ಎಜ್ಯುಕೇಷನ್ ಲೀಗ್, ರಾನಡೆ ಸೊಸೈಟಿ, ಹಿಂದೂ ಕಾಫಿ ಕ್ಲಬ್, ಇಂಡಿಪೆಂಡೆಂಟ್ ಬೋರ್ಡ್, ಸೋಷಿಯಲ್ ಸರ್ವಿಸ್ ಲೀಗ್. ಬೆಂಗಳೂರು ಸಿಟಿಜನ್ಸ್ ಕ್ಲಬ್, ದೇಶಾಭ್ಯುದಯ ಸಂಘ,

ಅನಾಮಧೇಯರು ವಿದ್ಯಾ ಇಲಾಖೆಯ ಪಠ್ಯಪುಸ್ತಕ ಸಮಿತಿ, ಕನ್ನಡ ಪಂಡಿತ ಪರೀಕ್ಷಾ ಸಮಿತಿ, ಶೀಘ್ರ ಲಿಪಿಕಾರರ ಸಂಘ, ಅಖಿಲಭಾರತ ಲೇಖಕರ ಸಮ್ಮೇಳನ. ಇತ್ಯಾದಿ ಸಂಘಟನೆಗಳಲ್ಲಿ ಬಿಡುವಿಲ್ಲದೆ ದುಡಿದರು. ಅಂತರ್ಮುಖಿ ಚಿಂತನೆಯ ಜೊತೆ ಜೊತೆಗೇ ಬಹಿರ್ಮುಖಿ ಕ್ರಿಯಾಶೀಲ ಚಟುವಟಿಕೆಗಳಲ್ಲಿ ಅದಮ್ಯ ಉತ್ಸಾಹದೊಂದಿಗೆ ತೊಡಗಿಸಿಕೊಂಡೇ ಬದುಕಿದರು.

ಮೈಸೂರಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರೊಂದಿಗೆ ಭಿನ್ನಾಭಿಪ್ರಾಯಗಳಿದ್ದರೂ ಸ್ನೇಹಕ್ಕೆಂದೂ ಅಡ್ಡಿಯಾಗಿರಲಿಲ್ಲ. ಅಗತ್ಯ ಬಿದ್ದಾಗ ಅವರ ನೆರವಿಗೆ ಬಂದು ನಿಲ್ಲುತ್ತಿದ್ದರು.

ಸಾರ್ವಜನಿಕ ಬದುಕಿನ ಭಾಗವಾಗಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಅವರಿಂದ ಸಂದ ಸೇವೆ ಅನನ್ಯವಾದದ್ದು. ಅದು ಅಸ್ತಿತ್ವಕ್ಕೆ ಬರಲು ಕಾರಣರಾದವರಲ್ಲಿ ಡಿವಿಜಿಯೂ ಒಬ್ಬರು. ಸಾಹಿತ್ಯ ಕ್ಷೇತ್ರದಲ್ಲಿಯೂ ಅಷ್ಟು ಹೊತ್ತಿಗೆ ಡಿವಿಜಿಯವರು ಪ್ರಮುಖ ಸ್ಥಾನ ಪಡೆದಿದ್ದರು. ೧೯೩೨ರಲ್ಲಿ ಅವರ ಸಾಹಿತ್ಯ ಸಾಧನೆಯ ಮಹತ್ವವನ್ನು ಗುರುತಿಸಿ, ಮಡಿಕೇರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಹ್ವಾನಿಸಲಾಯಿತು. ಸಮ್ಮೇಳನದಲ್ಲಿ ಅವರು ಮಾಡಿದ ಅಧ್ಯಕ್ಷೀಯ ಭಾಷಣ ಅತ್ಯಂತ ವಿದ್ವತ್ಪೂರ್ಣವಾಗಿದ್ದು, ಸಾಹಿತ್ಯ ಮತ್ತು ಭಾಷಾ ಸಂಬಂಧವಾದ ಮೌಲಿಕ ವಿಚಾರಗಳು ಇಂದಿಗೂ ಪ್ರಸ್ತುತವೆನಿಸುವಂತಿದೆ. ೧೯೩೩ರಲ್ಲಿ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಯಾದ ಮೇಲೆ ಪರಿಷತ್ತಿನ ಸಾಹಿತ್ಯ ಚಟುವಟಿಕೆಗಳು ಕ್ರಿಯಾ ಯೋಜನೆಗಳು ಅತ್ಯಂತ ಭರದಿಂದ ಸಾಗಿದವು. ಗಮಕವಾಚನ, ಸಾಹಿತ್ಯ ಗೋಷ್ಠಿಗಳು ಸಾಹಿತ್ಯ ಪ್ರಸಾರ, ಪುಸ್ತಕ ಪ್ರಕಟಣೆ, ನಿಘಂಟು ಮುದ್ರಣ ಇತ್ಯಾದಿ ಸಾಹಿತ್ಯ ಸಂಬಂಧಿ ಚಟುವಟಿಕೆ ನಡೆದವು.

ಡಿವಿಜಿ ಅವರಿಗೆ ಇಷ್ಟರಿಂದಲೇ ತೃಪ್ತಿಯಾಗಲಿಲ್ಲ. ಯಾವಾಗಲೂ ಅವರದು ಮಹತ್ವಾಕಾಂಕ್ಷೆ. ಸ್ವಚಿಂತನೆಗಿಂತ ಪರಹಿತ ಚಿಂತನೆ, ಸಾರ್ವಜನಿಕ ಹಿತ ಚಿಂತನೆ ಅವರ ವ್ಯಕ್ತಿತ್ವದ ಅನನ್ಯ ಭಾಗವಾಗಿತ್ತು. ಸಾರ್ವಜನಿಕ ಜೀವನದ ಅಭಿವೃದ್ಧಿ, ಬೌದ್ಧಿಕ, ನೈತಿಕಮಟ್ಟದಲ್ಲಿ ಸುಧಾರಣೆ, ಪ್ರತಿಯೊಬ್ಬ ಪ್ರಜೆಯೂ ರಾಷ್ಟ್ರಹಿತ ಪ್ರಜ್ಞೆಯನ್ನೂ ರೂಢಿಸಿಕೊಳ್ಳಬೇಕು ಎಂದೆಲ್ಲ ಆಕಾಂಕ್ಷೆಗಳನ್ನು ಇಟ್ಟುಕೊಂಡಿದ್ದ ಡಿವಿಜಿ ಅವರಿಗೆ, ಇದೆಲ್ಲ ಸಾಧ್ಯವಾಗಬೇಕಾದರೆ, ಇಂತಹ ಎಲ್ಲ ಆಶಯಗಳಿಗೆ ಸಾಕಾರ ರೂಪ ಕೊಡಬೇಕಾದರೆ, ಪ್ರತ್ಯೇಕವಾದ ಒಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಅದಮ್ಯ ತುಡಿತದ ಫಲವಾಗಿ ೧೯೧೫ರಿಂದ ಯೋಚಿಸುತ್ತಲೇ ಇದ್ದವರಿಗೆ ೧೯೪೫ರಲ್ಲಿ ಅಂಥ ಸಂಸ್ಥೆಯನ್ನು ಹುಟ್ಟು ಹಾಕಲು ಸಾಧ್ಯವಾಯಿತು. ಡಿವಿಜಿ ಅವರಿಗೆ ಗೋಪಾಲಕೃಷ್ಣ ಗೋಖಲೆ ರಾಜಕೀಯ ಗುರು. ಅಷ್ಟೇ ಅಲ್ಲ ಅವರ ಸಿದ್ಧಾಂತಗಳು ವ್ಯಕ್ತಿತ್ವ, ಕ್ರಿಯಾಶೀಲತೆ ಜನಪರ ಚಿಂತನೆ, ನಿಸ್ವಾರ್ಥತೆ, ಸಮರ್ಪಣಭಾವ ಸಮನ್ವಯ ದೃಷ್ಟಿ ಮುಂತಾದವುಗಳ ಬಗ್ಗೆ ಸಂಪೂರ್ಣವಾಗಿ ಮೋಹಿತರಾಗಿ, ಅವರಿಗೆ ತಮ್ಮನ್ನು ತೆತ್ತುಕೊಂಡಿದ್ದರು. ಹಲವು ವರ್ಷಗಳ ಪ್ರಯತ್ನದಿಂದ ಅಸ್ತಿತ್ವಕ್ಕೆ ಬಂದ ಈ ಸಂಸ್ಥೆಗೆ 'ಗೋಖಲೆ ಸಾರ್ವಜನಿಕ ಸಂಸ್ಥೆ' ಎಂದು ಹೆಸರಿಟ್ಟದು ಆಶ್ಚರ್ಯವೇನಲ್ಲ, ಈ ಸಂಸ್ಥೆಯ ಪ್ರಮುಖ ಗುರಿಯೆಂದರೆ

"ಭಾರತವ ಸ್ವಾತಂತ್ರ್ಯದೆಡೆಗೆ, ಪ್ರಜಾಪ್ರಭುತ್ವವಾದಿ ಜವಾಬ್ದಾರಿ ಆಡಳಿತದೆಡೆಗೆ ಮುನ್ನಡೆಯಲು ಶ್ರಮಿಸುವುದಾಗಿತ್ತು" ಈ ಸಂಸ್ಥೆಯನ್ನು ಸುಮಾರು ದಶಕಗಳು, ತಮ್ಮ ಜೀವಿತದ ಕಡೆಯ ಕ್ಷಣಗಳವರೆಗೂ ನಡೆಸಿಕೊಂಡು ಬಂದರು. ಇಡೀ ದೇಶದಲ್ಲಿಯೇ ಗೋಖಲೆ ಸಾರ್ವಜನಿಕ ಸಂಸ್ಥೆ ಅತ್ಯಂತ ಪ್ರತಿಷ್ಠಿತ ಸಂಸ್ಥೆಯೆಂದು ಗುರುತಿಸಿಕೊಂಡಿತು. ಪುಸ್ತಕ ಭಂಡಾರ, ವಾಚನಾಲಯ, ವ್ಯಾಸಂಗಗೋಷ್ಠಿ, ಉಪನ್ಯಾಸಗಳು ಸಂಗೀತ ಸಾಹಿತ್ಯ ಕಾರ್ಯಕ್ರಮಗಳು, ಅಧ್ಯಯನ ಶಿಬಿರಗಳು ಪೌರಜಾಗೃತಿ ಕಾರ್ಯಕ್ರಮ, ಸಮಾಜಸೇವೆ, ಸಾರ್ವಜನಿಕ ಸಮಸ್ಯೆಗಳ ಅಧ್ಯಯನ, ಆಡಳಿತ ನೀತಿ ಕಾರ್ಯಗಳ ವಿಮರ್ಶೆ ಜನಾಭಿಪ್ರಾಯ ಸಂಗ್ರಹಣೆ, ಪುಸ್ತಕ ಪ್ರಕಟಣೆ, ಸಾರ್ವಜನಿಕ ಪತ್ರಿಕೆ ಇತ್ಯಾದಿ ಇನ್ನೂ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಅವೆಲ್ಲವೂ ಡಿವಿಜಿ ಅವರ ಜೀವನಾವಧಿ ಯಲ್ಲಿಯೇ ಸಾಕಾರಗೊಂಡು ಯಶಸ್ವಿಯಾಗಿ ಮುಂದುವರೆದದ್ದೇ ಅಲ್ಲದೆ ಇಂದಿಗೂ ಮುಂದುವರೆಯುತ್ತಲೇ ಇದೆ. ಡಿವಿಜಿ ಅವರು ನಂಬಿದ್ದ ವಿದ್ಯಾರಣ್ಯರ "ಜ್ಞಾನಿನಾ ಚರಿತುಂಶಕ್ಯಂ, ಸಮ್ಯಕ್ ರಾಜ್ಯಾದಿ ಲೌಕಿಕಂ!" ಎನ್ನುವ ಮಾತುಗಳಂತೆ, "ರಾಜ್ಯಾದಿ ಲೌಕಿಕವನ್ನು ಸಮ್ಯಕ್ ರೀತಿಯಲ್ಲಿ ನಿರ್ವಹಿಸಲು ಯೋಗ್ಯರಾದ, ಜ್ಞಾನಿಗಳಾದ ಪ್ರಜೆಗಳನ್ನು ರೂಪಿಸುವುದಕ್ಕೆ ಮಹಾಸಾಧನವೆಂಬಂತೆ ಡಿವಿಜಿ ಗೋಖಲೆ ಸಂಸ್ಥೆಯನ್ನು ಕಟ್ಟಿಬೆಳೆಸಿದರು. ತನ್ಮೂಲಕ ಅವರ ಹೆಸರು ಚಿರಸ್ಥಾಯಿಯಾಗುವಂತೆ ಮಾಡಿದರು. ಸಾರ್ವಜನಿಕ ಜೀವನದೊಂದಿಗೆ ಗಾಢವಾಗಿ ಬೆಸೆದುಕೊಂಡಿದ್ದ ಡಿವಿಜಿ ಅವರ ಲೋಕಾನುಭವ, ಜೀವನಾನುಭವ, ಮನುಷ್ಯ ಸ್ವಭಾವ ಸಂಬಂಧಗಳ ಅವರ ಅರಿವಿನ ಜಗತ್ತನ್ನು ಅನುಭವ ಜಗತ್ತನ್ನು ಅನೂಹ್ಯವಾದ ವೈಶಾಲ್ಯದ ನೆಲೆಗೆ ಕೊಂಡು ಹೋಗಿತ್ತು. ಲೋಕವನ್ನು ಗಾಢವಾಗಿ ಪ್ರೀತಿಸುತ್ತಲೇ ಅಪ್ಪಿಕೊಳ್ಳುತ್ತಲೇ ಲೋಕನಿರ್ಲಿಪ್ತತೆಯೊಂದಿಗೆ ಬದುಕಿ ಬಾಳನ್ನು ಸಾರ್ಥಕಗೊಳಿಸಿಕೊಂಡರು.

### ಡಿವಿಜಿ ಮತ್ತು ಸೃಜನಶೀಲತೆ

ಡಿವಿಜಿ ಅವರ ಒಟ್ಟು ಸಾಹಿತ್ಯ ರಾಶಿಯಲ್ಲಿ ಸೃಜನಶೀಲವಾದ ಮತ್ತು ಸೃಜನೇತರವಾದ ಕೃತಿಗಳ ಸಂಖ್ಯೆ ಐವತ್ತಕ್ಕೂ ಹೆಚ್ಚಿನದಾಗಿದೆ. ಪತ್ರಿಕೋದ್ಯಮದಲ್ಲಿ ಅವರ ಹೆಸರು ಶಿಖರಪ್ರಾಯವಾಗಿರುವಂತೆ ಸಾಹಿತ್ಯವಲಯದಲ್ಲಿಯೂ ಮಹಾನ್ ಸಾಹಿತಿಯೆಂದು ಗುರುತಿಸಿಕೊಂಡಿದ್ದಾರೆ. ಅವರ ಸಾಹಿತ್ಯ ಸೃಷ್ಟಿ ವೈವಿಧ್ಯಮಯವಾದದ್ದು. ಕಾವ್ಯ, ನಾಟಕ, ವಿಮರ್ಶೆ, ವಿಚಾರ ಸಾಹಿತ್ಯ, ಶಾಸ್ತ್ರ ಸಾಹಿತ್ಯ (ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಕಾವ್ಯಶಾಸ್ತ್ರ (ಕಾವ್ಯ ಮೀಮಾಂಸೆ), ಅಧ್ಯಾತ್ಮ, ಜೀವನಚರಿತ್ರೆ ವ್ಯಕ್ತಿಚರಿತ್ರೆ, ಮಕ್ಕಳ ಸಾಹಿತ್ಯ, ಧರ್ಮ–ನೀತಿಪರ ಗ್ರಂಥಗಳು, ಸೌಂದರ್ಯ, ಸಂಸ್ಕೃತಿ ಮೀಮಾಂಸೆಗಳು ಹೀಗೆ ಹತ್ತು ಹಲವು ಬಗೆಯ ಸೃಜನಾತ್ಮಕ, ಚಿಂತನಪರ ಕೃತಿಗಳು ಡಿವಿಜಿ ಅವರ ಬಹುಮುಖ ಪ್ರತಿಭೆಗೆ, ಅದ್ಭುತವಾದ ವ್ಯುತ್ಪತ್ತಿಗೆ ಸಾಕ್ಷಿಯಾಗಿವೆ. ವಿಷಯ ವೈವಿಧ್ಯವಿದೆ; ಪ್ರಕಾರ ವೈವಿಧ್ಯವಿದೆ; ದೃಷ್ಟಿ ಸೂಕ್ಷ್ಮತೆಯಿದೆ; ಅನುಭವದ ಆಳ ವೈಶಾಲ್ಯಗಳಿವೆ; ಪ್ರಯೋಗಶೀಲ ಪ್ರವೃತ್ತಿಯ ದರ್ಶನವಿದೆ. ಯಾವ ಕಾಲೇಜು ಮೆಟ್ಟಿಲನ್ನೂ ತುಳಿಯದ ಡಿವಿಜಿ ಅವರ

ಕನ್ನಡ, ಇಂಗ್ಲಿಷ್, ಸಂಸ್ಕೃತಗಳ ಜ್ಞಾನ ಅಪಾರವಾಗಿದ್ದು. ಇಂಗ್ಲಿಷಿನಲ್ಲಿಯೂ ಬರೆದ ಕೃತಿಗಳಿಗೂ ಇಂಗ್ಲಿಷ್ ವಿದ್ವಾಂಸರ ಪ್ರಶಂಸೆಯನ್ನು ಗೆದ್ದುಕೊಂಡಿವೆ. ನಮ್ಮ ಪ್ರಾಚೀನ ವಾಙ್ಮಯ ಸನಾತನ ಧರ್ಮಪರವಾದ ಉದ್ಗ್ರಂಥಗಳು ವೇದೋಪನಿಷತ್ತುಗಳು ಹೆಚ್ಚಾಗಿ ಸಂಸ್ಕೃತದಲ್ಲಿಯೇ ಇದ್ದು, ಸಂಸ್ಕೃತ ಮೂಲದಲ್ಲಿಯೇ ಓದಬೇಕೆಂಬ ತುಡಿತ, ಅಲ್ಲಿನ ತತ್ವ ಸಿದ್ಧಾಂತಗಳನ್ನು, ದರ್ಶನಗಳನ್ನು ಆಮೂಲಾಗ್ರವಾಗಿ ಓದಿ ತಿಳಿಯುವ ಹಂಬಲ ಸಂಸ್ಕೃತದಲ್ಲಿಯೂ ಭಾಷಾ ಪ್ರೌಢಿಮೆ ಪಡೆದುಕೊಳ್ಳಲು ಒತ್ತಾಯಕ್ಕೆ ಒಳಗಾದರು. ಬರೆಯುವಲ್ಲಿ, ಡಿವಿಜಿ ಅವರು ಹೃದಯಕೇಂದ್ರ ಅಥವಾ ಭಾವಕೇಂದ್ರ ವಿಷಯಗಳಿಗೆ ಮತ್ತು ಚಿಂತನೆ, ಆಲೋಚನೆ, ಬುದ್ಧಿ ಕೇಂದ್ರ ವಿಷಯಗಳಿಗೆ ಅನುಗುಣವಾಗಿ ಪ್ರತ್ಯೇಕ ಪ್ರತ್ಯೇಕವಾದ ಬರವಣಿಗೆಯ ಶೈಲಿಯನ್ನು ರೂಪಿಸಿಕೊಂಡಿದ್ದಾರೆ.

ಡಿವಿಜಿ ಅವರು ಬರಹಕ್ಕೆ ಮೊದಲಾದದ್ದು ಜೀವನ ಚರಿತ್ರೆಗಳಿಂದ, ೧೯೧೧ರಲ್ಲಿಯೇ ದಿವಾನ್ ರಂಗಾಚಾರ್ಲು ಬಗ್ಗೆ ಬರೆದರು. ನಂತರ ೧೯೧೫ರಲ್ಲಿ ಗೋಪಾಲಕೃಷ್ಣ ಗೋಖಲೆ ಕುರಿತ ಜೀವನಚರಿತ್ರೆ. ಮಕ್ಕಳ ಸಾಹಿತ್ಯವನ್ನೂ ಇದೇ ಸುಮಾರಿನಲ್ಲಿ ಬರೆದರು. ಜೊತೆಗೆ ಒಂದೆರಡು ನಾಟಕಗಳೂ ಬಂದವು. ಎಲ್ಲಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಬರೆದದ್ದು ಕಾವ್ಯವನ್ನೇ ಸುಮಾರು ೧೫ ಸಂಕಲನಗಳು ಆದರೆ ಅದೆಲ್ಲವೂ ಒಂದೇ ಮಾದರಿಯ ರಚನೆಗಳಾಗಿಲ್ಲ. ನವೋದಯ ಕಾಲಘಟ್ಟದ ಮಾದರಿಗಳನ್ನು ಒದಗಿಸಿದ ಬಿ.ಎಂ.ಶ್ರೀ. ಅವರ ಇಂಗ್ಲಿಷ್ ಗೀತಗಳು ಪ್ರಕಟವಾಗುವುದಕ್ಕೆ ಮೊದಲೇ ಡಿವಿಜಿ ಅವರ 'ವಸಂತ ಕುಸುಮಾಂಜಲಿ' 'ನಿವೇದನೆ' ಕೃತಿಗಳು ಹೊರಬಂದವು. ಡಿವಿಜಿ ಅವರ ಕಾವ್ಯ ಜೀವನ ಪ್ರಾರಂಭವಾದದ್ದು ಸಾಹಿತ್ಯದ ಸಂಧಿಕಾಲದಲ್ಲಿ. ಆ ಕಾಲಘಟ್ಟದಲ್ಲಿ ಇಂಗ್ಲಿಷ್ ಸಾಹಿತ್ಯ ಓದಿಕೊಂಡವರಿಗೆ ಇಂಗ್ಲಿಷಿನ ರೊಮ್ಯಾಂಟಿಕ್ ಕಾವ್ಯಮಾರ್ಗದ ಪರಿಚಯವಾಗುತ್ತಿದ್ದ ಕಾಲವಾಗಿತ್ತು. ನವೋದಯ ಕಾವ್ಯದ ವಸ್ತು ಯಾವುದಾಗಬೇಕೆಂಬುದು ಸಮಸ್ಯೆ ಯಾಗಲಿಲ್ಲವಾದರೂ ಅಭಿವ್ಯಕ್ತಿ ಮಾರ್ಗ ಅನಿಶ್ಚಿತವಾಗಿತ್ತು. ಪ್ರಾಚೀನ ಪೂರ್ವ ಆಧುನಿಕ ಪಶ್ಚಿಮ ಈ ಎರಡರ ಸಂಘರ್ಷದಲ್ಲಿ ಸಿಲುಕಿದ್ದ ಕೆಲವರು, ಡಿವಿಜಿ ಅಂತಹವರು ಎರಡನ್ನೂ ಹೇಗೆ ಸಮನ್ವಯ ಮಾಡಿಕೊಳ್ಳಬಹುದೋ ಆ ದಾರಿಯಲ್ಲಿಯೇ ಬರವಣಿಗೆಗೆ ತೊಡಗಿಸಿಕೊಳ್ಳಲು ನಿಶ್ಚಯಿಸಿದಂತೆ ಕಾಣುತ್ತದೆ. ಡಿವಿಜಿ ಅವರು ನವೋದಯದ ಎಲ್ಲ ಲಕ್ಷಣಗಳನ್ನೂ ಅಳವಡಿಸಿಕೊಂಡರೂ ಅಭಿವ್ಯಕ್ತಿಗಾಗಿ ಪ್ರಾಚೀನ ಕಾವ್ಯಮಾರ್ಗವನ್ನೇ ಆರಿಸಿಕೊಂಡರು. ಡಿವಿಜಿ ಅವರಿಗೆ ತಾವು ಬರೆಯಬೇಕಾದ ಕಾವ್ಯದ ಬಗ್ಗೆ ಸ್ಪಷ್ಟವಾದ ಕೆಲವು ತಾತ್ವಿಕ ನಿಲುವುಗಳಿದ್ದವು. ಬರಹದ ಪ್ರಕಾರ ಯಾವುದೇ ಇರಲಿ, 'ಸಾರ್ವಜನಿಕ ಬದುಕನ್ನು ಹಸನುಗೊಳಿಸಬೇಕೆಂಬ ಆಶಯವೇ ಅತ್ಯಂತ ಪ್ರಬಲವಾಗಿತ್ತು. ಜೀವನ ಸೌಂದರ್ಯವೇ ಅವರ ಸಾಹಿತ್ಯದ ಕೇಂದ್ರ ಆಶಯ. ಇದಕ್ಕೆ ಪೂರಕವೆಂಬಂತೆಯೇ ಅವರ ರಚನೆಗಳು ಮೈ ಪಡೆಯುತ್ತಿದ್ದವು. ಅಂತೆಯೇ ಕಾವ್ಯದ ವಿಷಯಕ್ಕೆ ಬಂದಾಗ ಅವರೇ "ಕಾವ್ಯವು ಬರಿಯ ವಿನೋದಕ್ಕೋಸ್ಕರವಲ್ಲ, ಮನಃ ಪರಿಪಾಕಕ್ಕೋಸ್ಕರ... ಸಾಹಿತ್ಯವೆನ್ನುವುದು ಜನಜೀವನವನ್ನು ಉನ್ನತಿಗೆತ್ತುವುದಕ್ಕೆ ಅವಶ್ಯವಾಗಿರುವ ಆಯುಧ. ದೇಶದಲ್ಲಿಯ ಎಲ್ಲ ಮತಗಳ, ಎಲ್ಲ ವರ್ಗಗಳ ಮತ್ತು ಎಲ್ಲ ಕಸುಬುಗಳ ಜನರಲ್ಲಿಯೂ

ಜ್ಞಾನವನ್ನೂ, ವಿವೇಕವನ್ನೂ ಬೆಳೆಸಿ ಅವರ ಧ್ಯೇಯಗಳನ್ನು ಉನ್ನತಗೊಳಿಸಿ, ಅವರ ಲೌಕಿಕ ಯೋಗ್ಯತೆಯನ್ನು ಅಭಿವೃದ್ಧಿಪಡಿಸುವುದು ಸಾಹಿತ್ಯದ ಕೆಲಸ" ಎಂದು ಹೇಳಿದ ಈ ಮಾತುಗಳು ಕಾವ್ಯವೂ ಸೇರಿದಂತೆ ಎಲ್ಲ ಸಾಹಿತ್ಯವೂ ಜನರಲ್ಲಿನ ಜ್ಞಾನ, ವಿವೇಕ, ಧ್ಯೇಯಗಳನ್ನು ಉನ್ನತೀಕರಿಸುವುದೇ ಆಗಿರುವಾಗ, ಹೊರಮೈ ಅಷ್ಟು ಮುಖ್ಯ ವಾಗುವುದಿಲ್ಲವೆಂಬುದೇ ಅವರ ನಿಲುವು. ಅದನ್ನೂ ಕೂಡಾ ಸ್ಪಷ್ಟವಾದ ಮಾತುಗಳಲ್ಲಿ ಹೀಗೆ ವಿವರಿಸಿದ್ದಾರೆ. "ಸಾಹಿತ್ಯದಲ್ಲಿ ಪ್ರಕಾರ ನವೀನತೆಗಿಂತ ಮುಖ್ಯವಾದದ್ದು ವಿಷಯ ನವೀನತೆ" ಆದ್ದರಿಂದ ಡಿವಿಜಿ ಅವರು ಅಭಿವ್ಯಕ್ತಿ ವಿಧಾನಗಳ ಬಗ್ಗೆ ಅಷ್ಟಾಗಿ ಯೋಚಿಸಲಿಲ್ಲವಾಗಿ, ಹೊಸ ಪ್ರಯೋಗಗಳಿಗೆ ಪ್ರಯತ್ನಿಸಲೇ ಇಲ್ಲ. ಡಿವಿಜಿ ಅವರಿಗೆ ಬುದ್ಧಿಗಿಂತ ಭಾವ ಸಂವೇದನೆಗಳು, ತತ್ವಚಿಂತನೆಗಳಿಗಿಂತ ಭಾವುಕತೆ ದೊಡ್ಡದೆನಿಸಲಿಲ್ಲ. ಅನುಭವ ಮತ್ತು ಅನುಭವದ ಸಾರ ಅಥವಾ ಅನುಭವ ಜನ್ಯಪಾಠ ಮುಖ್ಯವೆನಿಸಿತ್ತು. ಅವರ ಕಾವ್ಯದಲ್ಲಿ ಭಾವ ತೀವ್ರತೆಯಾಗಲೀ ಉತ್ಕಟತೆಯಾಗಲಿ ಅಷ್ಟಾಗಿ ಕಾಣಿಸುವುದಿಲ್ಲ. ಡಾ. ನರಹಳ್ಳಿ ಬಾಲ ಸುಬ್ರಹ್ಮಣ್ಯಂ ಅವರು ಡಿವಿಜಿ ಕಾವ್ಯಶೈಲಿಯನ್ನು ನಾಲ್ಕು ಅಂಶಗಳ ಮುಖ್ಯವಾಗಿ ನಿರ್ಧರಿಸಿದೆ ಎಂದು ಭಾವಿಸುತ್ತಾರೆ. ಅವುಗಳನ್ನು ನಿಶಿತ ವಿಚಾರಶಕ್ತಿ ಸಾಮಾಜಿಕ ಆಸಕ್ತಿ, ಅನುಭವಗಳಿಗಿಂತ ಅದರ ಫಲಿತಕ್ಕೆ ನೀಡಿದ ಪ್ರಾಮುಖ್ಯತೆ ಬೌದ್ಧಿಕ ಪ್ರಖರತೆ, ಪತ್ರಿಕೋದ್ಯಮ ಬರವಣಿಗೆ ಎಂದು ಗುರುತಿಸಿದ್ದಾರೆ.

ಹೀಗಾಗಿ ಅವರ ಕಾವ್ಯವನ್ನು ಮೇಲೆ ಪ್ರಸ್ತಾಪಿಸಿದ ಅಂಶಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಸಾಧುವೆನಿಸುತ್ತದೆ. ಒಟ್ಟು ೧೫ ಕವನ ಸಂಕಲನಗಳನ್ನು ರಚಿಸಿದ್ದರೂ ಅವೆಲ್ಲವೂ ವಿಷಯ ಮತ್ತು ಅಭಿವ್ಯಕ್ತಿ ವೈವಿಧ್ಯತೆಯೊಂದಿಗೆ ಕೂಡಿವೆ. ಅವುಗಳಲ್ಲಿ ಕೆಲವನ್ನು ಗಮನಿಸುವುದಾದರೆ, ವಸಂತ ಕುಸುಮಾಂಜಲಿಯಲ್ಲಿ ಎರಡು ಭಾಗಗಳಿದ್ದು ಮೊದಲ ನಾಲ್ಕು ಕವಿತೆಗಳು ಚಿಂತನಪರವಾಗಿದ್ದರೆ, ಎರಡನೆ ಭಾಗದಲ್ಲಿ ಬಹುತೇಕ ಕವಿತೆಗಳು ನಾಡಿನ ಮಹಾನ್ ವ್ಯಕ್ತಿಗಳ ಕುರಿತ ಶಬ್ದಚಿತ್ರಗಳಾಗಿವೆ.

ಮೊದಲಿನ ಭಾಗದಲ್ಲಿನ ಕವಿತೆಗಳಲ್ಲಿನ ಒಂದು ಕವಿತೆ ಅಮೆರಿಕಾದ ಮಿಟ್ರಿಯಲ್ ಕವಿಯ `My soul and I' ಎಂಬ ಕವಿತೆಯ ಅನುವಾದವಾಗಿದೆ. ಅದರಂತೆಯೇ ಆತ್ಮಗೀತೆಯೂ ಕೂಡಾ 'ವಾಲ್ಟ್ ವಿಟಮನ್‌ರ `Song of myself' ನ ಅನುವಾದವಾಗಿದೆ. 'ದೇವರ ಕುರಿತಾದ ಮೂಲಭೂತ ಜಿಜ್ಞಾಸೆಯ ಪ್ರಶ್ನೆಯಾದ ದೇವರೆಲ್ಲಿ? ಎನ್ನುವುದಕ್ಕೆ ಚಿಂತನಪರವಾದ ವ್ಯಾಖ್ಯಾನವೊಂದು ಕವಿತೆಯಾಗಿದೆ. ನೀರಿನಲ್ಲಿದ್ದೂ ಮೀನು ನೀರಿನ ರಾಶಿಯನ್ನು ಗಾಳಿಯಲ್ಲಿದ್ದೂ ಹಕ್ಕಿಗೆ ಗಾಳಿಯನ್ನು ಅರಿಯುವ ಆಸೆಯಂತೆ ಮನುಷ್ಯನಿಗೆ ತನ್ನೊಳಗೇ ಇರುವ ದೇವರನ್ನು ಹೊರಗೆ ಹುಡುಕುವ ಆಸೆ! ಪರಮಾತ್ಮನ ಸರ್ವ ವ್ಯಾಪಕತ್ವ, ಧರ್ಮದೃಷ್ಟಿ, ದೈವಭಕ್ತಿ ಮುಂತಾದ ವಿಷಯಗಳಿದ್ದು ಅಭಿವ್ಯಕ್ತಿಯ ರೀತಿ ವೃತ್ತ, ಕಂದ, ದ್ವಿಪದಿ, ಷಟ್ಪದಿ ನಡೆಗಳಲ್ಲಿದೆ ಈ ಭಾಗದಲ್ಲಿ ತತ್ವಚಿಂತನೆಗಳೇ ಪ್ರಧಾನ.

ಎರಡನೇ ಭಾಗದಲ್ಲಿ ಮೇಲೆ ತಿಳಿಸಿದಂತೆ ವ್ಯಕ್ತಿ ಚಿತ್ರಗಳಿವೆ. ಅವರ ಆದರ, ಗೌರವ, ಅಭಿಮಾನ, ಪ್ರೀತಿಗಳಿಗೆ ಪಾತ್ರರಾದ ರಾಷ್ಟ್ರನಾಯಕರು, ಅಧ್ಯಾತ್ಮವಾದಿಗಳು, ವಿಭೂತಿ ಪುರುಷರು, ಮುಂತಾದವರ ಘನ ವ್ಯಕ್ತಿತ್ವ ಗುಣವೈಶಿಷ್ಟ್ಯಗಳನ್ನು ಅನಾವರಣಗೊಳಿಸಿದ್ದಾರೆ.

ಗೋಖಲೆ, ಗಾಂಧೀಜಿ, ಪರಮಹಂಸ, ವಿವೇಕಾನಂದ, ವಿಶ್ವೇಶ್ವರಯ್ಯ, ಠ್ಯಾಗೋರ್ ಮೊದಲಾದ ಮಹಾನ್ ವ್ಯಕ್ತಿಗಳ ಚಿತ್ರಣಗಳಾಗಿವೆ ಈ ಕವಿತೆಗಳು. ಡಿವಿಜಿ ಯಾವ ರೀತಿಯ ಆದರ್ಶ ನೈತಿಕ ಮೌಲ್ಯಗಳು, ಪ್ರಜಾಹಿತ ಸೇವೆ ಇತ್ಯಾದಿ ಅಂಶಗಳನ್ನು ರೂಢಿಸಿ ಕೊಂಡು ತಮ್ಮ ನಡವಳಿಕೆ, ವ್ಯಕ್ತಿತ್ವಗಳ ಘನತೆಯಿಂದ ಲೋಕಮಾನ್ಯರೂ ಲೋಕ ಪೂಜ್ಯರೂ ಆಗಿದ್ದಾರೆಯೋ ಅಂತಹವರ ಬಗೆಗಿನ ಮೆಚ್ಚುಗೆ, ಕೃತಜ್ಞತೆಯ ಭಾವವೇ ಇಂತಹ ಚರಿತ್ರ ಪುರುಷರ ಕುರಿತ ಕವಿತೆಗಳಾಗಿವೆ.

ಅವರ ಮತ್ತೊಂದು ಬಹುಶೃತ ಕವನ ಸಂಕಲನ 'ನಿವೇದನೆ' ಈ ಸಂಕಲನವೇ ಡಿವಿಜಿ ಅವರ ಕಾವ್ಯ ಪ್ರತಿಭೆಗೆ ನಿದರ್ಶನವಾಗಿದೆ.ಇಲ್ಲಿ ನಿಸರ್ಗ ಸೌಂದರ್ಯದ ಸ್ವಾನುಭೂತಿಜನ್ಯ ಕವಿತೆಗಳೇ ಹೆಚ್ಚಾಗಿವೆ. ನಿಸರ್ಗವೆಲ್ಲವೂ ಮತ್ತೆ ಭಗವಂತನ ಸೃಷ್ಟಿಯೇ, ಅದು ಡಿವಿಜಿ ಅವರಿಗೆ ದೈವ ಕೃತಿಯ ಸೊಬಗು. 'ಸರಸಭಾವತತಿಯ ಸೊಬಗು, ಸುಜನ ಜೀವ ಕಥೆಯ ಸೊಬಗು – ಇದೆಲ್ಲವೂ ಕವಿ ಮನಸ್ಸನ್ನು ಭಾವ ಸ್ನಿಗ್ಧತೆಯಿಂದ ತುಂಬಿಬಿಟ್ಟಿದೆ. ತಾನುಂಡ ಸೊಬಗನ್ನು ಜನಕೆ ತಿಳಿಸಬೇಕೆಂಬ ತುಡಿತವೇ ಇಲ್ಲಿನ ಕವಿತೆಗಳ ಆಶಯ. "ಮನಕೆ ತೋರ್ಪ ಸೊಬಗನೆಲ್ಲ ತನಗೆ ತುಷ್ಟಿಯಪ್ಪ ತೆರದಿ ಜನಕೆ ನುಡಿಯಲು" ಮುಂದಾಗಿದ್ದಾರೆ ಕವಿ. ಈ ಸಂಕಲನದಲ್ಲಿ ಹಳತು ಹೊಸತುಗಳು ಸಂದರ್ಭಾನು ಸಾರವಾಗಿ ಸೇರಿಕೊಂಡಿವೆ. ಹಳತು ಹೊಸತುಗಳ ಬಗ್ಗೆ ಡಿವಿಜಿ ಅವರಿಗೆ ಮಡಿ ವಂತಿಕೆಯಿಲ್ಲ. ಅದಕ್ಕೆ ಅವರು ತಮ್ಮ ಮುನ್ನುಡಿಯಲ್ಲಿ "ಇದು ಪಳದದು ಪೊಸತೆನಲೇಂ. ಬದುಕಿನರಲ್ಲಿಟ್ಟ ಸಾರಯಂತ್ರಂ ಕವನಂ" ಎಂದು ಸಮರ್ಥಿಸಿ ಕೊಂಡಿದ್ದಾರೆ. ನಿಸರ್ಗದ ಸಮಸ್ತ ಸತ್ವಗಳೂ ತಮ್ಮ ಸೌಂದರ್ಯದಿಂದ ಕವಿ ಮನಸ್ಸನ್ನು ಸೂರೆಗೊಂಡಿದೆ. ಆಕಾಶ, ನಕ್ಷತ್ರ, ಬೆಟ್ಟ, ಗುಡ್ಡ, ಕಾಡು, ಕಡಿಲು, ತೊರೆ, ಬನ, ಹೊಲ, ಗದ್ದೆ, ಜೀವಸಂಕುಲ, ಬೆಳಕು ಮೊದಲಾದ ಸೌಂದರ್ಯ ಸತ್ವಗಳನ್ನು ಸೃಷ್ಟಿಸಿದ ಶಿಲ್ಪಿಯಾರು? ಎಂಬ ಜಿಜ್ಞಾಸೆಯ ಪ್ರಶ್ನೆಯೊಂದಿಗೆ ಕವಿ ಹೊರಟು, ಅಚ್ಚರಿಗೊಂಡು, ಕಣ್ಣಿಗೆ ಅಗೋಚರವಾದ ಅವನು ಕಾಣದಿದ್ದರೂ ಅವನ ಅಭಿವ್ಯಕ್ತಿ ರೂಪಗಳ ಮೂಲಕವೇ ಪರಿಭಾವಿಸಿ ಗೌರವದಿಂದ ಮಣಿಯುತ್ತಾರೆ. ಈ ಸಂಕಲನದಲ್ಲಿ ದೈವಭಕ್ತಿ ಜೀವನನಿಷ್ಠೆ. ದೈವಸೃಷ್ಟಿಯ ಸೊಬಗು ಇವೇ ಪ್ರಧಾನ ಅಂಶಗಳಾಗಿವೆ. ದೈವಸೃಷ್ಟಿಯ ಅಭಿವ್ಯಕ್ತಿಗಳಾದ ಬೆಟ್ಟ ಬಾನು, ಕಡಲು ಜಲಪಾತಗಳ ಜೊತೆ ಜೊತೆಗೆ ಮನುಷ್ಯನ ಕಲಾಪ್ರಜ್ಞೆಯ ಸುಂದರ ಅಭಿವ್ಯಕ್ತಿಗಳಾದ, ಶಿಲಾಬಾಲಿಕೆಯರು, ಗೊಮ್ಮಟೇಶ್ವರ ಶಿಲ್ಪ ಮೊದಲಾದವುಗಳ ಬಗ್ಗೆ ಮುಗ್ಧವಾದ ಕವಿ ಮನಸ್ಸಿನ ಭಾವತರಂಗಗಳ ಅಭಿವ್ಯಕ್ತಿಯಾಗಿ ಈ ಕವಿತೆಗಳಿವೆ. ಶಿಲಾಬಾಲಿಕೆಯರು ಆಂಗ್ಲಕವಿ ಕೀಟ್ಸ್ ಬರೆದ `Ode on a Grecianurn' ಕವನದಿಂದ ಸ್ಫೂರ್ತಿಗೊಂಡದ್ದಾಗಿದೆ. ಶಿಲಾಬಾಲಿಕೆಯರು ಶಿಲೆಗಳಲ್ಲ ಸೌಂದರ್ಯ ಸಾಕ್ಷಾತ್ಕಾರ ಗೊಂಡು ನಿಂತ, ಚೆನ್ನಕೇಶವನ ಆರಾಧನೆಗೆಂದು ನಿಂತ ಮದನಿಕೆಯರು; ಶುಷ್ಕ ಹೃದಯರಿಗೆ ಸೌಹೃದವ ನೀಡಲು ಅಲ್ಲದೆ ಅವರಿಗೆ ಜನ್ಮ ನೀಡಿದ ಚಿತ್ರ ಚತುರರ ಚಿತ್ತದ ಏಕಾಗ್ರಭಕ್ತಿ ದೀಪಿಕೆ ಬೆಳಗಿ ಪೊಳೆಯುತ್ತಿರುವವರು. ಎರಡನೆ ಭಾಗದಲ್ಲಿ ಹಾಡುಗಳಾಗಿ ಬಂದಿರುವ ಕವಿತೆಗಳಲ್ಲಿ ಅತಿ ಮುಖ್ಯವಾದ್ದು 'ವನಸುಮ' ಈ ಒಂದು ಕವಿತೆ ಕವಿಯ ಜೀವನದರ್ಶನವನ್ನೇ

ಅನಾವರಣಗೊಳಿಸುತ್ತದೆ. ಆಡಂಬರ, ತೋರಿಕೆಗಳಿಲ್ಲದೆ ನಿಸ್ವಾರ್ಥ ಮನಸ್ಸಿನಿಂದ ಅನಾಸಕ್ತ ಅಥವಾ ನಿಸ್ಪೃಹತೆಯಿಂದ ಕರ್ಮವೆಸಗಿಪರೋಪಕಾರ ಮಾಡುತ್ತಿದ್ದೇನೆಂಬ ಹಮ್ಮಿಲ್ಲದೆ ಬದುಕಬೇಕೆಂಬ ಕವಿಯ ಆಶಯಕ್ಕೆ 'ವನಸುಮ' ರೂಪಕವಾಗಿದೆ.

ಮೇಲೆ ಪ್ರಸ್ತಾಪಿಸಿದ ಎರಡು ಸಂಕಲನಗಳ ನಂತರ ೫೦ ವರ್ಷದ ಮೇಲೆ ಬಂದ ಕೇತಕಿ ವನ ಮೊದಲಿನ ಎರಡು ಸಂಕಲನಗಳಿಗಿಂತ ಭಿನ್ನವಾಗಿದೆ. ವಿಷಯ, ಅಭಿವ್ಯಕ್ತಿಗಳೆರಡರ ದೃಷ್ಟಿಯಿಂದಲೂ ವಿಶಿಷ್ಟವಾಗಿದೆ. ಪ್ರಾಚೀನ ಪದ್ಯರೂಪಗಳಾದ ವೃತ್ತ, ಕಂದ, ಸೀಸಪದ್ಯ, ಷಟ್ಪದಿ, ರಗಳೆಗಳ ಬಳಕೆಯಾಗಿದೆ. ವಿಭಿನ್ನಭಾವ ವಿಲಾಸಗಳ ವೈವಿಧ್ಯವಿದೆ. ಅವರ ಅಭಿವ್ಯಕ್ತಿಯಲ್ಲಿ ಸಹಜವಾಗಿ ಕಾಣುವ ಜೀವನೋಲ್ಲಾಸ, ಭಾವೋತ್ಸಾಹ, ಗೆಲುವು, ಆಶಾವಾದ ಇತ್ಯಾದಿಗಳ ಎಡೆಯಲ್ಲಿ ಬೇಸರ. ನಿರಾಸೆ. ವಿಷಾದ ದುಃಖ ಇತ್ಯಾದಿಗಳ ಆಧಿಕ್ಯವೇ ಇದೆ. ಕೇತಕೀವನದ ಒಟ್ಟಾರೆ ಕವಿತೆಗಳ ಬಗ್ಗೆ ಮಾತನಾಡುವ ನೀಲತ್ತಳಿ ಅವರು, ಅಲ್ಲಿನ ಭಾವಸ್ಥಿತಿಗಳನ್ನು ಹೀಗೆ ಸಂಗ್ರಹಿಸಿ ಹೇಳುತ್ತಾರೆ "ಅಳುವಿನ ಆಳವಿದೆ, ನಗೆಯ ಹಗುರಿದೆ, ಬದುಕಿನ ಸಾರ್ಥಕತೆ, ವ್ಯರ್ಥತೆ, ರಸಿಕತೆ, ಬರಡುತನ, ಆಸೆ, ನಿರಾಸೆ, ಜೀವ–ಸಾವುಗಳ ಅನನ್ಯತೆ, ಇತಿಹಾಸದ ಚಿತ್ರಗಳ ಭವ್ಯತೆ ಪ್ರೇಮ ಮೋಹಗಳ ಸೆಳೆತ ವಿಲಾಸಗಳು. ವಿಫಲ ಪ್ರೇಮದಿಂದ ಚೆಲುವಿನ ನಿರರ್ಥಕತೆ ಇತ್ಯಾದಿ ಹಲವಾರು ಭಾವಸ್ಥಿತಿಗಳು; ಇವುಗಳನ್ನು ಬಿಂಬಿಸುವ ನಿಸರ್ಗ ದೃಶ್ಯಗಳು. ಇಷ್ಟೆಲ್ಲಾ ವಿಸ್ತೃತ ಭಾವ ಜಗತ್ತನ್ನು ಅನಾವರಣ ಮಾಡಿ ತೋರಿಸುವ ಈ ಸಂಕಲನದ ಕೆಲವು ಕವಿತೆಗಳನ್ನು ಹೆಸರಿಸುವುದಾದರೆ ಅಹಿಂಸಾತ್ಮಕ ಹೋರಾಟವನ್ನು ಹೇಳುವ 'ವೀರಗೀತೆ,' 'ಸಂದೇಹ ಸೂಕ್ತ', ಕೇತಕೀವನ, ಸ್ವತಂತ್ರ ಭಾರತ ಅಭಿನಂದನ ಸ್ತವ, ಮಹಾತ್ಮಾಗಾಂಧೀ ಜ್ಞಾಪಕಪದ್ಯ ಇತ್ಯಾದಿಗಳ ಜೊತೆಗೆ ಇನ್ನೂ ಹಲವಾರು ಒಳ್ಳೆಯ ಕವಿತೆಗಳಿವೆ.

'ಉಮರನ ಒಸಗೆ ಎಂಬ ಅನುವಾದ ಕಾವ್ಯ ಅವರ ಸಮರ್ಥ ಅನುವಾದಕ್ಕೆ ಸಾಕ್ಷಿಯಾಗಿದೆ. ಉಮರ್ ಖಯ್ಯಾಮ್ ಎಂಬ ಪಾರಸಿ ಕವಿಯ ಈ ಕಾವ್ಯ ಫಿಟ್ಸ್ ಜೆರಾಲ್ಡ್ ಎಂಬುವರು ಇಂಗ್ಲಿಷಿಗೆ ಅನುವಾದಿಸಿದ್ದು ಅದನ್ನೇ ಡಿವಿಜಿ ತಮ್ಮ ಅನುವಾದಕ್ಕೆ ಮೂಲ ಆಕರವನ್ನಾಗಿಸಿಕೊಂಡಿದ್ದಾರೆ. ಮೂಲಕೃತಿಗೆ ಎಲ್ಲಿಯೂ ಅನ್ಯಾಯವಾಗದ ರೀತಿಯಲ್ಲಿ ಅತ್ಯಂತ ಸಮರ್ಥವಾಗಿ, ಉಮರನ ಭಾವ ಸೂಕ್ಷ್ಮಗಳನ್ನು ಕನ್ನಡಿಸಿದ್ದಾರೆ. ಕೃತಿಗಿಂತ ಈ ಕೃತಿಗೆ ಮುನ್ನುಡಿಯಾಗಿ ಬರೆದಿರುವ ೮೫ ಪುಟಗಳ ಲೇಖನ ಅತ್ಯಂತ ಮೌಲಿಕವಾಗಿದೆ. ಈ ಲೇಖನದಲ್ಲಿ ಉಮರನ ಜೀವನ ವಿವರಗಳು, ಕಾವ್ಯದ ಇತಿಹಾಸ, ಪಿಟ್ಸ್ ಜೆರಾಲ್ಡನ ಜೀವನ, ಉಮರನ ಕಾವ್ಯದೃಷ್ಟಿ, ತತ್ವದೃಷ್ಟಿ, ಸೂಫಿ, ತತ್ವಜ್ಞಾನ, ಭಾರತೀಯ ವೇದೋಪನಿಷತ್ತು, ರಾಮಾಯಣಾದಿ ಮಹಾಕಾವ್ಯಗಳ ದೃಷ್ಟಿಯೊಂದಿಗೆ ಹೋಲಿಕೆ, ಚಾರ್ವಾಕ ಮತ ಸ್ವರೂಪ, ಉಮರನ ಪ್ರೀತಿಯ ಸ್ವರೂಪ, ದೈವ ಚಿಂತನೆ ಇತ್ಯಾದಿ ವಿಷಯಗಳ ವಿಸ್ತೃತ ವಿವರಣೆಯಿದೆ. ಉಮರನ ಒಸಗೆ ಕಾವ್ಯದ ಆಂತರ್ಯದಲ್ಲಿ ಗಂಭೀರವಾದ ತಾತ್ವಿಕ ಚಿಂತನೆಯಿದೆ. ಮೇಲುನೋಟಕ್ಕೆ ಐಹಿಕಭೋಗಿ, ಮಧುವಿಲಾಸಿ, ಎಂದೆನಿಸಿದರೂ ಆಳದಲ್ಲಿ ಅನುಭಾವಿಕ ನಿಲುವಿದೆ. ಐಹಿಕ ಸುಖಭೋಗಗಳು ತ್ಯಾಜ್ಯವಲ್ಲ

ಅವೂ ಕೂಡಾ ದೈವಿಕ ಆನಂದಾನುಭೂತಿಯ ನೆಲಗೆ ಕೊಂಡೊಯ್ಯಬಲ್ಲವು ಎಂಬುದು ಅವನ ಆಳವಾದ ನಿಲುವು.

ಮುಂದಿನ ಅವರ ಕಾವ್ಯ ಕೃತಿ 'ಶೃಂಗಾರ ಮಂಗಳಂ' ಶಿಲಾಬಾಲಿಕೆಯರು ಕವಿತೆಯಲ್ಲಿ ಪ್ರಾರಂಭವಾದ ಸೌಂದರ್ಯ ಮೀಮಾಂಸೆ ಅಲ್ಲಲ್ಲಿ ಆಂಶಿಕವಾಗಿ ಕಾಣಿಸಿಕೊಂಡ ಅವರ ಸೌಂದರ್ಯ ಚಿಂತನೆ ಈ ಕೃತಿಯಲ್ಲಿ ಢಾಳಾಗಿಯೂ ಪ್ರಧಾನವಾಗಿಯೂ ಕಾಣಿಸಿಕೊಳ್ಳುತ್ತದೆ. ಕೀಟ್ಸ್‌ನ `Ode on a Gercian urn' ಅವರ ಸೌಂದರ್ಯ ಜಿಜ್ಞಾಸೆಯ ಗರಿಗೆದರುವಂತೆ ಮಾಡಿದೆ. ಏಕಕಾಲದಲ್ಲಿ ಸೌಂದರ್ಯ ಮತ್ತು ಸಾವು! ಇವುಗಳ ಸಂಬಂಧದ ಬಗ್ಗೆ ಗಂಭೀರ ಚಿಂತನೆಗೆ ದೂಡಿದ್ದು. ಚಿತಾಭಸ್ಮ ಕರಂಡದ ಹೊರಮೈ ಮೇಲಿನ ಚೆಲುವೆಯರ ಚಿತ್ರಗಳು, ಸೌಂದರ್ಯ ವಿಲಾಸ. ಜೀವನೋತ್ಸಾಹವನ್ನು ಚಿಮ್ಮಿಸುವ ದೃಶ್ಯಗಳಿದ್ದರೆ, ಒಳಗೆ ಸತ್ತವರ ಚಿತಾಭಸ್ಮ! ಈ ಎರಡೂ ಸ್ಥಿತಿಗಳು ಅನಿವಾರ್ಯ ಸತ್ಯಗಳು. ಕಾವ್ಯವೂ ಸತ್ಯ; ಸಾವೂ ಸತ್ಯ. ಕೀಟ್ಸ್ ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ ಎಂದು ಹೇಳಿದ ಮಾತನ್ನು ಭಾರತೀಯ ತತ್ವದರ್ಶನದ ಹಿನ್ನೆಲೆಯಲ್ಲಿ ವಿಮರ್ಶಿಸುತ್ತಾರೆ. ಕಾಮ–ಪ್ರೇಮ, ಸೌಂದರ್ಯಗಳು ಎಂದಿಗೂ ವರ್ಜ್ಯವಲ್ಲ. ಅದೂ ಕೂಡಾ ದೈವದತ್ತವೇ! ಹಸನು ಬಾಳಿಗೆ ಅನಿವಾರ್ಯವೂ ಕೂಡಾ. ಇವೆಲ್ಲವೂ ಅಸ್ವಾದ್ಯವೇ. ತ್ಯಾಗ – ಭೋಗಗಳೆರಡೂ ಸೇರುವುದೇ ಜೀವನ ಧರ್ಮಯೋಗ ಈ ತತ್ವವನ್ನೇ ಅತ್ಯಂತ ಸುಂದರವಾಗಿ

**"ತನು ಪೋಷಣೆಗನ್ನರಸಂ**
**ಮನನೆನ ಪೋಷಣೆಗೆ ಬೇಹುದನುರಾಗರಸಂ।**
**ಪ್ರಣಯವನರಿಯದ ಜೀವಂ**
**ತೃಣಜಲ ಲವಲೇಶ ಶೂನ್ಯ ಮರುತಲ ಸಿಕರಂ"**

ಎಂದು ಕಂದಪದ್ಯವೊಂದರ ಮೂಲಕ ವಿವರಿಸಿದ್ದಾರೆ. ಪ್ರೇಮ ಒಂದು ಅದ್ವೈತಾನುಭೂತಿ. ಪ್ರೇಮಾದ್ವೈತ ಇವುಗಳ ಸಮರ್ಥನೆಯಾಗಿ ಷೇಕ್ಸ್‌ಪಿಯರನ 'ದಿ ಫೀನಿಕ್ಸ್ ಅಂಡ್ ದಿ ಟರ್ಟಲ್' ಮತ್ತು ಕೀಟ್ಸ್‌ನ ಸಾಕ್ಷ್ಯಗಳನ್ನು ಅನುವಾದ ರೂಪದಲ್ಲಿ ನೀಡಿದ್ದಾರೆ: ಒಟ್ಟಾರೆಯಾಗಿ ಅವರು ನೀಡುವ ಸಂದೇಶ ಇಷ್ಟೇ?

**"ಹಳಿಯದಿರು ಸುಂದರವ, ಜರಿಯದಿರು ಸಿಂಗರವ**
**ಕಳೆಯದಿರು ಜೀವ ಬಾಂಧವ್ಯ ಬಂಧುರವ**
**ಮಲಿನವಾಗದೆ ಬೆಳೆದು ಬೆಳಗೆ ನಿನ್ನೊಳಸತ್ವ**
**ಮೊಳೆತು ಜಗವೊಳಿತು ಸೊಗ ಸೊಗಸೆಲ್ಲಮೊಳಿತು"** ಎಂದು

ಡಿವಿಜಿ ಅವರ ಮತ್ತೊಂದು ಅನನ್ಯ ಕೃತಿಯೆಂದರೆ, 'ಮಂಕುತಿಮ್ಮನ ಕಗ್ಗ.' ಸರ್ವಜ್ಞ, ವೇಮನರ ಸಾಲಿನಲ್ಲಿ ನಿಲ್ಲಬಲ್ಲ ಡಿವಿಜಿ ಅವರ ಲೋಕಾನುಭವ ತತ್ವಚಿಂತನೆಗಳೆರಡೂ ಸಮಪಾತಳಿಯಲ್ಲಿ ಅನನ್ಯವಾಗಿ ಬೆಸೆದುಕೊಂಡು ಸಾಮಾನ್ಯ ಜನರ ಬಾಳಿಗೆ ದಾರಿದೀಪವಾಗಿ, ಬದುಕಿಗೆ ಭರವಸೆ, ಆತ್ಮವಿಶ್ವಾಸ, ಆತ್ಮಸ್ಥೈರ್ಯಗಳನ್ನು ತುಂಬಿ ಬದುಕನ್ನು ಸಹ್ಯವಾಗಿಸುವಂತೆ ತತ್ವಮಥನದ ಕಥನವಿದೆ. ಈ ಕಗ್ಗದ ಕಥಕ ಮಂಕುತಿಮ್ಮ, ಗುರುಜ್ಞಾನಿ

ಅನುಭವ ಸಾರವನ್ನೆಲ್ಲ ೯೪೫ ಚೌಪದಿಗಳಲ್ಲಿ ಅಡಕಗೊಳಿಸಿ ಸೋಮಿಗೆ ಬಳುವಳಿಯಾಗಿ ಬಿಟ್ಟು ಮರೆಯಾಗುತ್ತಾನೆ. ಕಡತ ಬಿಚ್ಚಿದ್ದೇ ಅದರಲ್ಲಿ ತಾನು ಕಂಡ 'ಬಾಳ್ಗೆಸಲುವ ತತ್ವ'ವನ್ನು ತನ್ನ ಸಖರ ತೃಪ್ತಿಗೆಂದು, ತಿಮ್ಮನ ಕಂತೆಯನ್ನು ಬರೆಯುತ್ತಾನೆ. ೧೯೪೩ರಲ್ಲಿ ಪ್ರಕಟವಾದ ಈ ಕಗ್ಗ ಕೃತಿ ಆಧುನಿಕ ಬದುಕಿನ ಭಗವದ್ಗೀತೆಯೆಂಬಂತೆ ಜನಸಾಮಾನ್ಯ ವಾಗಿರುವುದಲ್ಲದೆ ಪಂಡಿತ ಪಾಮರರ ತುದಿನಾಲಿಗೆಯಲ್ಲಿ ಮಿಂಚುತ್ತದೆ. ಡಿವಿಜಿ ಎಂದರೆ 'ಮಂಕುತಿಮ್ಮನ ಕಗ್ಗ'; ಮಂಕುತಿಮ್ಮನ ಕಗ್ಗವೆಂದರೆ ಡಿವಿಜಿ ಎಂಬಷ್ಟು ಅಭಿನ್ನತೆ ಜನಮಾನಸದಲ್ಲಿ ಈ ಕಾವ್ಯ ಪ್ರತಿಷ್ಠಾಪಿತವಾಗಿದೆ. 'ಇಲ್ಲಿನ ಚೌಪದಿಗಳೆಲ್ಲವೂ ಜಿಜ್ಞಾಸೆ ಮೂಲವಾದದ್ದು.' ಸೃಷ್ಟಿಯ ಬೆರಗಿಗೆ ಮನತೆತ್ತು, ಬೆರಗಿಗೆ ಕಾರಣವಾದ ಸೃಷ್ಟಿಯ ಮೂಲಕ್ಕೆ ಸಂಬಂಧಿಸಿದ ಅನೇಕ ಪ್ರಶ್ನೆಗಳ ಉದ್ಭವ, ಈ ಪ್ರಶ್ನೆಗಳಿಗೆ ಉತ್ತರವನ್ನೂ ಕಂಡುಕೊಳ್ಳುವ ಪ್ರಯತ್ನಗಳು, ತರ್ಕಗಳು ಎಲ್ಲವೂ ಕಾಣಿಸಿಕೊಳ್ಳುತ್ತವೆ. ಯಾವುದೇ ಒಂದು ನಿರ್ದಿಷ್ಟವಾದ ಕೇಂದ್ರ ವಿಷಯವಿಲ್ಲ. ಮುಕ್ತಕಗಳಂತೆ ಸ್ವತಂತ್ರವಾದವು. ಲೋಕಜೀವನದ ವೈವಿಧ್ಯಗಳು ಸೃಷ್ಟಿ, ಪ್ರಕೃತಿ, ಮಾನವ ಪ್ರಕೃತಿ ಇತ್ಯಾದಿಗಳ ಶೋಧ ಕ್ರಿಯೆಯಲ್ಲಿ ಸಂಚರಿಸಿ ಕಡೆಗೆ ರಹಸ್ಯ ರಹಸ್ಯವಾಗಿಯೇ ಉಳಿಯುವುದನ್ನು ಒಪ್ಪಿಕೊಂಡು, ಬಾಳ್ವೆಯನ್ನು ನಡೆಸುತ್ತಾ ವಿಶ್ವಾತ್ಮಕ ದೃಷ್ಟಿಯನ್ನು ರೂಢಿಸಿಕೊಳ್ಳಬೇಕೆಂಬುದೇ ಅವರ ಅಭಿಪ್ರಾಯ. ಕಗ್ಗ ಒಂದು ರೀತಿಯ 'ಅಭಯ' ಕಾವ್ಯವಾಗಿದೆ. ಕಷ್ಟನಷ್ಟಗಳಿಗೆ ಹೆದರಿ ಪಲಾಯನ ಮಾಡುವುದಾಗಲೀ, ಬದುಕನ್ನು ಹಳಿಯುವುದಾಗಲಿ, ಅಳುತ್ತಾ ಕೂಡುವುದಾಗಲೀ ಸಲ್ಲದು. ಆದ್ದರಿಂದ

**"ಗೌರವಿಸು ಜೀವನವ ಗೌರವಿಸುಚೇತನವ**
**ಆರದೋ ಜಗವೆಂದು ಭೇದವೆಣಿಸದಿರು**
**ಹೋರುವುದೆ ಜೀವನ ಸಮೃದ್ಧಿ ಗೋಸುಗ ನಿನಗೆ**
**ದಾರಿಯಾತ್ಮೋನ್ನತಿಗೆ ಮಂಕುತಿಮ್ಮ"**

ಎಂಬುದೇ ಅವರ ಅಂತಿಮವಾಗಿ ದೊರಕುವ ಸಂದೇಶ.

ಈ ಕಗ್ಗ ಬಂಧ ನಾಲ್ಕು ದಶಕಗಳ ನಂತರ ಬಂದ "ಮರುಳ ಮುನಿಯನ ಕಗ್ಗ, ಹಿಂದಿನ ಕಗ್ಗದ ಧಾಟಿಯಲ್ಲೇ ಮುಂದುವರೆದು, ಮಂಕುತಿಮ್ಮನ ಕಗ್ಗ"ದ ಮುಂದುವರಿಕೆ ಎನಿಸುತ್ತದೆ. ಜಿ.ಪಿ. ರಾಜರತ್ನಂ ಈ ಕಾವ್ಯದಲ್ಲಿ ಮುಖ್ಯವಾಗಿ ಅಧಿದೈವ ಅಧಿಲೋಕ ಮತ್ತು ಅಧ್ಯಾತ್ಮ ಎಂದು ಮೂರು ವಿಷಯಗಳನ್ನು ಗುರುತಿಸಿದರೂ ನೂರಾರು ವಿಚಾರಗಳು ವಿಷಯಗಳು ಸುಳಿದಾಡುತ್ತವೆ. ಮಂಕುತಿಮ್ಮನ ಕಗ್ಗದಲ್ಲಿ ಇರುವಂತೆಯೇ ಸೂಕ್ತಿಪ್ರಾಯ ವಾದ ಸೂತ್ರಪ್ರಾಯವಾದ ಅಸಂಖ್ಯಾತ ಸಾಲುಗಳಿವೆ. ಏನಾದರೂ 'ಮಂಕುತಿಮ್ಮನ ಕಗ್ಗ'ಕ್ಕೆ ದೊರೆತ ಪ್ರಾಶಸ್ತ್ಯ ಇದಕ್ಕೆ ದೊರೆಯಲಿಲ್ಲ. ಹೇಳಬೇಕಾದ್ದೆಲ್ಲವನ್ನೂ ಹಿಂದಿನ ಕಗ್ಗದಲ್ಲಿಯೇ ಹೇಳಿದ್ದಾರೆ. ಇದಕ್ಕೆ ಸಮರ್ಥನೆಯಾಗಿ ಎಸ್.ಆರ್. ರಾಮಸ್ವಾಮಿಯವರ ಅಭಿಪ್ರಾಯವನ್ನು ಗಮನಿಸಬಹುದು. ರಂಗನಾಥ ಶರ್ಮರು. "ಮರುಳ ಮುನಿಯ ಮಂಕುತಿಮ್ಮನ ತಮ್ಮ ಸಾಗಿದ್ದು, ಅಣ್ಣನನ್ನೂ ತಮ್ಮ ಕೆಲವು ಸಲ ಮೀರಿಸುತ್ತಾನೆ ಎನ್ನುವುದನ್ನು ಒಪ್ಪದೆ, ಈ ರೀತಿ ಹೇಳುತ್ತಾರೆ" ಮಂಕುತಿಮ್ಮನ ಕಗ್ಗದ ಕಲ್ಪನಾರಮ್ಯತೆ

ಯಾಗಲೀ ದೃಷ್ಟಾಂತಗಳ ನಿಬಿಡತೆಯಾಗಲಿ. ಜೀವನಾನುಭವದ ಗಾಂಭೀರ್ಯ ಸೌಂದರ್ಯವಾಗಲಿ ಅಲ್ಲಿ ಬಂದಷ್ಟು ಇಲ್ಲಿ ಬಂದಿಲ್ಲ. ಎಂದು ಹೇಳುವುದಲ್ಲದೆ ಪುನರುಕ್ತಿ ದೋಷವನ್ನೂ ಪ್ರಸ್ತಾಪಿಸುತ್ತಾರೆ. 'ಮಂಕುತಿಮ್ಮನ ಕಗ್ಗ' ನಿಜವಾಗಿಯೂ ಹಳೆಬೇರು ಹೊಸ ಚಿಗುರುಗಳ ಸಮನ್ವಿತ ಶೈಲಿಯಲ್ಲಿದೆ.

ಇನ್ನುಳಿದ ಶ್ರೀಕೃಷ್ಣ ಪರೀಕ್ಷಣಂ, ಶ್ರೀರಾಮಪರೀಕ್ಷಣಂ ಈ ಎರಡೂ ಶುದ್ಧ ಕವಿತಾ ಸಂಕಲನಗಳಲ್ಲಿ ಪಾತ್ರಗಳೂ ಸಂಭಾಷಣೆಗಳೂ ಇದ್ದು ಇವು ಒಂದು ರೀತಿಯಿಂದ ಪದ್ಯ ನಾಟಕಗಳೂ ಆಗಿವೆ. ರಾಮ, ಕೃಷ್ಣರು ನಮ್ಮ ನಾಡಿನ ಆರಾಧ್ಯ ದೈವರು. ಎರಡೂ ಕೃತಿಗಳು ಗಂಭೀರ ಚಿಂತನೆಗಳನ್ನು ಒಳಗೊಂಡಿರುವಂತಹವು. ಮಹಾಪುರುಷರೂ ಅವತಾರಿಗಳೂ ಅತಿಮಾನವರೂ ಎಂದು ಗುರುತಿಸಿಕೊಂಡಿರುವ ಈ ಇಬ್ಬರನ್ನೂ ಅವರ ಜೀವನ ಸಂದರ್ಭಗಳ ಹಿನ್ನೆಲೆಯಲ್ಲಿ ಪ್ರಶ್ನಾರ್ಹರನ್ನಾಗಿ ನಿಲ್ಲಿಸಿ, ಅವರೇ ನೀಡುವ ಸಮರ್ಥನೆಗಳ ಮೂಲಕ, ನಿಷ್ಕಳಂಕರೆನಿಸಿ ಅನಂತ ಕಾಲದ ಅವರ ಬಗೆಗಿನ ಭಕ್ತಿ, ಗೌರವಗಳನ್ನು ಶುದ್ಧ ಚಾರಿತ್ರ್ಯವನ್ನು ಕಾಪಾಡುತ್ತಾರೆ. ರಾಮಕೃಷ್ಣರಿಗೂ ಸತ್ವಪರೀಕ್ಷೆಯ ಸಂದರ್ಭಗಳು ಎದುರಾಗುತ್ತವೆ. ಅಹಲ್ಯೆಯ ಪ್ರಕರಣ, ವಾಲಿವಧೆ, ಸೀತೆಯ ಅಗ್ನಿಪರೀಕ್ಷೆ, ಸೀತಾ ಪರಿತ್ಯಾಗ ಮುಂತಾದೆಡೆಗಳಲ್ಲಿ ರಾಮನ ನಡವಳಿಕೆ, ಪ್ರಶ್ನಾರ್ಹವಾದಾಗ ರಾಮನೇ ತನ್ನ ನಿಲುವುಗಳನ್ನು ತನ್ನ ಧರ್ಮದೃಷ್ಟಿ ಹಿನ್ನೆಲೆಯಲ್ಲಿ ಸಮರ್ಥಿಸಿಕೊಳ್ಳುತ್ತಾನೆ. ಪ್ರಶ್ನೆಗಳನ್ನು ಕೇಳುವವರು ಅಹಲ್ಯೆ, ತಾರಾ, ಮಂಡೋದರಿ, ಸೀತೆ, ಲೋಕದ ಜನ ಲಕ್ಷ್ಮಣ ಕಡೆಗೆ ಹನುಮಂತನೂ ಕೂಡಾ? ರಾಮನು ತನ್ನ ಕೃತಿಗಳನ್ನು ಅವುಗಳ ಹಿಂದಿನ ಧರ್ಮ ಸ್ವರೂಪದ ವಿವರಣೆಯೊಂದಿಗೆ ಸಮರ್ಥಿಸಿಕೊಳ್ಳುತ್ತಾನೆ ಮತ್ತು ಪ್ರಶ್ನಿಸಿದವರಿಗೂ ಸ್ವೀಕಾರಾರ್ಹವೆಂಬಂತೆ ಮಾಡುತ್ತಾನೆ.

ಕೃಷ್ಣನ ಪರೀಕ್ಷಣ ಸಂದರ್ಭಗಳು ಬೇರೆ ಬೇರೆ. ಶ್ರೀಕೃಷ್ಣನ ಮೇಲೆ ಜಾರ ಚೋರ ಎಂಬೆಲ್ಲಾ ಆರೋಪಗಳಿವೆ. ಕಾಮುಕನೆಂಬ ಬಿರುದೂ ಇದೆ. ಆದರೆ ಎಲ್ಲರೂ ತಿಳಿದಿರುವ ಹಾಗೆ ಜಾರನೂ ಅಲ್ಲ. ಚೋರನೂ ಅಲ್ಲ ಕಾಮುಕನೂ ಅಲ್ಲ. ಹಾಗೆ ಕಾಣಿಸಿಕೊಳ್ಳುವುದು ಅವನ ಲೀಲೆಗಳ ಭಾಗ. ರಕ್ತಿಯ ಮೂಲಕವೇ ವಿರಕ್ತಿಯನ್ನು ಬೋಧಿಸುವ ಮಹಾಪುರುಷ ಅಲ್ಲದೆ ಪ್ರೇಮ ಕಾಮಗಳು ಧರ್ಮಸಂಯಮಿತ ನೆಲೆಯಲ್ಲಿ ದೂಷ್ಯವೇ ಅಲ್ಲ. ಡಿವಿಜಿ ಯವರ ಕೃಷ್ಣಭಕ್ತಿ ಪಾರಮ್ಯದ ಫಲವಾಗಿ ಈ ಕೃತಿ. ಕೃಷ್ಣ ತತ್ವ ಮೀಮಾಂಸೆ ನಾಲ್ಕು ಹಂತಗಳಲ್ಲಿ ನಡೆಯುತ್ತದೆ. ಮೊದಲ ಭಾಗದಲ್ಲಿ ಗದ್ಯಶೈಲಿಯಲ್ಲಿ ಕೃಷ್ಣ ಮೀಮಾಂಸೆ ಅಥವಾ ಸಮಗ್ರ ಚಿಂತನೆಯಿದೆ. ಶ್ರೀಕೃಷ್ಣನ ವ್ಯಕ್ತಿತ್ವದ ವಿವಿಧ ಮುಖಗಳ ಪರೀಕ್ಷಣವಿದೆ. ಎರಡನೆಯದು (ಅವತರಣಿಕಾ ಭಾಗ) ೬೬ ಚತುಷ್ಪದಗಳನ್ನೂ ವೃತ್ತಗಳನ್ನು ಒಳಗೊಂಡಿದ್ದು ಶ್ರೀಕೃಷ್ಣನ ಗುಣ ಮಹಿಮೆಗಳ ವೈಭವದ ವರ್ಣನೆಯಿದೆ. 'ವಿಶ್ವಧರ್ಮ ಸಂಸ್ಥಾಪನಾ ಭಾರ ಧುರಂಧರ, ಸತ್ಯಧರ್ಮರಕ್ಷಾವ್ರತಿ, ಜಗದಖಿಲ ಚೇತನೋದ್ಧಾರನ್' ಇತ್ಯಾದಿಯಾಗಿ ವರ್ಣಿಸಿದ್ದಾರೆ. ಇದೇ ಭಾಗದಲ್ಲಿ ಶೃಂಗಾರ ಮೀಮಾಂಸೆಯನ್ನು ನಡೆಸಿದ್ದಾರೆ. ಮೂರನೇಭಾಗ 'ಲೀಲಾ ವಿಭೂತಿ'–೯ ದೃಶ್ಯಗಳ ಗೀತನಾಟಕ, ಇಲ್ಲಿ ರಾಸಲೀಲೆಯೇ ಪ್ರಮುಖವಾಗಿದೆ. ಶ್ರೀಕೃಷ್ಣ ಮೀಮಾಂಸೆ ಭಾಗದಲ್ಲಿ ಬರುವ ಶ್ರೀಕೃಷ್ಣ ಗೋಪೀ ವಿಲಾಸವೇ

ದೃಶ್ಯ ಕಾವ್ಯವಾಗಿ ಇಲ್ಲಿ ರೂಪಾಂತರಗೊಂಡಿದೆ. ಕಡೆಯ ಭಾಗವಾಗಿ ಬರುವ 'ನಾರದ ಕೃಷ್ಣ ಸಂವಾದ'ವೇ ಶ್ರೀಕೃಷ್ಣ ಪರೀಕ್ಷಣ ಶೀರ್ಷಿಕೆಗೆ ಅನ್ವಯವಾಗುವಂತಿದೆ. ಡಿವಿಜಿ ಅವರು ನಾರದರ ಮೂಲಕ ಕೃಷ್ಣ ಸಂಬಂಧವಾಗಿ ಅನೇಕ ಪ್ರಶ್ನೆಗಳನ್ನು ಎತ್ತಿದ್ದಾರೆ. ನಾರದರು ಕೇಳುವ 'ಧರ್ಮಸ್ವರೂಪ ಪ್ರಣಯ ಮೂಲ, ಲೋಕಸಂಪರ್ಕ, ಆತ್ಮಶಿಕ್ಷಣ, ಪ್ರಣಯ ಬಂಧನ ಮುಕ್ತಿ – ಇತ್ಯಾದಿ ಪ್ರಶ್ನೆಗಳಿಗೆ ಶ್ರೀಕೃಷ್ಣ ಪರಮಾತ್ಮನಾಗಿ ಸಮಾಧಾನ ನೀಡುತ್ತಾನೆ. ಒಟ್ಟಾರೆಯಾಗಿ ಡಿವಿಜಿ ಅವರ ಜೀವನದೃಷ್ಟಿ, ರಸಸಿದ್ಧಾಂತ, ಸೌಂದರ್ಯ ಸಿದ್ಧಾಂತಗಳ ಸಮ್ಮಿಳಿತ ಸ್ವರೂಪ ದರ್ಶನವನ್ನು ಕಾಣುತ್ತೇವೆ.

'ಅಂತಃಪುರಗೀತೆಗಳು' ಡಿವಿಜಿ ಅವರ ಮತ್ತೊಂದು ಮಹತ್ವದ ಜನಪ್ರಿಯವಾದ ಕೃತಿ ಬೇಲೂರಿನ ದೇವಾಲಯ ಸೌಂದರ್ಯ ಅಲೌಕಿಕವಾದದ್ದು. ಬೇಲೂರಿನ ಶಿಲಾಬಾಲಿಕೆಯರ ಅನುಪಮ ಸೌಂದರ್ಯಾಭಿಭೂತರಾದ ಡಿವಿಜಿ 'ವನಸುಮ' ಸಂಕಲನದಲ್ಲಿ ಶಿಲಾ ಬಾಲಿಕೆಯರ ಕುರಿತು ಪದ್ಯವೊಂದನ್ನು ಬರೆದಿದ್ದು, ಅವುಗಳ ಸೌಂದರ್ಯ ವರ್ಣನೆಯನ್ನು ಸೌಂದರ್ಯದ ಅಭಿವ್ಯಕ್ತಿಯ ವಿವಿಧ ರೂಪಗಳನ್ನು ಮತ್ತಷ್ಟು ವಿಸ್ತರಿಸಬೇಕೆಂಬ ಹಂಬಲವೇ ಬಹುಶಃ ಅಂತಃಪುರ ಗೀತೆಗಳು' ಹೆಸರಿನಲ್ಲಿ ಒಂದೊಂದು ಶಿಲ್ಪ ಸೌಂದರ್ಯವನ್ನೂ ಶಿಲಾಬಾಲಿಕೆಯರ ಅಥವಾ ಮದನಿಕೆಯರ ವಿವಿಧ ಭಾವ ಭಂಗಿಗಳನ್ನೂ ನಾದಾಂತರಿಸಿ ಹಾಡುಗಳಾಗಿ ಕಟ್ಟಿಕೊಟ್ಟಿದ್ದಾರೆ. ಆ ಶಿಲ್ಪಸುಂದರಿಯರನ್ನು ಸಂಬೋಧಿಸುತ್ತಾ ಅವರ ಅಂತರಂಗದ ಭಾವೋದ್ವೇಗಗಳನ್ನು ರಕ್ತಿ ಮುಕ್ತಿ ಸ್ಥಿತಿಗಳನ್ನು ಕಂದ, ವೃತ್ತ ಹಾಡುಗಳಲ್ಲಿ ನೋಡುಗರ ಓದುಗರ ಮನಮುಟ್ಟಿಸುತ್ತಾರೆ. ಸುತ್ತಲಿನ ಸಿಂಗಾರ ಚೆನ್ನಕೇಶವನ ಲೀಲಾವಿಲಾಸ, ಈ ಮದನಿಕೆಯರು ಆ ವಿಲಾಸದ ಗಾಡಿಕಾರ್ತಿಯರು. ಆದರೆ ಚೆನ್ನಕೇಶವನ ಭಕ್ತೆಯರು; ಅವನ ಚೆಲುವಿನಿಂದಲೇ ಆಕರ್ಷಿತರಾದವರು. ಇಲ್ಲಿಯೂ ಕವಿಯ ಸತ್ಯಸೌಂದರ್ಯ ದೃಷ್ಟಿಯ ವಿಜೃಂಭಣೆಯೇ ಕಾಣಿಸುತ್ತದೆ.

### ಗದ್ಯ ಸಾಹಿತ್ಯ ಪ್ರಕಾರಗಳು

ಡಿವಿಜಿ ಅವರ ಸೃಜನ ಪ್ರತಿಭೆಯ ಒಂದು ಮುಖ ಕಾವ್ಯವಾದರೆ ಮತ್ತೊಂದು ಗದ್ಯ. ಚಿಂತನ ಸಾಹಿತ್ಯ, ವಿಚಾರಸಾಹಿತ್ಯ, ಅಧ್ಯಾತ್ಮ ಸಾಹಿತ್ಯವೆಲ್ಲವೂ ಗದ್ಯದಲ್ಲಿಯೇ ಇರುವುದರ ಜೊತೆಗೆ ನಾಟಕಗಳೂ ಸೇರಿವೆ. ಅವುಗಳನ್ನು ದೃಶ್ಯ ಕಾವ್ಯಗಳೆಂದು ಗುರುತಿಸಿದ್ದರೂ ಗದ್ಯ ಪ್ರಕಾರವಾಗಿಯೇ ಪರಿಗಣಿಸುವುದು ಸಾಧುವೆನಿಸುತ್ತದೆ. ಡಿವಿಜಿ ನಾಟಕಗಳನ್ನು ಬರೆದಿರುವುದು ಒಂದು ಅಪರೂಪದ ಸಂಗತಿ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಪ್ರಯೋಗ ಪ್ರವೃತ್ತರಾಗಿರುವುದು ಅವರ ಬಹುಮುಖ ಪ್ರತಿಭೆಗೆ ನಿದರ್ಶನ. ಡಿವಿಜಿ ಅವರಿಗೆ ಪುಣ್ಯಪುರುಷರ, ಮಹಾನುಭಾವರ ಆಧ್ಯಾತ್ಮಿಕ ವ್ಯಕ್ತಿಗಳ, ಕಲಾವಿದರ, ಒಟ್ಟಾರೆಯಾಗಿ ವ್ಯಕ್ತಿಗಳಲ್ಲಿ ಯಾರೇ ಆಗಿರಲಿ ಗುಣ ವೈಶಿಷ್ಟ್ಯಗಳನ್ನು ವ್ಯಕ್ತಿತ್ವದಲ್ಲಿನ ಮಹಾನತೆಯನ್ನು ಅಪರೂಪದ ಪ್ರತಿಭೆ ಸಾಮರ್ಥ್ಯಗಳನ್ನು ಉದಾರ ಚಾರಿತ್ರ್ಯವನ್ನು ಕಂಡರೆ ಸಾಕು ಸಂಪೂರ್ಣವಾಗಿ ತಮ್ಮನ್ನು ತೆತ್ತುಕೊಳ್ಳುತ್ತಿದ್ದರು. ಅನನ್ಯ ಚಾರಿತ್ರ್ಯ ಅವರ ಜೀವನಾದರ್ಶಗಳು ನಂಬಿದ ಮೌಲ್ಯಗಳು, ಕ್ರಿಯಾಶೀಲತೆಗಳು ಮೆಚ್ಚಿಗೆಯಾದಲ್ಲಿ ಅವರ

ಜೀವನ ಚರಿತ್ರೆಗಳನ್ನು ಬರೆದು ಧನ್ಯತೆಯ ಭಾವವನ್ನು ಅನುಭವಿಸುತ್ತಿದ್ದರು. ಅಂತಹ ರೀತಿಯಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿಂದಿದ್ದ ಅಖಂಡ ಚೇತನ ಅಧ್ಯಾತ್ಮ ವ್ಯಕ್ತಿಯಾಗಿದ್ದು ತಪೋಧನರಾಗಿದ್ದು ಲೌಕಿಕ ವ್ಯವಹಾರ ಸಂಬಂಧ ರಾಜ್ಯಸ್ಥಾಪನೆಗೆ ಕಾರಣರಾದದ್ದು ಡಿವಿಜಿ ಅವರಿಗೆ ಒಂದು ಮಹತ್ತರ ದರ್ಶನಕ್ಕೆ ನಾಂದಿಯಾಯಿತು. ಧಾರ್ಮಿಕ ವ್ಯಕ್ತಿಗಳಾದ ಮಾತ್ರಕ್ಕೆ ಲೌಕಿಕ ವಿಮುಖತೆ ಅನಿವಾರ್ಯವಲ್ಲ. ವಿದ್ಯಾರಣ್ಯರು ರಾಜಕೀಯವನ್ನು ಆಪದ್ಧರ್ಮವೆಂದು ಭಾವಿಸಿ, ನಿತ್ಯಧರ್ಮವಾದ ಆಧ್ಯಾತ್ಮದಿಂದ ಸ್ವಲ್ಪ ವಿರಮಿಸಿದರು. ಇದು ಡಿವಿಜಿ ಅವರಿಗೆ ಹೊಸ ಅರಿವಿನ ಬೆಳಕಾಗಿ ಭಾಸವಾಯಿತು. ವಿದ್ಯಾರಣ್ಯರು ಅವರ ಮನಸ್ಸನ್ನು ಆಕ್ರಮಿಸಿಕೊಂಡದ್ದೇ ಅವರ ಕುರಿತಾದ ಅಧ್ಯಯನ, ಸಂಶೋಧನೆಗೆ ಮುಂದಾದರು. ೧೯೧೭ರಲ್ಲಿ 'ವಿದ್ಯಾರಣ್ಯ' ಹೆಸರಿನ ನಾಟಕವನ್ನೇ ಬರೆದುಬಿಟ್ಟರು. 'ಈ ನಾಟಕ ಅವರ ಲೌಕಿಕ ಧಾರ್ಮಿಕ ಚಿಂತನೆಗಳಿಗೆ ವೇದಿಕೆಯಾಯಿತು. ವಿದ್ಯಾರಣ್ಯ ನಾಟಕದ ವಸ್ತು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿದೆ. ಈ ಸಂಬಂಧವಾಗಿ ವಿದ್ಯಾರಣ್ಯರ ಮನಸ್ಸಿನಲ್ಲಿದ್ದ ಆಲೋಚನೆಗಳು, ಹರಿಹರ ಬುಕ್ಕರನ್ನು ಮುಂದಿಟ್ಟುಕೊಂಡು ರಾಜ್ಯಸ್ಥಾಪನೆಗೆ ನಡೆಸಿದ ಪ್ರಯತ್ನಗಳು, ಶಿಷ್ಯರಿಗೆ ಜನರಿಗೆ ನೀಡಿದ ಉಪದೇಶಗಳು ತಮ್ಮೆಲ್ಲ ಆಧ್ಯಾತ್ಮಿಕ ತಪಸ್ಸನ್ನು ಧಾರೆಯೆರೆದು ಸನಾತನ ಸಂಸ್ಕೃತಿಯ ಉಳಿವಿಗಾಗಿ ಗಂಡಾಂತರಗಳನ್ನು ಎದುರಿಸಿದ್ದು, ವಿಜಯನಗರ ಸ್ಥಾಪನೆಗೆ ಪ್ರಚಂಡ ಪ್ರಚೋದಕ ಶಕ್ತಿಯಾದದ್ದು ಎಲ್ಲವನ್ನೂ ನಾಟಕದಲ್ಲಿ ತಂದಿರುವುದೇ ಅಲ್ಲದೆ ವಿದ್ಯಾರಣ್ಯರ ಬಗ್ಗೆಯೇ ಮೂರ್ನಾಲ್ಕು ಕೃತಿಗಳನ್ನೂ ಬರೆದರು.

ಡಿವಿಜಿ ಅವರಿಗೆ ನಾಟಕ ರಂಗ ಪ್ರಯೋಗಕ್ಕಾಗಿ ಬರೆಯಬೇಕೆಂದೇನೂ ಇಲ್ಲ. ತನ್ನ ಗಂಭೀರ ಚಿಂತನೆ ವಿಚಾರಗಳಿಗೆ ವ್ಯಾಪಕವಾದ ಭಿತ್ತಿಯೊಂದು ಬೇಕೆನಿಸಿದ್ದೇ ಅಲ್ಲದೆ ವಿಭಿನ್ನ ಪಾತ್ರಗಳ ಸಂಭಾಷಣೆ, ಸನ್ನಿವೇಶಗಳ ಮೂಲಕ ಒಂದು ಬಗೆಯ ಸಂವಾದಕ್ಕೆ ಅವಕಾಶ ದೊರೆಯುವುದೆಂಬ ಆಲೋಚನೆಯೂ ನಾಟಕ ರಚನೆಗೆ ಪ್ರೇರಣೆಯಾಗಿರುವ ಸಾಧ್ಯತೆಯಿದೆ. ಆದ್ದರಿಂದಲೇ ನಾಟಕದ ದೃಷ್ಟಿಯಿಂದ ಯಶಸ್ವಿ ಅನಿಸಿದ್ದರೂ ದಟ್ಟವಾದ ವೈಚಾರಿಕತೆ ತುಂಬಿದೆ ಈ ಕೃತಿಯಲ್ಲಿ. ವಿದ್ಯಾರಣ್ಯ ನಾಟಕವೂ ಸೇರಿದಂತೆ ಎಂಟು ನಾಟಕಗಳು ರಚನೆಯಾಗಿದ್ದರೂ ಇವುಗಳಲ್ಲಿ ವಿದ್ಯಾರಣ್ಯ ತಿಲೋತ್ತಮೆ, ಪರಶುರಾಮ ಮಹಾಚುನಾವಣೆ ಗರ್ದಭವಿಜಯ ಇವು ಐದೂ ಸ್ವತಂತ್ರ ಕೃತಿಗಳಾಗಿದ್ದು ಮಿಕ್ಕ ಮೂರು ನಾಟಕಗಳಲ್ಲಿ ಒಂದು ರೂಪಾಂತರ ಮತ್ತೆರಡು ಅನುವಾದಗಳಾಗಿವೆ.

'ವಿದ್ಯಾರಣ್ಯ' ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ವಿದ್ಯಾರಣ್ಯರ ಪಾತ್ರ. ಅವರ ರಾಜಕೀಯ ಚಿಂತನೆಗಳು ಅದರೊಂದಿಗೇ ಕೂಡಿಕೊಂಡ ಧಾರ್ಮಿಕ ಚಿಂತನೆಗಳು, ಲೌಕಿಕದಿಂದ ದೂರವಿದ್ದರೂ ಆಪತ್ಕಾಲದಲ್ಲಿ ಮುಂಚೂಣಿಗೆ ಬಂದು ಧರ್ಮಸಂಸ್ಥಾಪನೆ, ಸಾಮ್ರಾಜ್ಯ ಸಂಸ್ಥಾಪನೆ ಹಿಂದೂ ಸಂಸ್ಕೃತಿ ರಕ್ಷಣೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ವಿದ್ಯಾರಣ್ಯರ ಅಪೂರ್ವವೂ ಮಹತ್ತರವೂ ಆದ ವ್ಯಕ್ತಿತ್ವದ ಅನಾವರಣಗೊಳಿಸುವ ಪ್ರಯತ್ನದ ಹಿನ್ನೆಲೆಯಲ್ಲಿ ಈ ನಾಟಕವಿದ್ದು. ದಟ್ಟವಾದ ವೈಚಾರಿಕತೆಯನ್ನು ಬಿಂಬಿಸುವುದೇ ಹೊರತು ನಾಟಕೀಯ ಅಂಶಗಳಿಗೆ ಮಹತ್ವವಿಲ್ಲದಂತಾಗಿದೆ.

'ಪರಶುರಾಮ.' ಜಿ.ಪಿ. ರಾಜರತ್ನಂ ಅವರು ಬರೆದಿರುವ ಗಂಡುಗೊಡಲಿಯ ಕಥಾವಸ್ತುವನ್ನೇ ಉಳ್ಳದ್ದಾಗಿದೆ. ಇದರಲ್ಲಿ ಪರಶುರಾಮನ ಪಿತೃಭಕ್ತಿ, ತಪಸ್ಸು, ಧೀಮಂತಿಕೆ, ವಿನಯವಿಧೇಯತೆಗಳು ಕಡೆಗೆ ಮಾತೃವಧೆಗೆ ಮುಂದಾಗಬೇಕಾಗಿ ಬಂದಾಗಲೂ ಪಿತೃವಾಕ್ಯ ಪರಿಪಾಲನೆಗೆ ಬದ್ಧನಾಗಬೇಕಾದ ಅನಿವಾರ್ಯ ಸಂದರ್ಭದ ಚಿತ್ರಣವಿದೆ ಯಾದರೂ ಪರಶುರಾಮನ ಕ್ರೌರ್ಯದ ಮರೆಯಲ್ಲಿ ಗುಪ್ತಗಾಮಿನಿಯಾಗಿ ಪ್ರವಹಿಸುವ ಸಂವೇದನಾ ಶೀಲತೆ, ಮಾತೃಭಕ್ತಿ, ಪ್ರೇಮಗಳೂ ಕೂಡಾ ಚಿತ್ರಣಗೊಂಡಿದೆ. ಸಾಂಪ್ರದಾಯಿಕಶೈಲಿ, ಗಂಭೀರಗದ್ಯ, ಛಂದೋಬದ್ಧ ಪದ್ಯಗಳಿಂದ ಪ್ರೌಢನಾಟಕವೆನಿಸಿದೆ. ಕವಿ ಪುತಿನ ಅವರು ಈ ನಾಟಕದ ಬಗ್ಗೆ ಹೀಗೆ ವಿವರಿಸುತ್ತಾರೆ. "ಪರಶುರಾಮ ತುಂಬಾ ಸ್ವಾರಸ್ಯಕರ ನಾಟಕ; ಮನಸ್ಸು ನವಯುಗದ್ದು ನಮ್ಮ ಸನಾತನ ಮೌಲ್ಯಗಳಿಗೆ ಒಲಿದದ್ದು, ಮೆಲುಕು ಹಾಕುವಂಥ ಕಂದ ವೃತ್ತಗಳು ಗಾಢಾಲೋಚನೆಯಿಂದ ಮೂಡಿದವು, ಧ್ಯಾನದಲ್ಲಿ ಕೆಡವುವಂಥ ವಿಚಾರಲಹರಿ, ಹೃದಯಸ್ಪರ್ಶಿಯಾದ ಮನೋಗತಗಳು, ತೀಕ್ಷ್ಣ ಮತಿಯ ಹರಿತವಾದ ಬುದ್ಧಿಯಪಟಗಳನ್ನು ನಡೆಯಿಸುವ ಸಂವಾದಗಳು ಸಮಸ್ಯೆಗಳನ್ನು ಹೊರಳು ಮಾತುಗಳಿಂದ ಹಾರಿಸದೆ ನಿಟ್ಟಿಸಿನೋಡುವ ದಿಟ್ಟತನ, ಗಂಭೀರವಾದ ಶೈಲಿ" ಎಂದು ಮುಕ್ತವಾಗಿ ಹೊಗಳಿದ್ದಾರೆ.

ಪ್ರಹಸನತ್ರಯಿ ಸಂಕಲನದಲ್ಲಿ ಬರುವ ಗರ್ದಭವಿಜಯ ಸಮಕಾಲೀನ ಪರಿಸ್ಥಿತಿಯನ್ನು ಬಿಂಬಿಸುವ ವಿಡಂಬನಾತ್ಮಕ ರಚನೆ. ನಾಟಕದ ಸಂವಿಧಾನ ಸಾಂಪ್ರದಾಯಿಕವಾಗಿದ್ದು ನಾಂದಿ, ಸೂತ್ರಧಾರ, ಕಂದಪದ್ಯ, ಮಂಗಳ ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ಕತ್ತೆಗಳನ್ನೇ ಪಾತ್ರವಾಗಿಸಿ, ಮನುಷ್ಯ ಸಮಾಜದ ವಿಮರ್ಶೆ, ವಿಡಂಬನೆಗೆ ತೊಡಗಿದ್ದಾರೆ. ಮನುಷ್ಯ ಸಮಾಜದ ಅತಿಯಾದ ಪ್ರಗತಿ, ನಗರೀಕರಣ, ಓಟಿನ ರಾಜಕಾರಣ ಇವುಗಳಿಂದಾಗಿ ಆಗುತ್ತಿರುವ ಅನ್ಯಾಯವನ್ನು ನಿವೇದಿಸಲು ಬ್ರಹ್ಮನಲ್ಲಿಗೆ ಹೋಗುವ ಕತ್ತೆಗಳ ಚಿತ್ರಣ ನಿಜಕ್ಕೂ ನಗೆಯ ಮೂಲದ ವಿಷಾದವನ್ನು ಎತ್ತಿ ತೋರಿಸುವಲ್ಲಿ ಯಶಸ್ವಿಯಾಗಿದೆ. ಡಿವಿಜಿಯವರ ಹಾಸ್ಯ ಪ್ರಜ್ಞೆಯ ಮಿಂಚಿನ ಸೆಳಕುಗಳು ಇಲ್ಲಿ ಕಾಣಸಿಗುತ್ತವೆ. ಇದೇ ರೀತಿಯಲ್ಲಿ ರಾಜಕೀಯ ವಿಡಂಬನೆಯನ್ನೇ ಪ್ರಧಾನವಾಗಿ ಉಳ್ಳದ್ದು ಮಹಾಚುನಾವಣೆ. ರಾಜಕೀಯ ನಾಯಕರ ಗೋಮುಖ ವ್ಯಾಘ್ರತ್ವ, ಅವರು ಚುನಾವಣೆ ಗೆಲ್ಲಲು, ನೀಡುವ ಭರವಸೆಗಳ ಹುಸಿತನ ಇವೇ ಮೊದಲಾಗಿ ವ್ಯಂಗ್ಯ ಸಂಭಾಷಣೆಗಳ ಮೂಲಕ ತುಂಬಾ ಸಮರ್ಥವಾಗಿ ಮೂಡಿಬಂದಿದೆ. ೧೯೨೧ರಲ್ಲಿ ಪ್ರಕಟವಾದ 'ತಿಲೋತ್ತಮೆ' ಪೌರಾಣಿಕ ವಸ್ತುವುಳ್ಳದ್ದು. ವೃತ್ತಿರಂಗದ ಲಕ್ಷಣಗಳನ್ನು ಅಳವಡಿಸಿಕೊಂಡ ಈ ನಾಟಕ. ಇಂದ್ರ ಪದವಿ ಬಯಸಿ ಘೋರ ತಪಸ್ಸಿಗೆ ಕುಳಿತ ಸುಂದೋಪಸುಂದರೆಂಬ ರಾಕ್ಷಸ ಸೋದರರನ್ನು ತಿಲೋತ್ತಮೆಯೆಂಬ ಅಪ್ಸರೆಯ ಮೂಲಕ ನಾಶಪಡಿಸಿ ಬರಬಹುದಾದ ಭಯಂಕರ ಅಪಾಯದಿಂದ ಪಾರಾಗುವುದೇ ಇಲ್ಲಿನ ವಿಷಯ.

'ಕನಕಾಲುಕಾ' ಎಂಬ ನಾಟಕವನ್ನು ಡಿವಿಜಿ ಅವರು ೧೯೧೧ರಲ್ಲಿಯೇ ಬರೆದದ್ದು. ಲಾರ್ಡ್ ಟೆನಿಸನ್ ಕವಿಯ ದಿಕಪ್ ಎಂಬ ನಾಟಕದ ಕನ್ನಡ ರೂಪಾಂತರ. ಆದ್ದರಿಂದ ವ್ಯಕ್ತಿನಾಮಗಳು, ಸ್ಥಳನಾಮಗಳು ಎಲ್ಲವೂ ಕನ್ನಡ ಪರಿಸರಕ್ಕೆ ಹೊಂದುವಂತೆ

ರೂಪಾಂತರಿಸಿದ್ದಾರೆ. ಈ ಬಗೆಯ ರೂಪಾಂತರಗಳು ಮೊದಲಿನಿಂದಲೂ ನಡೆದಿವೆ. ಗೆಲೇಷಿಯನ್ಸ್ ಕಲಶಪುರಿಯವರು, ರೋಮನರು – ರೋಮಕರು ಸೈನೋರಿಕ್ಸ್ ಸುವರ್ಣಾಕ್ಷನಾಗಿಯೂ ಆಂಟೋನಿಯಸ್ ಅನಂತಸೇನನಾಗಿಯೂ ಮಾರ್ಪಾಟಾಗಿದ್ದಾರೆ. ಪೂರ್ವಾಂಗ, ಉತ್ತರರಂಗ, ಸೂತ್ರಧಾರ, ಭರತಗೀತ, ಮಂಗಳ ಇತ್ಯಾದಿಯಾಗಿ ಕೆಲವು ಭಾರತೀಯ ರಂಗ ಸಂಪ್ರದಾಯದ ಲಕ್ಷಣಗಳನ್ನು ಅಳವಡಿಸಿಕೊಂಡಿದ್ದಾರೆ. ರಾಜ್ಯಭ್ರಷ್ಟನಾದ ಸಾಮಂತರಾಜ ಸುವರ್ಣಾಕ್ಷ ವಿಷಪ್ರಾಶನದಿಂದ ಸಾಯುವುದೇ ಇಲ್ಲಿನ ಕತೆ. ಪ್ರಕೃತ ಸಾಮಂತ ರಾಜನಾಗಿದ್ದ ವಸುನಾಥನ ಮಡದಿ ಕಮಲಿನಿಯನ್ನು ಬಯಸಿ, ಕಡೆಗೆ ಉಡುಗೊರೆಯಾಗಿ ಪಡೆದದ್ದು ಸಾವನ್ನು ನೈತಿಕ ಮೌಲ್ಯವನ್ನು ಪತಿನಿಷ್ಠೆಯನ್ನು ಎತ್ತಿ ಹಿಡಿಯುವುದು ಇದರ ಆಶಯ. ಸಾಂಪ್ರದಾಯಿಕ ಛಂದೋರೂಪಗಳನ್ನೇ ಬಳಸಿದ್ದು, ಪ್ರಯೋಗಕ್ಕೆ ಒಂದು ಸವಾಲೆನಿಸಿದೆ.

ಡಿವಿಜಿ ಅವರ ಇನ್ನೆರಡು ಅನುವಾದಗಳು ಜಾಕ್‌ಕೇಡ್ ಮತ್ತು ಮ್ಯಾಕ್‌ಬೆತ್ ಈ ಎರಡು ನಾಟಕಗಳು ಅನುವಾದಗಳೇ ಹೊರತು ರೂಪಾಂತರಗಳಲ್ಲ. ಷೇಕ್ಸ್‌ಪಿಯರನ ಹಲವಾರು ನಾಟಕಗಳು ಬಸವಪ್ಪ ಶಾಸ್ತ್ರಿಗಳು, ಶ್ರೀಕಂಠೇಶಗೌಡರು ಮತ್ತು ಇನ್ನೂ ಅನೇಕರಿಂದ ರೂಪಾಂತರ, ಭಾಷಾಂತರಗಳಾಗಿವೆ. ರೂಪಾಂತರಗಳ ವಿಚಾರದಲ್ಲಿ ಡಿವಿಜಿ ಅವರದೇ ಆದ ಕೆಲವು ನಿಲುವುಗಳಿವೆ. ಅವರು ಹೀಗೆ ಹೇಳುತ್ತಾರೆ. "ಈ ಪರಿಯ (ರೂಪಾಂತರ) ಕೆಲಸದಿಂದ ಉಪಯೋಗವಿಲ್ಲವೆಂದು ನಾನು ಹೇಳತಕ್ಕವನಲ್ಲ. ನಾನು ಅಂಥ ಕೆಲಸ ಸ್ವಲ್ಪ ಮಾಡಿದ್ದೇನೆ. ಆದರೆ ಹಾಗೆ ವೇಷಾಂತರ ಆಗುವುದು ಅಷ್ಟು ಪ್ರಯೋಜನಕರವಾಗಲಾರದು" ಎಂದು. ಷೇಕ್ಸ್‌ಪಿಯರ್‌ನನ್ನು ಅವನ ಕೃತಿಗಳನ್ನು ಇದ್ದಂತೆಯೇ ಇರಿಸುವುದೇ ಶ್ರೇಯಸ್ಕರವೆಂಬುದು ಡಿವಿಜಿ ಅವರ ನಂಬಿಕೆ. 'ಷೇಕ್ಸ್‌ಪಿಯರ್‌ನ ಲೋಕದ ಪ್ರತಿಬಿಂಬವನ್ನು, ಸಾಧ್ಯವಾದಷ್ಟು ಮಟ್ಟಿಗೂ ಇಲ್ಲಿ ಇಳಿಸಬೇಕು' ಎಂಬುದೇ ಅವರ ಆಶಯ. ಅದನ್ನು ಜಾಕ್‌ಕೇಡ್ ಮತ್ತು ಮ್ಯಾಕ್‌ಬೆತ್, ನಾಟಕಗಳ ಸಂಬಂಧದಲ್ಲಿ ಉಳಿಸಿಕೊಂಡಿದ್ದಾರೆ. ಷೇಕ್ಸ್‌ಪಿಯರ್‌ನ ಮಹತ್ವದ ದುರಂತ ನಾಟಕಗಳಲ್ಲಿ ಇದೂ ಒಂದು. ಮನುಷ್ಯ ಹೃದಯದ ಸ್ವಭಾವದ ಕ್ರೌರ್ಯದ ಚಿತ್ರಣವೇ ಈ ನಾಟಕದ ಪ್ರಧಾನ ಅಂಶ. ರಾಜಕೀಯ ಸ್ವಾರ್ಥ. ರಾಜ್ಯಾಕಾಂಕ್ಷೆ ಎಂತಹ ದುರಂತ ಪರಂಪರೆಗೆ ದಾರಿ ಮಾಡುತ್ತದೆಂಬುದೇ ಇಲ್ಲಿನ ವಸ್ತು, ಸರಳ ರಗಳೆಯ ಛಂದಸ್ಸಿನ ಜೊತೆಗೆ ಸರಳ ಗದ್ಯ. 'ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಗ್ರಂಥದ ಕನ್ನಡ, ಬೀದಿಯ ಕನ್ನಡ ಇವೆಲ್ಲವನ್ನೂ ಬೆರೆಸಿಬಿಟ್ಟಿದ್ದೇನೆ' ಎಂದಿದ್ದಾರೆ. ಮ್ಯಾಕ್‌ಬೆತ್ ನಾಟಕಕ್ಕಿಂತ ಅದಕ್ಕೆ ಪೂರ್ವಭಾವಿಯಾಗಿ ಬರೆದಿರುವ ಮುನ್ನುಡಿ ಅತ್ಯಮೂಲ್ಯವಾದದ್ದು. ರುದ್ರನಾಟಕದ ಸ್ವರೂಪ, ವೈಶಿಷ್ಟ್ಯ ಮ್ಯಾಕ್‌ಬೆತ್ ನಾಟಕದ ಸ್ವಾರಸ್ಯ. ಇಲ್ಲಿನ ಜೀವನ ದೃಷ್ಟಿಯ ಪರಾಮರ್ಶೆ, ಭಾರತೀಯ ಚಿಂತನೆಯ ಹೋಲಿಕೆ, ಛಂದಸ್ಸಿನ ರೀತಿ, ಪದ ಪ್ರಯೋಗಗಳು ಮುಂತಾದವುಗಳ ಕುರಿತು ವಿವರಣೆ ನೀಡಿದ್ದಾರೆ. ಎ.ಎನ್. ಮೂರ್ತಿರಾಯರಂತೂ ಮ್ಯಾಕ್‌ಬೆತ್ ನಾಟಕದ ಅನುವಾದವನ್ನು ಮೆಚ್ಚಿ `Scholarly and dignified` ಎಂದು ಹೊಗಳಿದ್ದಾರೆ.

ಮತ್ತೊಂದು ಅನುವಾದ ನಾಟಕ ಷೇಕ್ಸ್‌ಪಿಯರ್‌ನದೇ ಆದ 'ಆರನೆಯ ಹೆನ್ರಿ' ನಾಟಕದ ಎರಡನೆ ಭಾಗ ಕೇಡ್ ಪ್ರಕರಣ. ಆರನೇ ಹೆನ್ರಿಕಾಲದಲ್ಲಿ ಪ್ರಭುತ್ವ ದುರ್ಬಲವಾಗಿದ್ದ ಸಂದರ್ಭದಲ್ಲಿ ದೊಂಬಿ ನಾಯಕನೊಬ್ಬನು ಹುಟ್ಟಿಕೊಂಡು ದೇಶವಲ್ಲೆಲ್ಲ ಗಲಭೆಗಳನ್ನು ಸೃಷ್ಟಿಸಿ, ಅದರ ದುರುಪಯೋಗ ಪಡೆದುಕೊಳ್ಳಲು ಪ್ರಯತ್ನಿಸುವ ಕೇಡ್‌ನೆಂಬ ವ್ಯಕ್ತಿಯ ಕತೆಯೇ ಇಲ್ಲಿನ ವಿಷಯ. ಅಜ್ಞಾನಿಗಳಾದ ಪ್ರಜೆಗಳು ವಿವೇಕವಿಲ್ಲದೆ, ಆಲೋಚನಾ ಶಕ್ತಿಯಿಲ್ಲದೆ ಕೇಡ್‌ನಂಥ ಪುಂಡರ ಜೊತೆ ಕೈಜೋಡಿಸುವುದು ಅಂದಿನ ಕಾಲಕ್ಕೆ ಮಾತ್ರವಲ್ಲ, ಇಂದಿಗೂ ಅದು ಪ್ರಸ್ತುತ ಎನ್ನುವ ಕಾರಣಕ್ಕಾಗಿಯೇ ಇದರ ಅನುವಾದಕ್ಕೆ ಮುಂದಾದರು. ಮೊದಲಿನಿಂದಲೂ ಡಿವಿಜಿಗೆ ಪ್ರಜಾರಾಜ್ಯದಲ್ಲಿ ನಂಬಿಕೆ. ಆದರೆ ಪ್ರಜಾರಾಜ್ಯದಲ್ಲಿ ಆಗಾಗ ನಡೆಯಬಹುದಾದ ಇಂಥ ದೊಂಬಿದಾಂಧಲೆಗಳ ಕಟು ವಾಸ್ತವವನ್ನೂ ಬಲ್ಲವರೇ ಆಗಿದ್ದಾರೆ. ಜಾಕ್‌ಕೇಡ್ ಬುದ್ಧಿವಂತ. ಪ್ರಜೆಗಳ ಹೆಡ್ಡತನ, ಅಜ್ಞಾನಗಳನ್ನು ಬಲ್ಲವನು. ಅವರನ್ನು ಸುಲಭವಾಗಿ ಸೆಳೆದುಕೊಳ್ಳಬಹುದೆಂಬ ಭರವಸೆ ಅವನಿಗಿದೆ. ಆದ್ದರಿಂದಲೇ ರಾಜನ ಪರವಾಗಿ ದೊಂಬಿಯೆದ್ದ ಜನರಿಗೆ ಕ್ಷಮೆ ದೊರೆಯುವುದಾಗಿ ಹೇಳಿದರೂ ಜನ ಕೇಡ್‌ನ ಮಾತಿಗೆ ಮರುಳಾಗಿ ಅವನ ಹಿಂದೆಯೇ ಹೋಗಲು ಸಿದ್ಧರಾಗುತ್ತಾರೆ. ಅದಕ್ಕಾಗಿಯೇ ಡಿವಿಜಿ ನಾಟಕದ ಕಡೆಯಲ್ಲಿ. ಇಂತಹ ಕೇಡಿಗರ ಹಾವಳಿಯಿಂದ ಎಚ್ಚರಿಸಿ ಎಂದು ಸೂಚಿಸುತ್ತಾರೆ. ಪುಟ್ಟ ನಾಟಕ ಸಾಂಪ್ರದಾಯಿಕ ಅಂಶಗಳು ಸಂವಿಧಾನದ ಭಾಗವಾಗಿ ಬರುತ್ತವೆ. ಗದ್ಯ ಬರಹದ ಪ್ರಕಾರಗಳಲ್ಲಿ ಡಿವಿಜಿ ಅವರು ಮೊದಲು ಬರೆದದ್ದು ಜೀವನ ಚರಿತ್ರೆಗಳು ವ್ಯಕ್ತಿ ಚಿತ್ರಗಳು. ೧೯೧೧ರಲ್ಲಿಯೇ ದಿವಾನ್ ರಂಗಾಚಾರ್ಲು ಅವರ ಕುರಿತು ಬರೆದ ಲೇಖನ ಡಿವಿಜಿ ಅವರಿಗೆ ಅಪಾರ ಮನ್ನಣೆಯನ್ನು ಗಳಿಸಿಕೊಟ್ಟಿತು. ದಿವಾನ್ ರಂಗಾಚಾರ್ಲು ರಾಜ್ಯದ ಮುಖ್ಯ ಅಧಿಕಾರಿಯಾಗಿದ್ದು ಚಿಕ್ಕ ಪ್ರಾಯದ ಚಾಮರಾಜ ಒಡೆಯರಿಗೆ ಸೂಕ್ತ ಸಲಹೆ ಮಾರ್ಗದರ್ಶನಗಳನ್ನು ನೀಡುತ್ತಾ ಸುಭದ್ರವಾದ ರಾಜ್ಯಾಡಳಿತ ನಡೆಸಿದ್ದೇ ಅಲ್ಲದೆ, ಸರ್ವಾಧಿಕಾರದ ಅರಸೊತ್ತಿಗೆಯನ್ನು ಪ್ರಜಾರಾಜ್ಯವನ್ನಾಗಿ ಮಾಡಲು ಶ್ರಮಿಸಿದವರು ರಂಗಾಚಾರ್ಲು. ಡಿವಿಜಿ ಅವರಿಗೆ ರಂಗಾಚಾರ್ಲು ಅವರಲ್ಲಿ ವಿದ್ಯಾರಣ್ಯರಲ್ಲಿ ಕಾಣಿಸಿ ಕೊಂಡಿದ್ದ ನಿಸ್ವಾರ್ಥ ರಾಷ್ಟ್ರಪ್ರೇಮ, ಧಾರ್ಮಿಕ ಮನೋಭಾವ, ರಾಜಕೀಯ ಮುತ್ಸದ್ಧಿತನ, ನಿಷ್ಠಾವಂತ ಸೇವಾ ಮನೋಭಾವಗಳು ಕಾಣಿಸಿಕೊಂಡಿದ್ದರಲ್ಲಿ ಆಶ್ಚರ್ಯ ವಿಲ್ಲ. ಅದೊಂದು ಅದ್ಭುತವಾದ ಬರೆಹ, ಸಾಕಷ್ಟು ಮುದ್ರಣಗಳನ್ನು ಕಂಡಿರುವುದೇ ಅದರ ಮೌಲಿಕತೆಗೆ ನಿದರ್ಶನ.

ಮೊದಲಿನಿಂದಲೂ ಡಿವಿಜಿ ಅವರಿಗೆ ಲೌಕಿಕದ ನೆಲೆಯಲ್ಲಿಯೋ ಆಧ್ಯಾತ್ಮಿಕ ನೆಲೆಯಲ್ಲಿಯೋ ಮಹಾಪುರುಷರೆನಿಸಿಕೊಂಡವರ ಬಗ್ಗೆ ಅಪಾರ ಗೌರವ. ಆ ರೀತಿಯಲ್ಲಿ ಗೌರವವಿರಿಸಿಕೊಂಡವರ ವ್ಯಕ್ತಿತ್ವ ಸ್ವಭಾವ, ಮನೋಧರ್ಮ, ಅವರ ತತ್ವಾದರ್ಶಗಳು, ನಂಬಿಕೆ ಸಿದ್ಧಾಂತಗಳು, ಪ್ರತಿಭೆ, ಸಾಮರ್ಥ್ಯಗಳು, ಸಾಧನೆ, ಸಂಸ್ಕಾರಗಳು ಮನುಕುಲಕ್ಕೆ ಸಲ್ಲಿಸಿದ ಸೇವೆ, ಸಮಾಜ, ರಾಷ್ಟ್ರ ಹಿತಕ್ಕಾಗಿ ಮಾಡಿದ ತ್ಯಾಗ ಇವೆಲ್ಲವುಗಳಿಗೆ ಮುಗ್ಧರಾಗಿ ಅವರ ಬಗೆಗಿನ ಗೌರವ ಭಕ್ತಿ, ಶ್ರದ್ಧೆ, ಪ್ರೀತಿ, ಸ್ನೇಹ ಮೆಚ್ಚುಗೆಯ ಪ್ರತೀಕವಾಗಿ

ಸಿದ್ಧವಾದಂತಹವುಗಳೇ ಜೀವನ ಚರಿತ್ರೆಗಳು ಮತ್ತು ವ್ಯಕ್ತಿ ಚಿತ್ರಗಳು. ೧೯೧೧ರ ಸುಮಾರಿಗೆ ಜೀವನ ಚರಿತ್ರೆಗಳನ್ನು ಬರೆಯಲು ಆರಂಭಿಸಿ, ರಂಗಾಚಾರ್ಲು, ಗೋಪಾಲಕೃಷ್ಣ ಗೋಖಲೆ, ದಾದಾಬಾಯಿ ನವರೋಜಿ ಮೊದಲಾದವು ಇವುಗಳ ಜೊತೆಗೆ ವಿದ್ಯಾರಣ್ಯರ ಜೀವನ ಚರಿತ್ರೆಯನ್ನು ಬರೆಯುವ ಪ್ರಯತ್ನಗಳೂ ನಡೆದವು. ವಿದ್ಯಾರಣ್ಯರ ಬಗ್ಗೆ ಕೆಲವು ಲೇಖನಗಳನ್ನು ಬರೆದರು. ವಿದ್ಯಾರಣ್ಯರ ಸಮಕಾಲೀನರು ಎಂಬ ದೊಡ್ಡ ಗ್ರಂಥವನ್ನು ಬರೆದರು. ವಿದ್ಯಾರಣ್ಯ ವೃತ್ತಾಂತ ವಿದ್ಯಾರಣ್ಯರು ಮತ್ತು ಅವರ ಕಾಲ ಎಂಬೆರಡು ಬಿಡಿ ಲೇಖನಗಳಲ್ಲಿ ವಿದ್ಯಾರಣ್ಯರ ಕಾಲದ ಸ್ಥಿತಿಗತಿ, ವೇದಧರ್ಮದ ಪುನರುತ್ಥಾನದ ಅವಶ್ಯಕತೆ, ಅದಕ್ಕಾಗಿ ವಿದ್ಯಾರಣ್ಯರು ತಮ್ಮ ತಪಃಶಕ್ತಿಯನ್ನೆಲ್ಲ ಧಾರೆ ಎರೆದು ಸನಾತನ ಧರ್ಮ ಸಂಸ್ಕೃತಿಗಳನ್ನು ಕಾಪಾಡಿದ ಬಗೆ ಮೊದಲಾದ ಅಂಶಗಳನ್ನು ವಿವರಿಸಿದ್ದಾರೆ.

ಅವರ ಮಹತ್ವದ ಮತ್ತೊಂದು ಜೀವನ ಚರಿತ್ರೆ ಗೋಪಾಲಕೃಷ್ಣ ಗೋಖಲೆ ಅವರನ್ನು ಕುರಿತಾದ್ದು. ಗೋಖಲೆಯವರ ಮೇಲೆ ಡಿವಿಜಿ ಅವರಿಗೆ ಅಪಾರ ಗೌರವ. ಅವರ ಬಗ್ಗೆ ಬರೆಯುವುದೆಂದರೆ ರಾಷ್ಟ್ರಸೇವೆ ಮಾಡುತ್ತಿದ್ದೇನೆಂಬ ಭಾವ ಎನ್ನುತ್ತಾರೆ. ಡಿವಿಜಿ ಅವರು ಗೋಖಲೆ ಅವರನ್ನು ಕುರಿತು "ಇಂಡಿಯಾ ದೇಶದ ರಾಜ್ಯ ವ್ಯವಸ್ಥೆಯನ್ನು ಪರಿಶೋಧಿಸಿ ನೋಡಿ ಅದರಲ್ಲಿರುವ ನ್ಯೂನಾತಿರೇಕಗಳನ್ನು ತಿದ್ದಿ ಅದು ಪ್ರಜೆಗಳ ಯೋಗಕ್ಷೇಮಗಳನ್ನು ತೃಪ್ತಿಕರವಾಗಿ ಸಾಧಿಸಿಕೊಳ್ಳಲಾಗುವಂತೆ ಮಾಡಲು ಪ್ರಯತ್ನಿಸಿದವರಲ್ಲಿ ಗೋಖಲೆ ಅವರಿಗಿಂತಲೂ ಚತುರರೆಂದೂ ಸತ್ಯವ್ರತರೆಂದೂ, ಸಾತ್ವಿಕರೆಂದೂ ಸಮರ್ಥರೆಂದೂ ದೂರದರ್ಶಕರೆಂದೂ, ಧೈರ್ಯಶಾಲಿಗಳೆಂದೂ ವಿಶಾಲ ಹೃದಯರೆಂದೂ ಪರಿಶುದ್ಧ ಚರಿತರೆಂದೂ ಎನಿಸಿಕೊಂಡಿರತಕ್ಕವರು ಮತ್ಯಾರೂ ಇಲ್ಲ ಎಂಬ ಈ ಮಾತುಗಳೇ ಅವರ ಜೀವನ ಚರಿತ್ರೆಯ ಪುಟ ಪುಟಗಳಲ್ಲಿ ವಿಸ್ತೃತವಾಗಿ ವಿವರಣೆ ಗೊಂಡಿದೆ. ಅದೇ ರೀತಿಯಲ್ಲಿ ದಾದಾಬಾಯಿ ನವರೋಜಿಯವರು ಕೂಡಾ ಡಿವಿಜಿ ಅವರಿಗೆ ಆರಾಧ್ಯ ರಾಗಿದ್ದರು. ದಾದಾಬಾಯಿ ಅವರ ರಾಷ್ಟ್ರೀಯ ಪ್ರಜ್ಞೆ, ಉದ್ಯಮ ಪ್ರತಿಭೆ. ಸೂಕ್ಷ್ಮ ವಿಶ್ಲೇಷಣಾ ಸಾಮರ್ಥ್ಯ. ಬರೋಡಾದಲ್ಲಿ ದಿವಾನರಾಗಿ ಸಾಧಿಸಿದ ಸಾಧನೆಗಳು. ವಹಿಸಿಕೊಂಡ ಅಧಿಕಾರ ಸ್ಥಾನಗಳು. ಸಾರ್ವಜನಿಕ ಕ್ರಿಯಾಶೀಲತೆ ಮೊದಲಾದವುಗಳಿಗೆ ಮನಸೋತಿದ್ದ ಡಿವಿಜಿ ಅವರು. ತಾವು ಬರೆಯುತ್ತಿರುವ ಜೀವನ ಚರಿತ್ರೆಗಳ ಕಥಾನಾಯಕರುಗಳ ಬಗ್ಗೆ ಮೊದಲ ಸಂಕಲನದಲ್ಲಿ ಕವಿತಾ ಕುಸುಮಾಂಜಲಿಯನ್ನು ಅರ್ಪಿಸಿದ್ದಾರೆ. ಒಂದು ಕವಿತೆಯಲ್ಲಿ "ಪರಿಹಿತದೊಳೆ ತನ್ನ ಹಿತವ ಕಂಡವನೀತಂ" ಎಂದು ಗೋಖಲೆಯವರನ್ನು ಬಣ್ಣಿಸಿದರೆ, ದಾದಾಬಾಯಿ ನವರೋಜಿಯವರನ್ನು "ಪರಮಶುಭ ಚರಿತ್ರಂ ಭಾರತೀ ವೀರಪುತ್ರ । ಪರಹಿತಕರ ವೃತ್ತಂ ಸತ್ಯಮಾರ್ಗ ಪ್ರವೃತ್ತಂ ॥ ವಿರಚಿತ ಬಹುಪುಣ್ಯಂ ದೇಶಭಕ್ತ್ಯಾಗ್ರಗಣ್ಯಂ ಸ್ಫುರಿಕೆ ಮನದಿ ದಾದಾಭಾಯಿಯೆಂಬಾ ವರೇಣ್ಯಂ ॥ ಎಂದು ಗುಣಗಾನ ಮಾಡಿದ್ದಾರೆ. ಈ ಮಹಾನುಭಾವರದು ನಿರ್ಮಲ ಮನಸ್ಸು ನಿಸ್ಪೃಹ ಸೇವೆ. ಡಿವಿಜಿ ಅವರು ರಾಷ್ಟ್ರಿಕಧರ್ಮ ಪ್ರತಿಪಾದಕರಾಗಿದ್ದವರು. ಆದ್ದರಿಂದಲೇ ರಾಷ್ಟ್ರಕಧರ್ಮದ ಜೀವಂತ ಸಂಕೇತಗಳಂತೆ ಕಾಣುವ ಇಂತಹ ಮಹಾನುಭಾವರನ್ನು ಕೃತಿರಚನೆಯ ಮೂಲಕ ಸ್ಮರಿಸಿಕೊಂಡಿದ್ದಾರೆ; ತಮ್ಮ ಭಕ್ತಿ ಸಲ್ಲಿಸಿದ್ದಾರೆ.

ಇನ್ನುಳಿದವೆಂದರೆ ವ್ಯಕ್ತಿಚಿತ್ರಗಳು ವ್ಯಕ್ತಿ ಚಿತ್ರಗಳ ಬರಹದ ಹರವು ಬಹಳ ದೊಡ್ಡದು. ನೂರಾರು ಮಂದಿ ಅವರ ನೆನಪಿನಲ್ಲಿ ಸುಳಿದಾಡುತ್ತಾರೆ. ಜೀವನ ಚರಿತ್ರೆಗಳು, ತಾವು ಗೌರವಿಸುವವರು, ಭಕ್ತಿ ಶ್ರದ್ಧೆ ಇರಿಸಿದವರ ಸಮಗ್ರ ವ್ಯಕ್ತಿತ್ವದ (ಅಂತರ್ಬಾಹ್ಯ) ವಿಸ್ತೃತ ಚಿತ್ರಣಗಳಾದರೆ, ಅದೇ ಜಾತಿಗೆ ಸೇರಿದ ಆದರೆ ವ್ಯಕ್ತಿಗಳ ಪಾರ್ಶ್ವಿಕ ಮಗ್ಗುಲನ್ನು ಪರಿಚಯಿಸುವ ಬರವಣಿಗೆಯೇ ವ್ಯಕ್ತಿಚಿತ್ರಗಳಾಗುತ್ತವೆ. ವ್ಯಕ್ತಿಚಿತ್ರಗಳಾದರೂ ಸೃಜನ ಪ್ರತಿಭೆಯ ಸ್ಪರ್ಶ ಕುಂಚದಿಂದ ಕಲಾತ್ಮಕವಾಗಿ ಹೃದಯಂಗಮವಾಗಿ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ನೆನಪಿನ ಚಿತ್ರಗಳು ಅಥವಾ ಜ್ಞಾಪಕ ಚಿತ್ರಶಾಲೆ ಎಂಟು ಗ್ರಂಥಗಳ ಗುಚ್ಛವಾಗಿದೆ. ೧೯೬೯ ರಿಂದ ೧೯೭೪ರ ವರೆಗೆ ಪರಿಣತ ವಯಸ್ಸಿನಲ್ಲಿ ಬರೆದ ಕೃತಿಮಾಲೆ. ಅವರ ಅದ್ಭುತ ನೆನಪಿನ ಶಕ್ತಿಗೆ ಈ ಗ್ರಂಥಗಳುನಿದರ್ಶನ. ಡಿವಿಜಿ ಅವರು ತಮ್ಮ ಜೀವನಾವಧಿಯಲ್ಲಿ ಬೆಳೆಸಿಕೊಂಡ ಸ್ನೇಹ ಸಂಬಂಧಗಳು, ವೃತ್ತಿ ಸಂದರ್ಭದ ಪರಿಚಯಗಳು ಒಡನಾಟದ ಆತ್ಮೀಯ ನಂಟುಗಳು ಆಕಸ್ಮಿಕವಾಗಿ ಉಂಟಾಗಿರಬಹುದಾದ ಸಂಪರ್ಕಗಳು ತಾವು ಪ್ರತ್ಯಕ್ಷವಾಗಿ ಸಂಪರ್ಕ ಹೊಂದಿದ್ದ ವ್ಯಕ್ತಿಗಳು ಅವರೆಲ್ಲರ ಗುಣ ಸ್ವಭಾವಗಳು, ಆ ಜನರನ್ನು ಪ್ರಭಾವಿಸಿದ ಭಾವಾನುಭಾವಗಳು, ಕಂಡು ಕೇಳಿದ ಪ್ರಸಂಗಗಳು ಎಲ್ಲವೂ ನೆನಪಿನ ಮೂಲಕವೇ ಶಬ್ದಾಭಿವ್ಯಕ್ತಿಯನ್ನು ಪಡೆದಿವೆ. ಈ ವ್ಯಕ್ತಿಗಳು ಭಿನ್ನ ಭಿನ್ನ ಅಭಿರುಚಿ, ಪ್ರತಿಭೆ, ಸಾಮರ್ಥ್ಯಗಳನ್ನು ಉಳ್ಳವರು, ಬೇರೆ ಬೇರೆ ಕ್ಷೇತ್ರಗಳಲ್ಲಿ, ಅಧಿಕಾರ ಸ್ಥಾನಗಳಲ್ಲಿ ಇದ್ದವರು ಅಲ್ಲದೆ ಬೇರೆ ಬೇರೆ ಕಾಲಘಟ್ಟ, ಪರಿಸರ, ಸನ್ನಿವೇಶ ಸಂದರ್ಭಗಳಲ್ಲಿ ಜೀವಿಸಿದ್ದವರು. ಭಿನ್ನ ಭಿನ್ನ ಸಂಸ್ಕಾರಗಳಲ್ಲಿ ಬೆಳೆದವರು; ಹೀಗಾಗಿ ವ್ಯಕ್ತಿವಿವರಗಳ ಜೊತೆ ಜೊತೆಗೆ ಆಯಾಕಾಲದ ಜೀವನ ಮೌಲ್ಯಗಳು, ಐತಿಹಾಸಿಕ, ಸಾಂಸ್ಕೃತಿಕ ವಿವರಗಳೂ ಅಪಾರ ರಾಶಿಯಲ್ಲಿ ದೊರೆಯುತ್ತವೆ. ಡಿವಿಜಿ ಅವರ ಅನುಭವ ವೈಶಾಲ್ಯ ದಿಗ್ಭ್ರಮೆಗೊಳಿಸುವಂಥಾದ್ದು. ಅರಮನೆ ಗುರುಮನೆಗಳಿಂದ ಹಿಡಿದು ಪೇಟೆಗಲ್ಲಿಯ ಮುರುಕುಲು ಮನೆಯವರೆಗೆ, ದಿವಾನರುಗಳಿಂದ ಹಿಡಿದು ರಸ್ತೆಬದಿಯಲ್ಲಿ ಅನ್ನ ಬೇಯಿಸಿಕೊಳ್ಳುವ ದರಿದ್ರರವರೆಗೆ, ಮಠಾಧಿಪತಿಗಳಿಂದ ಹಿಡಿದು ಫಕೀರರವರೆಗೆ ರಾಜಕೀಯಗೊಂದಲ ಕೋಲಾಹಲದಿಂದ ಹಿಡಿದು ಸಾಂಸಾರಿಕ ಇರಿಸು ಮುರುಸುಗಳ ವರೆಗೆ ವೈದಿಕರಿಂದ ಹಿಡಿದು ತಾಫೆಯವರವರೆಗೆ ವಿದ್ವಾಂಸರಿಂದ ಹಿಡಿದು ಹಳ್ಳಿಮುಕ್ಕರ ವರೆಗೆ ಎಲ್ಲರೂ ಡಿವಿಜಿ ಅವರಿಗೆ ಪರಿಚಿತರೇ! ನೂರಾರು ವ್ಯಕ್ತಿಗಳನ್ನು ನೆನಪು ಮಾಡಿಕೊಂಡು ಬರೆಯುವುದೆಂದರೆ ಪವಾಡವೇ ಸರಿ. ಈ ಅಪಾರ ಸಂಖ್ಯೆಯ ವ್ಯಕ್ತಿಗಳ ಚಿತ್ರಣವನ್ನು 'ಸಾಹಿತಿ ಸಜ್ಜನ ಸಾರ್ವಜನಿಕರು' ಕಲೋಪಾಸಕರು, ಸಾಹಿತ್ಯೋಪಾಸಕರು, ಮೈಸೂರಿನ ದಿವಾನರುಗಳು ವೈದಿಕ ಸಂಪ್ರದಾಯಸ್ಥರು, ಹಲವಾರು ಸಾರ್ವಜನಿಕರು ಮತ್ತು ಹೃದಯಸಂಪನ್ನರು ಎಂಟನೆಯ ಸಂಪುಟ ೧ ಸಂಕೀರ್ಣ ಸ್ಮೃತಿ ಸಂಪುಟ ಡಿವಿಜಿ ಅವರ ನಿಧನಾನಂತರ ೧೯೭೭ರಲ್ಲಿ ಪ್ರಕಟವಾಯಿತು. ಈ ಬೃಹತ್ ಸಂಪುಟಗಳು ೨೦೪೬ ಪುಟಗಳನ್ನು ಒಳಗೊಂಡಿದ್ದು ಅವರ ಜೀವನ ಪೂರ್ಣಕಾಲದ ಸಾಧನೆಯಂತಿದೆ.

ವ್ಯಕ್ತಿಚಿತ್ರಗಳೆಂದಿದ್ದರೂ ಕೇವಲ ವ್ಯಕ್ತಿಗಳನ್ನೇ ಕುರಿತು ಬರೆದದ್ದಲ್ಲ. ತಾವು ಕಂಡು ಕೇಳಿದ್ದ ಪ್ರಸಂಗಗಳನ್ನು ವ್ಯಕ್ತಿಗಳನ್ನು ಸಂಸ್ಥೆಗಳನ್ನು ದಾಖಲಿಸಿದ್ದಾರೆ. ೭೦-೮೦ ವರ್ಷಗಳ

ಹಿಂದಿನ ಜನಜೀವನ, ಸಾರ್ವಜನಿಕ ಜೀವನ, ಇತ್ಯಾದಿ ಎಲ್ಲ ವಿವರಗಳೂ ಅವುಗಳ ಭಾಗವಾಗಿ ಬಂದಿವೆ. ಇವುಗಳಲ್ಲಿ ಅನೇಕವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಎಲ್ಲ ಬರಹಗಳಲ್ಲಿ ಡಿವಿಜಿ ಅವರ ಆತ್ಮೀಯತೆ, ಸ್ನೇಹ ಪ್ರಿಯತೆ, ಗುಣಗ್ರಾಹಿತ್ವ, ರಸಿಕತೆ, ವೈನೋದಿಕತೆ ಮೊದಲಾದ ಅಂಶಗಳು ಢಾಳಾಗಿ ಕಾಣಸಿಗುತ್ತವೆ. ಭೂತಕಾಲದ ಒಂದು ವಿಸ್ತೃತ ಪ್ರಪಂಚವೇ ನಮ್ಮ ಮುಂದೆ ತೆರೆದು ಕೊಳ್ಳುತ್ತದೆ. ಕೆಲವು ಚಿತ್ರಣಗಳು ಕಲಾತ್ಮಕತೆಯ ಸ್ಪರ್ಶದಿಂದ ಕಾಲ್ಪನಿಕ ಕಥೆಗಳಾಗಿಯೋ ಶಬ್ದ ಚಿತ್ರಗಳಾಗಿಯೋ ಕಾಣಿಸಿಕೊಳ್ಳುತ್ತವೆ. ನೀಲತ್ತಳಿಯವರು ಇವುಗಳನ್ನು ಕುರಿತು ಹೀಗೆ ಹೇಳುತ್ತಾರೆ. "ಇದೊಂದು ಯುಗ ಚಿತ್ರಣ. ಡಿವಿಜಿ ಅಂಥವರಿಂದ ಮಾತ್ರ ಸಾಧ್ಯ. ವ್ಯಾಸರು ಭಾರತದಲ್ಲಿ ಪಾರವಿಲ್ಲದ ಪಟದ ಮೇಲೆ ಸಾವಿರಾರು ವ್ಯಕ್ತಿಗಳ ಚಿತ್ರಗಳನ್ನು ಮೂಡಿಸಿದರು. ಲೋಕ ಜೀವನ ಸಮಷ್ಟಿಯನ್ನು ಚಿತ್ರಿಸಿದರು. ಇಹ–ಪರ ಎರಡನ್ನೂ ತೋರಿಸಿದರು. ಡಿವಿಜಿಯವರ ಜ್ಞಾಪಕ ಚಿತ್ರಶಾಲೆ ಆ ಚಿತ್ರಪಟದ ಹರಹನ್ನು ಆ ವಿಷಯ ವೈವಿಧ್ಯವನ್ನು ಆ ನಿರ್ಲಿಪ್ತತತೆಯನ್ನು ನೆನಪಿಗೆ ತರುತ್ತದೆ. ಇದು ಕತೆಗೆ ಕತೆ, ಇತಿಹಾಸಕ್ಕೆ ಇತಿಹಾಸ, ವರ್ಣನೆಗೆ ವರ್ಣನೆ. ವ್ಯಕ್ತಿ ಚಿತ್ರಕ್ಕೆ ವ್ಯಕ್ತಿ ಚಿತ್ರ" ಎಂದು ತುಂಬು ಅಭಿಮಾನದಿಂದ ಮಾತನಾಡುತ್ತಾರೆ. ಹಾ.ಮಾ. ನಾಯಕರಂತೂ ಇವುಗಳನ್ನು, "ಜ್ಞಾಪಕ ಚಿತ್ರಶಾಲೆ ಮಾಲೆಯ ಗ್ರಂಥಗಳು ಈ ಶತಮಾನದ ಕರ್ನಾಟಕದ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಚರಿತ್ರೆ, ಚರ್ಚೆಗಳಿಗೆ, ವಿಶೇಷವಾಗಿ ನೆರವಾಗಬಲ್ಲ ಆಕರಗಳು ಎಂದಿದ್ದಾರೆ. ಇಂಥ ಅದ್ಭುತ ಬರವಣಿಗೆಯ ಬಗ್ಗೆ ಡಿವಿಜಿ ಅವರು ಅತ್ಯಂತ ವಿನಯದೊಂದಿಗೆ ಇವುಗಳ ಇತಿಮಿತಿಗಳನ್ನು ವಿವರಿಸುತ್ತಾರೆ. "ಈ ಪ್ರಬಂಧಗಳು ಚರಿತ್ರೆಯಲ್ಲ ಇವು ಆಯಾ ಮಹನೀಯರ ಪಾರ್ಶ್ವರೇಖೆಗಳು ಇವು ಜೀವನ ಚರಿತ್ರಕಾರನಿಗೂ ದೇಶ ಚರಿತ್ರಕಾರನಿಗೂ ಅಷ್ಟಿಷ್ಟು ಉಪಯುಕ್ತವಾಗಬಹುದಾದ ಕಚ್ಚಾ ಸಾಮಗ್ರಿ" ಎಂದೇ ಹೇಳುತ್ತಾರೆ.

ಒಟ್ಟಾರೆಯಾಗಿ ವ್ಯಕ್ತಿ ಚಿತ್ರ ಪ್ರಬಂಧಗಳಲ್ಲಿ ಸರಳಗದ್ಯ, ಹೃದ್ಯ ನಿರೂಪಣೆ, ಸಮತೋಲನ ದೃಷ್ಟಿ, ಹಾಸ್ಯ, ವ್ಯಂಗ್ಯ, ಸೌಮ್ಯ ವಿಡಂಬನೆ. ಕಾವ್ಯ ಶಾಸ್ತ್ರಗಳಾದ ಉದ್ಧೃತಿಗಳು ಗಾದೆಗಳು ಇತ್ಯಾದಿ ಅಂಶಗಳಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಇವು ಅನನ್ಯ ಕೊಡುಗೆಯಾಗಿದೆ.

ಡಿವಿಜಿ ಅವರ ಉಳಿದ ಗದ್ಯ ಬರಹಗಳಲ್ಲಿ ಅಧ್ಯಾತ್ಮ ಸಂಬಂಧಿ ಕೃತಿಗಳು ಬಹಳ ಮುಖ್ಯ. ಮೊದಲಿನಿಂದಲೂ ಡಿವಿಜಿ ಅವರದು ಧಾರ್ಮಿಕ ಪ್ರವೃತ್ತಿ. ಲೌಕಿಕ ಬದುಕು ಹಸನಾಗುವುದೇ ಧಾರ್ಮಿಕ ಶ್ರದ್ಧೆ, ಭಕ್ತಿ. ಪರಮಾರ್ಥ ಚಿಂತನೆ, ದೇವರಲ್ಲಿನ ನಂಬಿಕೆ ಮುಂತಾದವುಗಳಿಂದ. ಮಠಮಾನ್ಯಗಳನ್ನು ಗುಡಿಗುಂಡಾರಗಳನ್ನು ಮೊದಲಿಗೆ ನಂಬದಿದ್ದರೂ ಒಂದು ಹಂತದಲ್ಲಿ ದೇವರು, ಆತ್ಮ, ಪರಮಾತ್ಮ, ಪರಮಾರ್ಥ, ತತ್ತ್ವಶಾಸ್ತ್ರ ಇತ್ಯಾದಿ ಅಧ್ಯಾತ್ಮ ಸಂಬಂಧಿ ವಿಚಾರಗಳಲ್ಲಿ ಆಸಕ್ತರಾಗಿ ವೇದೋಪನಿಷತ್ತು ಭಗವದ್ಗೀತೆ. ದರ್ಶನಗ್ರಂಥಗಳು ಇತ್ಯಾದಿಗಳ ಅಧ್ಯಯನ ಅನುಸಂಧಾನಗಳಿಗೆ ತೊಡಗಿ ಅವುಗಳ ಅರಿವಿನ ಹಿನ್ನೆಲೆಯಲ್ಲಿ ತಮ್ಮದೇ ಆದ ಚಿಂತನೆಗಳನ್ನು, ಜನಸಾಮಾನ್ಯರ ಅರಿವಿಗೆ ಸುಲಭವೆನಿಸುವಂತೆ ವ್ಯಾಖ್ಯಾನಗಳನ್ನು ಸಣ್ಣ ಸಣ್ಣ ಕೃತಿಗಳನ್ನು ಬರೆದರು. ಅವುಗಳಲ್ಲಿ ಬಹುಮುಖ್ಯವಾದುದೆಂದರೆ "ಜೀವನ ಧರ್ಮಯೋಗ" ಅಥವಾ ಭಗವದ್ಗೀತಾ

ತಾತ್ಪರ್ಯ. ಇದು ಡಿವಿಜಿ ಶಿಖರಕೃತಿ. ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತವಾದ ಮಹದ್ ಕೃತಿ. ಗಾತ್ರದಲ್ಲಿಯೂ ಬೃಹತ್ ಮೌಲ್ಯದಲ್ಲಿಯೂ ಮಹತ್. ಅನಾದಿ ಕಾಲದಿಂದ ಭಗವದ್ಗೀತೆಯ ಮೇಲೆ ಸಾವಿರಾರು ವ್ಯಾಖ್ಯಾನ ಗ್ರಂಥಗಳು ಬಂದಿವೆ. ಬರುತ್ತಲೇ ಇವೆ. ಎಲ್ಲ ಮತಗಳ ಮೂಲ ಚಿಂತನೆಗಳಿಗೂ ಇಲ್ಲಿ ಅವಕಾಶವಿದೆ. ಹಾಗಿದ್ದರೂ ಡಿವಿಜಿ ಅವರು ಭಗವದ್ಗೀತೆಯ ಕುರಿತೇ ಬರೆಯಲು ಹೋದದ್ದು ಏಕೆಂಬುದಕ್ಕೆ ಅವರೇ ಕೊಡುವ ಸಮರ್ಥನೆಯೆಂದರೆ, ಇಲ್ಲಿ ದ್ವೈತಾದ್ವೈತ, ವಿಶಿಷ್ಟಾದ್ವೈತ ಇತ್ಯಾದಿಗಳ ಪ್ರತಿಪಾದನೆ ಇಲ್ಲ. ಖಂಡನಮಂಡನವೂ ಇಲ್ಲ. ಬದಲಾಗಿ ಜೀವನೋಪಯೋಗಿ ಮಾರ್ಗದರ್ಶಕ ವಿಚಾರಗಳು ಸಮನ್ವಯ ಸಾಮರಸ್ಯಗಳ ಬದುಕಿನ ರೀತಿಯನ್ನು ವಿವರಿಸುತ್ತವೆ. ದಿನನಿತ್ಯದ ಬದುಕಿಗೆ ಸಹಾಯಕವಾಗುವಂತಹ ಸರಳ ತತ್ವಗಳ ಬೋಧನೆಯಿದೆ. ಆದ್ದರಿಂದ ಅವುಗಳನ್ನು ಗ್ರಹಿಸಿ, ಅರ್ಥಮಾಡಿಕೊಂಡು, ಲೋಕಸಾಮಾನ್ಯರಿಗೆ ಎಟುಕುವಂತೆ ಸರಳವಾದ ರೀತಿಯಲ್ಲಿ ಅದರ ಸಮಗ್ರ ಸಾರವನ್ನು ವಿವರಿಸುವ ಹಿನ್ನೆಲೆಯಲ್ಲಿ ಈ ಕೃತಿಯ ರಚನೆಗೆ ಮುಂದಾದರು. ಈ ಕೃತಿ ಒಂದು ತೂಕವಾದರೆ ಇದಕ್ಕೆ ಅವರು ನೀಡಿರುವ ಭೂಮಿಕೆ ೫೦ ಪುಟಗಳಷ್ಟು ವಿಸ್ತಾರವಾಗಿದ್ದು, ಕೃತಿಯೊಳಗಿನ ಹೂರಣದ ರುಚಿಯನ್ನು ಹತ್ತಿಸಿಬಿಡುತ್ತಾರೆ. ಈ ಭೂಮಿಕೆ ಭಾಗದಲ್ಲಿ ಗೀತೆ ಒಂದು ಜೀವನಶಾಸ್ತ್ರ, ಮೋಕ್ಷ ಶಾಸ್ತ್ರವಷ್ಟೇ ಅಲ್ಲ. ಸತ್ಯದ ಸಾವಿರನೋಟ, ಗ್ರಂಥದ ರಚನೆಯ ಸ್ವರೂಪ, ಅಧ್ಯಯನಕ್ಕೆ ಬೇಕಾದ ಅರ್ಹತೆ, ಮನೋಭಾವ ಕಾವ್ಯದೃಷ್ಟಿ, ಪುರುಷಾರ್ಥ ಕಲ್ಪನೆ, ಶ್ರದ್ಧೆಯ ಅಗತ್ಯ, ಸಮ್ಯಗ್ಜೀವನ ದರ್ಶನ – ಇತ್ಯಾದಿಗಳ ಸಾರವತ್ತಾದ ಪ್ರತಿಪಾದನೆಯಿದೆ. ೧೮ ಅಧ್ಯಾಯಗಳ ಅವಲೋಕನ, ಉಪಸಂಹಾರದಲ್ಲಿ ಇಡೀ ವ್ಯಾಖ್ಯಾನದ ಸಾರಾಂಶ, ೮ ಪರಿಶಿಷ್ಟಗಳಲ್ಲಿ ಮತತ್ರಯ ವಿಚಾರ, ಅಧ್ಯಾರೋಪ – ಅಪವಾದ, ಭಕ್ತಿ–ಜ್ಞಾನ–ಕರ್ಮ, ಮೋಕ್ಷ ಸುಖ ಇತ್ಯಾದಿ ವಿಷಯಗಳ ಚರ್ಚೆಯಿದೆ.

ಗೀತೆ, ಡಿವಿಜಿ ಅವರಿಗೆ ಎಲ್ಲ ಧರ್ಮಶಾಸ್ತ್ರ ಗ್ರಂಥಗಳು; ಮತ ಪ್ರತಿಪಾದಕ ಕೃತಿಗಳು ಮತ್ತು ಇತರೆ ಅಧ್ಯಾತ್ಮ ಸಂಬಂಧಿ ಕೃತಿಗಳು – ಇವೆಲ್ಲಕ್ಕಿಂತ ಆಪ್ತವೂ ಶ್ರದ್ಧಾತ್ಮಕವೂ ಆದದ್ದು. ಗೀತೆಯ ಅಂತಃ ಸತ್ವವನ್ನು, ಅದರ ಜೀವನ ಮೌಲಿಕತೆಯನ್ನೂ ಅರಿತವರು, ಅದರ ವ್ಯಾಖ್ಯಾನಕ್ಕೆ ಪ್ರೇರಣೆಯಾಗಲು ಅದನ್ನು ಅವರು ಗ್ರಹಿಸಿದ ರೀತಿ. ಅವರು ಗೀತೆಯ ಬಗ್ಗೆ ಹೀಗೆ ಹೇಳುತ್ತಾರೆ. "ಗೀತೆಯ ಮಹೋಪದೇಶವೆಂದರೆ ಜೀವನದಲ್ಲಿ ಗೌರವ, ಜೀವನವು ಬ್ರಹ್ಮಚೈತನ್ಯದ ಒಂದು ಲೀಲೆ. ಯಾವ ಪ್ರಾಣಿಯಾದರೂ ಎಂಥ ಪ್ರಾಣಿಯಾದರೂ ಅದರ ಅಂತರಂಗದ ಅಂತರಾಳದಲ್ಲಿ ಪರಬ್ರಹ್ಮಶಕ್ತಿಯ ಚೇತನಾಂಶ ವಿರುತ್ತದೆ. ಇದನ್ನು ನಾವು ಗ್ರಹಿಸಿ ಜೀವನ ಕಾರ್ಯಗಳನ್ನು ಶ್ರದ್ಧೆಯಿಂದಲೂ ದಕ್ಷತೆಯಿಂದಲೂ ನಿರ್ವಹಿಸಬೇಕಾದದ್ದು ಕರ್ತವ್ಯ. ಜೀವನವನ್ನು ತುಚ್ಛವೆನ್ನತಕ್ಕದ್ದಲ್ಲ ಅದು ಶ್ರೇಯೋವಕಾಶ ಮತ್ತು ಮಹಾಕರ್ತವ್ಯ. ಅದು ನಮ್ಮ ಆದರಣೆಗೂ ಸೇವೆಗೂ ಅರ್ಹವಾದದ್ದು. ಸ್ವಧರ್ಮದಲ್ಲಿ ಪವಿತ್ರಬುದ್ಧಿಯಿಂದಲೂ ಪಾರಮಾರ್ಥಿಕ ಶ್ರದ್ಧೆಯಿಂದಲೂ ತೊಡಗಬೇಕಾದುದು. ಸಮ್ಯಗ್ಜೀವನವೇ ಭಗವದಾರಾಧನೆ" ಈ ಮಾತುಗಳಿಂದ ಅವರ ಬದುಕಿನ ಬಗೆಗಿನ ತಾತ್ವಿಕ ನಿಲುವು ಏನೆಂಬುದು ಸ್ಪಷ್ಟವಾದೀತು.

ಗೀತೆಯ ಪ್ರತಿಯೊಂದು ಅಧ್ಯಾಯಕ್ಕೂ ತಮ್ಮದೇ ಆದ ಹೆಸರುಗಳನ್ನು ಕೊಟ್ಟಿದ್ದಾರೆ. ಪ್ರಾಕೃತ ಕಾರುಣ್ಯಯೋಗ. ತತ್ವವಿವೇಕಯೋಗ ಸ್ವಧರ್ಮಯೋಗ ಇತ್ಯಾದಿಯಾಗಿ. ಪ್ರತಿಯೊಂದು ಪ್ರಕರಣದಲ್ಲಿ ಮೊದಲು ಆ ಅಧ್ಯಾಯದ ಮೂಲ ಶ್ಲೋಕಗಳು. ಅಧ್ಯಾಯದ ವಿಷಯ ಸೂಚಕವಾದ ಒಂದು ಕನ್ನಡ ಕಂದಪದ್ಯ. ಅದರ ಗದ್ಯವಾಕ್ಯ. ನಂತರ ವ್ಯಾಖ್ಯಾನ. ಉಪಸಂಹಾರದಲ್ಲಿ ಇಡೀ ವ್ಯಾಖ್ಯಾನದ ಸಾರಾಂಶ.

ಆಧುನಿಕ ಯುಗದಲ್ಲಿ ಇಷ್ಟೊಂದು ವಿಪುಲವಾದ, ಲೌಕಿಕ ಪಾರಮಾರ್ಥಿಕ, ವೈಜ್ಞಾನಿಕ, ಜೀವನಾನುಭವ, ಶೀಲ ಚಾರಿತ್ರ್ಯ ಸಂಬಂಧವಾದ ಹತ್ತಾರು ವಿಷಯಗಳನ್ನು ಒಳಗೊಂಡು ಅವರು ಹೇಳುವ ಸಮ್ಯಗ್ಜೀವನಕ್ಕೆ ದಾರಿದೀಪವಾಗಬಲ್ಲ ಅತ್ಯಂತ ಗಂಭೀರವೂ ಅರ್ಥಪೂರ್ಣವೂ ಆದ ಕೃತಿ. 'ಜೀವನ ಧರ್ಮಯೋಗ'ವೆಂದರೆ ಅತಿಶಯೋಕ್ತಿಯಲ್ಲ. ಡಿವಿಜಿ ಅವರ ಅನ್ಯಾದೃಶ ಬದುಕಿನ, ಸಮಗ್ರ ಜೀವನ ಸಾಧನೆಯ ಫಲಶ್ರುತಿಯಾಗಿರುವ ಕೃತಿಯೇ ಇದಾಗಿದೆ. ಇದಲ್ಲದೆ ಇನ್ನೂ ಹಲವು ಧಾರ್ಮಿಕ ಕೃತಿಗಳನ್ನು ರಚಿಸಿದ್ದಾರೆ. ಬಾಳಿಗೊಂದು ನಂಬಿಕೆ. 'ಶ್ರೀಮದಾಂಜನೇಯಸ್ವಾಮಿ' ಪುರುಷ ಸೂಕ್ತ, ದೇವರು, ಋತ, ಸತ್ಯ, ಧರ್ಮ ಇತ್ಯಾದಿ. 'ಬಾಳಿಗೊಂದು ನಂಬಿಕೆ' ಕಗ್ಗದಲ್ಲಿ ಈಗಾಗಲೇ ಹೇಳಿರುವ ವಿಷಯಗಳ ಪುನರಾವರ್ತನೆ ಗದ್ಯದಲ್ಲಿದೆ. ಆಂಜನೇಯನ ಸ್ವಾಮಿನಿಷ್ಠೆ. ಕಾರ್ಯದಕ್ಷತೆ, ಅನಾಸಕ್ತತೆ, ನಿಸ್ವಾರ್ಥತೆಗಳಿಗೆ ಮತ್ತು ಅನನ್ಯವಾದ ರಾಮಭಕ್ತಿಗೆ ಮೆಚ್ಚಿದ ಡಿವಿಜಿ ಆತನ ಮೇಲಿದ್ದ ಭಕ್ತಿ ಅಭಿಮಾನಗಳ ಸಂಕೇತವಾಗಿ ಸ್ತೋತ್ರ ಪ್ರಾಯವಾದ ಕೃತಿಯನ್ನು ರಚಿಸಿದ್ದಾರೆ.

ಪುರುಷ ಸೂಕ್ತ ಈಶೋಪನಿಷತ್ತುಗಳು ಡಿವಿಜಿಯವರು ಮಾಡಿದ ಕನ್ನಡಾನುವಾದಗಳಾಗಿವೆ (ಅರ್ಥಾನುವಾದಗಳು)

'ದೇವರು' ಕೃತಿಯಲ್ಲಿ ದೇವರ ಅಸ್ತಿತ್ವ ಕುರಿತಾದ ಜಿಜ್ಞಾಸೆ ನಡೆದಿದೆ. ಡಿವಿಜಿ ಅವರಿಗೆ ದೇವರ ಇರುವಿಕೆಯಲ್ಲಿ ದೃಢವಾದ ವಿಶ್ವಾಸವಿದೆ. ನಾವಿರುವುದು ಸತ್ಯವಾದರೆ, ದೇವರು ಇರುವುದೂ ಅಷ್ಟೇ ಸತ್ಯವೆನ್ನುತ್ತಾರೆ. ಇನ್ನೂ ಮುಂದೆ ಹೋಗಿ ಇದರ ಬಗ್ಗೆ ಸಮರ್ಥನೆಯಾಗಿ ಕೆಲವು ವಿವರಗಳನ್ನು ನೀಡುತ್ತಾರೆ. "ದೇವರು ಇದ್ದಾನೆ. ಎಲ್ಲೆಲ್ಲೂ ಇದ್ದಾನೆ. ಎಲ್ಲ ಜಗತ್ತನ್ನೂ ಆಳುತ್ತಿದ್ದಾನೆ. ಜಗತ್ತು ಮತ್ತು ಅದರ ಆಳ್ವಿಕೆ ಆತನ ಲೀಲೆ. ಆತನ ಸ್ವತಂತ್ರವಾದ ಇಚ್ಛೆಯ ಕಾರ್ಯ. ಈ ಲೀಲೆಯಲ್ಲಿ ಆತನು ಕೆಲವು ಕ್ರಮ ನಿಯಮಗಳನ್ನು ಇರಿಸಿಕೊಂಡಿರುವಂತೆ ಕಾಣಬರುತ್ತದೆ. ಈ ಕ್ರಮನಿಯಮಗಳು ಪ್ರಕೃತಿ ಕಾರ್ಯದಲ್ಲಿ ಅಷ್ಟಷ್ಟು ಕಾಣಬರುತ್ತದೆ. ದೇವರ ಒಂದು ಅಂಶ ಜೀವಿಗಳಲ್ಲಿ ಅಡಗಿ ಕೊಂಡಿರುತ್ತದೆ.... ದೇವರ ಇಚ್ಛೆಯನ್ನು ಅರಿತುಕೊಂಡು ಅದರಂತೆ ನಡೆಯುವುದು ಪುಣ್ಯ. ಅದಕ್ಕೆ ವಿರೋಧವಾಗಿ ನಡೆಯುವುದು ಪಾಪ. ಪುಣ್ಯಕ್ಕೆ ಶುಭವನ್ನೂ ಪಾಪಕ್ಕೆ ದಂಡನೆಯನ್ನೂ ವಿಧಿಸುವುದು ದೈವದ ಅಧಿಕಾರ. ದೇವರು ಸಚ್ಚಿದಾನಂದ" – ಇದು ಡಿವಿಜಿ ಅವರು ದೇವರನ್ನು ಅರ್ಥೈಸಿಕೊಂಡ ಮತ್ತು ನಂಬಿಕೊಂಡ ಪರಿ. ಇಂತಹ ಶ್ರದ್ಧಾಮೂಲವಾದ ಗಾಢತಾತ್ವಿಕ ನಂಬಿಕೆಯೇ ಅವರ ಎಲ್ಲಾ ಬರಹಗಳಲ್ಲೂ ಅಂತರ್ನಿಹಿತವಾಗಿ ಕ್ರಿಯಾಶೀಲವಾಗಿದೆ.

ಸತ್ಯ–ಋತ–ಧರ್ಮ ಇವು ಮೂರೂ ಪರಿಕಲ್ಪನೆಗಳ ಅರ್ಥವಿವರಣೆ. ಪರಸ್ಪರ ಸಂಬಂಧ ಇತ್ಯಾದಿಗಳನ್ನು 'ಸತ್ಯ–ಋತ–ಧರ್ಮ' ಕೃತಿ ವಿವರಿಸುತ್ತದೆ. ಇದೊಂದು ವಿಚಾರ ಲಹರಿಯ ಅಭಿವ್ಯಕ್ತಿಯಾಗಿದೆ. ಅವರ ಪ್ರಕಾರ ಋತವೆನ್ನುವುದು ಸ್ವಭಾವ ಸಿದ್ಧವಾದ ಪ್ರಕೃತಿಸಿದ್ಧವಾದ ಒಂದು ನಡವಳಿಕೆ, ಕ್ರಮ. 'ಸತ್ಯ' ವಿಚಾರ ಸಿದ್ಧವಾದದ್ದು. ಸಮಾಜದ ಹೊರಜಗತ್ತನ್ನು ನೋಡಿ ಅದನ್ನು ಸ್ಥಿರಪಡಿಸಿಕೊಳ್ಳುವಂಥಾದ್ದು. ಈ ಸತ್ಯದ ಅನುಷ್ಠಾನವೇ ಧರ್ಮ. ಈ ವಿವರಗಳನ್ನೇ ಕೃತಿ ಇನ್ನಷ್ಟು ವಿಸ್ತೃತವಾಗಿ ಪ್ರಸ್ತುತಪಡಿಸುತ್ತದೆ. ಇವುಗಳ ಜೊತೆಗೆ 'ಸಂಸ್ಕೃತಿ' ಎಂಬ ಪುಟ್ಟ ಪುಸ್ತಕವೂ ಡಿವಿಜಿ ಅವರ 'ಸಂಸ್ಕೃತಿ' ಚಿಂತನೆಯ ಸ್ವರೂಪವನ್ನು ಕಟ್ಟಿಕೊಡುತ್ತದೆ. ಸಂಸ್ಕೃತಿ ವಿಚಾರವಾಗಿ ಆಲೋಚನೆ ಮಾಡುವಾಗ ಡಿವಿಜಿ ಅವರು ಮಾಥ್ಯೂ ಆರ್ನಾಲ್ಡ್, ನ್ಯೂಮನ್, ವಾಲ್ಮೀಕಿ ಮೊದಲಾದವರ ವಿಚಾರಗಳನ್ನೂ ಪ್ರಸ್ತಾಪಿಸುತ್ತಾರೆ. 'ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ ಎಂದು ವಿವರಿಸುತ್ತಾ "ದೈವ, ಮತ, ಧರ್ಮ ಸಾಹಿತ್ಯಾದಿ, ಪರಿಸರಕಲೆ, ವಿಜ್ಞಾನ, ದೇಶ ವಿದೇಶ ಚರಿತ್ರೆ ಮತ್ತು ಮಹಾಪುರುಷರ ವೃತ್ತಾಂತ, ಸ್ವಸಮಾಜ ಪ್ರಭಾವ, ಮನುಷ್ಯನ ಅಂತರಂಗದ ಆತ್ಮಪರಿಶೋಧನೆ, ಆತ್ಮಸಂಯಮ ಇವು ಆರು ಸಂಸ್ಕೃತಿಯ ಮೂಲಸ್ಥಾನಗಳೆಂದು ಗುರುತಿಸುತ್ತಾರೆ.

ಡಿವಿಜಿ ಅವರ ಬಹುಮುಖತೆಗೆ, ಸೃಜನಶೀಲತೆಗೆ ಹಲವು ಪರಿವುಗಳುಂಟು. ಸೃಜನಶೀಲ ಸಾಹಿತ್ಯದ ಜೊತೆಗೆ, ಅದಕ್ಕೆ ಸಂಬಂಧಪಟ್ಟಂತೆ ಸಾಹಿತ್ಯ ವಿಮರ್ಶೆ, ಸಾಹಿತ್ಯತತ್ವ ಸಾಹಿತ್ಯ ಸಂಘಟನೆ, ಸಾಹಿತ್ಯ ಪ್ರಸಾರ ಇತ್ಯಾದಿಗಳನ್ನೂ ಕುರಿತು ನಡೆಸಿದ ಚಿಂತನೆಗಳ ಫಲವಾಗಿ ಸಾಹಿತ್ಯಶಕ್ತಿ, ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಸ್ವಾರಸ್ಯ ಇತ್ಯಾದಿ ಪ್ರಬಂಧ ಸಂಕಲನಗಳು ಅವರ ಸಾಹಿತ್ಯ ಮೀಮಾಂಸೆಯ ನಿಲುವುಗಳನ್ನು ಕಾಣಿಸುತ್ತದೆ.'

ಸಾಹಿತ್ಯಶಕ್ತಿ ಕೃತಿ ಹನ್ನೆರಡು ಪ್ರಬಂಧಗಳನ್ನು ಒಳಗೊಂಡಿದ್ದು ಆಧುನಿಕ ವಿಚಾರೋಪನ್ಯಾಸ, ನೂತನ ಸಾಹಿತ್ಯ ರಚನೆ, ಭಾಷೆಯ ನವೀಕರಣ, ನವ್ಯತೆಯ ಜೀವನ, ವಿಜ್ಞಾನ–ಲೋಕಪರಿಜ್ಞಾನ, ಉಪಾಧ್ಯಾಯ, ಪಂಡಿತರು, ಕಾವ್ಯದಲ್ಲಿ ಜೀವನತತ್ವ ದರ್ಶನ ಕಾವ್ಯೋಪಾಸನೆ – ಇತ್ಯಾದಿಗಳನ್ನು ಕುರಿತು ಚರ್ಚಿಸುತ್ತವೆ. ಕಾವ್ಯೋಪಾಸನೆ ಪ್ರಬಂಧ ದಲ್ಲಿಯಂತೂ ಆ ಕಾವ್ಯದ ಅಂಗೋಪಾಂಗಗಳನ್ನು ಇಲ್ಲವೆ ಪರಿಕರಗಳನ್ನು ಕುರಿತು ವಿಸ್ತೃತವಾದ ವಿವರಣೆಯಿದೆ. ರಸ, ಧ್ವನಿ, ಅಲಂಕಾರ, ಔಚಿತ್ಯ, ಛಂದಸ್ಸು ಇತ್ಯಾದಿಗಳನ್ನು ಭಾರತೀಯ ಪ್ರಾಚೀನ ಕಾವ್ಯಮೀಮಾಂಸಕರ ಮೀಮಾಂಸೆಯ ಬೆಳಕಿನಲ್ಲಿ ತಮ್ಮದೇ ಕೆಲವು ಚಿಂತನೆಗಳನ್ನು ಹೊಸ ಸ್ಪರ್ಶದೊಂದಿಗೆ ಮಂಡಿಸುತ್ತಾರೆ. ಕಾವ್ಯದಲ್ಲಿ ರಸವೇ ಪ್ರಧಾನ. ಅದು ಹೃದಯಕ್ಕೆ ಸಮೀಪ ಕಾವ್ಯವನ್ನು ಕಾವ್ಯ ಪೀಯೂಷವೆಂದು ವಿವರಿಸುತ್ತಾರೆ. ಉಳಿದ ಕೃತಿಗಳಲ್ಲಿ ಇಂದು ನಾವು ಸಾಹಿತ್ಯವನ್ನು ಅನ್ಯಶಿಸ್ತುಗಳೊಂದಿಗೆ ಹೊಂದಿಸಿ ಅಧ್ಯಯನ ಮಾಡುವಂತೆ, ಡಿವಿಜಿ ಅವರೂ ಸಾಹಿತ್ಯವನ್ನು ವಿಜ್ಞಾನ, ಜನಜೀವನ, ಸೌಂದರ್ಯ ಇತ್ಯಾದಿಗಳ ಜೊತೆಗೂಡಿಸಿ ಅವುಗಳ ನಡುವಿನ ಸಂಬಂಧಗಳನ್ನು ಚರ್ಚಿಸುತ್ತಾರೆ.

ಸೌಂದರ್ಯಗಳ (ವೈವಿಧ್ಯಮಯ) ನಡುವಿನ ತಾರತಮ್ಯ ಯೋಗ್ಯತೆಗಳನ್ನು ತಿಳಿದು ಅವನ್ನು ನಮ್ಮ ಜೀವನಕ್ಕೆ ಅಳವಡಿಸಿಕೊಳ್ಳುವುದೇ ಧರ್ಮರಹಸ್ಯ. ಸೌಂದರ್ಯವನ್ನು ಅಲ್ಲಗಳೆಯುವುದಲ್ಲ. ಈ ರಹಸ್ಯವನ್ನು ಬಿಚ್ಚಿ ತೋರಿಸಲು ಉತ್ತಮ ಕಾವ್ಯವೊಂದೇ ಸಾಧಾರಣ ಮಾನವರಿಗಿರುವ ಸಾಧನೆ ಎಂದು ಸೌಂದರ್ಯ ತತ್ವದ ಹಿರಿಮೆಯನ್ನು ಎತ್ತಿ ಹಿಡಿಯುತ್ತಾರೆ. ಹಾಗೆಯೇ ರಸದ ಬಗ್ಗೆ, ಛಂದಸ್ಸಿನ ಬಗ್ಗೆ, ಅಲಂಕಾರಗಳ ಬಗ್ಗೆ ಅನೇಕ ಉದಾಹರಣೆಗಳೊಂದಿಗೆ ವಿವರಿಸುತ್ತಾರೆ.

ಡಿವಿಜಿ ಅವರು ರಾಜಭಕ್ತರೂ ಹೌದು ರಾಷ್ಟ್ರಭಕ್ತರೂ ಹೌದು. ಪತ್ರಿಕೋದ್ಯಮದಲ್ಲಿ ತೊಡಗಿಸಿಕೊಂಡಿದ್ದ ಕಾಲದಲ್ಲಿಯೇ ಅನೇಕ ಕಾರಣಗಳಿಂದಾಗಿ ರಾಜಕಾರಣಿಗಳ ರಾಷ್ಟ್ರಭಕ್ತರ ರಾಜಕೀಯ ಚಿಂತಕರ ಸ್ನೇಹ, ಸಂಪರ್ಕಗಳಿಂದಾಗಿ ರಾಜ್ಯಶಾಸ್ತ್ರ ಸಂಬಂಧ ವಿಚಾರಗಳಲ್ಲಿ ಆಸಕ್ತಿ ಮೂಡಿಸಿಕೊಂಡಿದ್ದರು. ಒಂದು ಕಡೆ ಮೈಸೂರು ಸಂಸ್ಥಾನದ ದಿವಾನರುಗಳ ಸಾಹಚರ್ಯ ಮತ್ತೊಂದು ಕಡೆ ಸ್ವಾತಂತ್ರ್ಯ ಹೋರಾಟದ ಪರಿಸರ, ಹೋರಾಟದ ಮುಂಚೂಣಿಯಲ್ಲಿದ್ದ ರಾಷ್ಟ್ರಾಭಿಮಾನಿಗಳ, ರಾಷ್ಟ್ರಭಕ್ತರ ಮಹಾನ್ ನಾಯಕರ ಪ್ರತ್ಯಕ್ಷ, ಪರೋಕ್ಷ ಪರಿಚಯ, ವಿಸ್ತೃತವಾದ ಓದು, ರಾಜಕೀಯ ಮುತ್ಸದ್ದಿ ಗಳೆನಿಸಿಕೊಂಡಿದ್ದ ರಾಜಾಜಿ, ಗೋಪಾಲಕೃಷ್ಣ ಗೋಖಲೆ, ಗಾಂಧೀಜಿ ಮುಂತಾದವರು ಪ್ರತಿಪಾದಿಸುತ್ತಿದ್ದ ರಾಜಕೀಯ ವಿಚಾರಧಾರೆ ಇವೆಲ್ಲವುಗಳ ಪ್ರಭಾವ, ಸ್ವತಃ ರಾಜ್ಯಶಾಸ್ತ್ರದಲ್ಲಿ ರೂಢಿಸಿಕೊಂಡಿದ್ದ ಆಸಕ್ತಿ ರಾಜ್ಯಶಾಸ್ತ್ರದ ಬಗ್ಗೆ ಬರೆಯಲು ಅವರಿಗೆ ಪ್ರೇರಣೆಯಾಯಿತು. ವಾಸ್ತವವಾಗಿ ರಾಜ್ಯಶಾಸ್ತ್ರ ಒಂದು ಪುಸ್ತಕವಲ್ಲ; ಒಂದೇ ಸಲ ಬರೆದದ್ದೂ ಅಲ್ಲ – ಹಲವಾರು ಪ್ರಸಂಗಗಳಲ್ಲಿ ತಯಾರಾದ ಬೇರೆ ಬೇರೆ ಪ್ರಕರಣಗಳ ಒಟ್ಟು ಸಮುಚ್ಚಯ ವಾಗಿದೆ. ರಾಜಕೀಯ ವಿಚಾರ. ಚಿಂತನೆಗಳಿಗೆ ಸಂಬಂಧಪಟ್ಟಂತೆ ಅನೇಕ ಕಿರು ಹೊತ್ತಿಗೆಗಳನ್ನು ಬರೆದಿದ್ದು, ರಾಜಶಾಸ್ತ್ರ ಸಂಪುಟವಾಗಿ ಪ್ರಕಟವಾಗಿದೆ. ಸ್ವರಾಜ್ಯ, ರಾಜ್ಯಾಂಗ ತತ್ವಗಳು ರಾಜಕೀಯ ಪ್ರಸಂಗಗಳು (೨ ಭಾಗಗಳಲ್ಲಿ) ರಾಜ್ಯ ಕುಟುಂಬ ಇಂಡಿಯಾದ ಭಾಷಾ ಪ್ರಶ್ನೆ, ಇಂಗ್ಲಿಷಿನ ಸ್ಥಾನ ಇತ್ಯಾದಿ ವಿಷಯ ಕೇಂದ್ರೀತ ಪ್ರಬಂಧಗಳು, ಕಿರುಹೊತ್ತಿಗೆಗಳು ಎಲ್ಲವೂ ಜೊತೆಗೂಡಿ, ಡಿವಿಜಿ ಅವರ ರಾಜಕೀಯ ದೃಷ್ಟಿ, ದರ್ಶನಗಳನ್ನು ಓದುಗರಿಗೆ ಕಟ್ಟಿಕೊಡುತ್ತವೆ. ಅಲ್ಲದೆ ರಾಜ್ಯಶಾಸ್ತ್ರ ವಿಷಯ ಗ್ರಂಥ ರಚನೆಯ ಹಿಂದೆ ಒಂದು ಪ್ರಬಲವಾದ ಉದ್ದೇಶವಿರಿಸಿಕೊಂಡಿದ್ದರು. ಸ್ವಾತಂತ್ರ್ಯ ಬರುವ ಕ್ಷಣಗಳಲ್ಲಿ, ಸ್ವಾತಂತ್ರ್ಯ ಬಂದರಷ್ಟೇ ಸಾಲದು. ಅದನ್ನು ಸರಿಯಾಗಿ ಬಳಸಿಕೊಳ್ಳುವ ಬುದ್ಧಿವಂತಿಕೆಯೂ ಜನರಲ್ಲಿರಬೇಕು. ಅದಕ್ಕಾಗಿ ರಾಜಕೀಯ ಕುರಿತು ಜನರಿಗೆ ತಿಳಿವಳಿಕೆ ನೀಡುವುದು ಅನಿವಾರ್ಯವೆನಿಸಿ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು, ಅವುಗಳಿಗೆ ಸಿಕ್ಕ ಪ್ರೋತ್ಸಾಹ, ಮೆಚ್ಚುಗೆಗಳಿಂದ ರಾಜ್ಯಶಾಸ್ತ್ರ ಕುರಿತು ಪುಸ್ತಕ ಬರೆಯಬೇಕೆಂದು ಹೊರಟವರು. ಬರವಣಿಗೆಗೆ ಮುಂದಾಗುವ ಮೊದಲೇ ಪ್ಲೇಟೋ, ಅರಿಸ್ಟಾಟಲ್ ಬಲ್ಕ್, ಮಿಲ್, ಮೊರ್ಲೆ, ಡೈಸಿ, ಲ್ಯಾಸ್ಕಿ ಮೊದಲಾದವರ ಗ್ರಂಥಗಳನ್ನು ಓದಿದ್ದರಾದರೂ ಅವುಗಳನ್ನು ಅರ್ಥೈಸಿಕೊಳ್ಳಲು ಕ್ಲಿಷ್ಟವಾಗಿತ್ತು. ಆದರೆ ಅವರ ವಿಚಾರಗಳಿಂದ ಪ್ರೇರಿತವಾದರೂ ನಮ್ಮ ಭಾರತೀಯ ಪರಂಪರೆಯಲ್ಲಿಯೇ ಕೌಟಿಲ್ಯನ ಅರ್ಥಶಾಸ್ತ್ರ ವಿದ್ಯಾರಣ್ಯರ ರಾಜಕೀಯ

ವಿಚಾರಗಳು ಎಲ್ಲವೂ ಅವರನ್ನು ರಾಜಕೀಯ ಗಂಭೀರ ಚಿಂತನೆಗಳನ್ನು ಸ್ವೋಪಜ್ಞ ನೆಲೆಯಿಂದ ಮಾಡುವ ಒತ್ತಾಯಕ್ಕೆ ದೂಡಿತ್ತು. ಮುಖ್ಯವಾಗಿ ಪ್ಲೇಟೋವಿನ ರಿಪಬ್ಲಿಕ್ ಮತ್ತು ಕೌಟಿಲ್ಯನ ಅರ್ಥಶಾಸ್ತ್ರಗಳನ್ನು ತುಂಬ ಆಳವಾಗಿ ಅಧ್ಯಯನ ಮಾಡಿದ್ದರು. ಪಾಶ್ಚಾತ್ಯ ಚಿಂತಕರಲ್ಲಿನ ಕೆಲವು ಅಮೂಲ್ಯ ಚಿಂತನೆಗಳ ಜೊತೆಗೆ ತಮ್ಮದೇ ಆದ ಕೆಲವು ವಿಚಾರಗಳನ್ನು ಅವುಗಳಿಗೆ ಸಮೀಕರಿಸಿಯೋ, ವಿಶಿಷ್ಟವೆನ್ನುವಂತೆ ಪೃಥಕ್ಕರಿಸಿಯೋ, ಕೃತಿಯಲ್ಲಿ ವಿವರಿಸಿದ್ದಾರೆ. ವಿಚಾರಗಳ ವಿವರಣೆ, ವಿಶ್ಲೇಷಣೆಯ ರೀತಿ ಹೇಗೇ ಇರಲಿ, ಅವುಗಳ ಮೂಲ ಉದ್ದೇಶ, ಎಲ್ಲ ಬರಹಗಳ ಹಿಂದೆ ಇರುವಂತೆ, ಸಾಮಾನ್ಯ ಜನರ ತಿಳಿವಳಿಕೆಗೆ ದಕ್ಕುವಂತಿರಬೇಕು ಎಂಬುದು. ರಾಜ್ಯಶಾಸ್ತ್ರ ಕೃತಿ ಕೇವಲ ಭಾರತಕ್ಕೆ ಸಂಬಂಧ ಪಟ್ಟದ್ದಷ್ಟೇ ಅಲ್ಲ. ವಿಷಯಗಳನ್ನು ವಿವರಿಸುವಾಗ ವಿಶ್ವದ ಅನ್ಯ ರಾಷ್ಟ್ರಗಳ ರಾಜಕೀಯ ಇತಿಹಾಸವನ್ನೂ ರಾಜ್ಯಾಂಗ ವ್ಯವಸ್ಥೆಯ ಸ್ವರೂಪವನ್ನೂ ಹೋಲಿಸಿ ಬರೆಯುತ್ತಾರೆ. ರಾಜಕೀಯ ವಿಷಯಗಳ ಸಂಬಂಧವಾಗಿ ಸ್ಪಷ್ಟವಾದ ನಿಲುವುಗಳನ್ನು ಇರಿಸಿ ಕೊಂಡಿದ್ದರು. ರಾಜ್ಯ, ದೇಶ ಅವರ ದೃಷ್ಟಿಯಲ್ಲಿ ಒಂದೇ ಅಲ್ಲ. ರಾಜ್ಯವೆಂಬುದು ಜನತೆಯ ವಿಭಾಗ, ದೇಶವೆಂಬುದು ಭೂಮಿಯ ವಿಭಾಗ ಎಂದು ಅರ್ಥೈಸುತ್ತಲೇ ಭರತಖಂಡದ ಇತಿಹಾಸದ ಪ್ರಸ್ತಾಪವನ್ನೂ ಮಾಡುತ್ತಾರೆ. ಬ್ರಿಟಿಷರಿಂದ ಆದ ಉಪಕಾರ, ಸ್ವರಾಜ್ಯ ವೆಂದರೇನು, ರಾಜ್ಯದ ರಚನೆ, ಪ್ರಜಾಸ್ವಾಮ್ಯ, ಸ್ವಾತಂತ್ರ್ಯ, ಸಮತ್ವ-ಧರ್ಮ, ಸ್ವಾತಂತ್ರ್ಯ ದಿಂದ ಏನು ಅನುಕೂಲ, ಪ್ರಜಾವ್ಯಕ್ತಿ ಸ್ವಾತಂತ್ರ್ಯ, ಪ್ರಜಾರಾಜ್ಯಕ್ಕಿರುವ ಅಪಾಯಗಳು ಹೀಗೆ ಅನೇಕ ಉಪಶೀರ್ಷಿಕೆಗಳಡಿಯಲ್ಲಿ ರಾಜ್ಯಶಾಸ್ತ್ರದ ಸಮಗ್ರ ಆಯಾಮಗಳನ್ನು ಕುರಿತು ಸತರ್ಕರಾಗಿ ವಿವರಿಸುತ್ತಾರೆ. ನಮ್ಮನ್ನು ಗುಲಾಮಿತನಕ್ಕೆ ದೂಡಿದವರು ಬ್ರಿಟಿಷರೇ ಆದರೂ ಬ್ರಿಟಿಷರಿಂದ ನಮಗೆ ಆಗಿರುವ ಹಲವು ರೀತಿಯ ಉಪಕಾರಗಳನ್ನು ಸ್ಮರಿಸಿಕೊಳ್ಳುತ್ತಾರೆ. ಐಕ್ಯತೆ, ವಿಚಾರಪರತೆ, ವೈಜ್ಞಾನಿಕ ದೃಷ್ಟಿ, ಸಂಚಾರ ಸೌಲಭ್ಯ, ಯಂತ್ರ ಸಾಮಗ್ರಿ ಶೈಕ್ಷಣಿಕ ಜಾಗೃತಿ ಇತ್ಯಾದಿಗಳಿಗೆ ಬ್ರಿಟಿಷರೇ ಕಾರಣರೆನ್ನುತ್ತಾರೆ.

ಪ್ರಜಾವ್ಯಕ್ತಿ ಸ್ವಾತಂತ್ರ್ಯ ಪ್ರಕರಣದಲ್ಲಿ ಸ್ವಾತಂತ್ರ್ಯವನ್ನು ಹೀಗೆ ವಿವರಿಸುತ್ತಾರೆ. "ಸ್ವಾತಂತ್ರ್ಯ ವೆಂಬುದು ಒಂದು ಅಖಂಡ ತತ್ವ; ಅದನ್ನು ತುಂಡು ತುಂಡು ಮಾಡಿರಿಸಲಾಗುವುದಿಲ್ಲ." ಎಂದು ಆದರೆ ಒಬ್ಬರ ಸ್ವಾತಂತ್ರ್ಯ ಮತ್ತೊಬ್ಬರ ಸ್ವಾತಂತ್ರ್ಯಕ್ಕೆ ಅಡ್ಡಿ ಬಾರದಂತಿರಬೇಕು ಎಂದು ಹೇಳುವುದನ್ನು ಮರೆಯುವುದಿಲ್ಲ. ರಾಜ್ಯಶಾಸ್ತ್ರ ಕೃತಿಯ ಮುಖ್ಯ ಪ್ರಕರಣವಾದ 'ರಾಮರಾಜ್ಯ' ಎಂಬಲ್ಲಿ "ಮನುಷ್ಯ ಜೀವನವೇ ರಾಜ್ಯಕ್ಕೆ ಆರಾಧ್ಯದೈವ. ಜೀವನದ ಸತ್ವಾಭಿವೃದ್ಧಿಯಿಂದಲೇ ರಾಜ್ಯಕ್ಕೆ ಸಾರ್ಥಕತೆ. ಜೀವನವನ್ನು ಪುಷ್ಟಿಗೊಳಿಸಿ ಶೋಭಾಯಮಾನ ಮಾಡಿಸುವುದೇ ರಾಜಕೀಯಸ್ಥನ ಪರಮಕರ್ತವ್ಯ. ಅವನ ಯೋಗ್ಯತೆಗೆ ಜನಜೀವನದ ಸ್ಥಿತಿಯೇ ಒರೆಗಲ್ಲು" ಎಂಬ ಮಾತುಗಳು ಒಂದು ರಾಜ್ಯ ವ್ಯವಸ್ಥೆಯಲ್ಲಿ ಪ್ರಜಾಜನರ ಪಾತ್ರ ಎಷ್ಟು ದೊಡ್ಡದು ಎಂದು ತೋರಿಸಿಕೊಡುತ್ತಾರೆ. ಒಂದು ರಾಜ್ಯದ ಜನರ ಅಭಿವೃದ್ಧಿಯ ಆಧಾರದ ಮೇಲೆ ಜನಜೀವನದ ಔನ್ನತ್ಯದ ಮೇಲೆ ರಾಜ್ಯದ ಸ್ಥಿತಿ ಅಥವಾ ಪ್ರಗತಿಯನ್ನು ಊಹಿಸಬಹುದೆನ್ನುವುದು ಇವರ ಮಾತಿನ ಧೋರಣೆ, ಪ್ರಜೆಗಳ ಕ್ಷೇಮವೇ ರಾಜ್ಯ ರಾಷ್ಟ್ರ ಕಲ್ಯಾಣಕ್ಕೆ ನಿದರ್ಶನ. ವಾಲ್ಮೀಕಿ ಚಿತ್ರಿಸುವ

ರಾಮರಾಜ್ಯವೆಂದರೆ ಸಕಲ ವಿಧದಲ್ಲಿಯೂ ಸುಖೀ ರಾಜ್ಯವೆಂದೇ ಅರ್ಥ. ಇಂತಹ ಸುಖೀ ರಾಜ್ಯಕ್ಕೆ ಧರ್ಮದ ತಹದಿ ಬೇಕು. ಏಕೆಂದರೆ ಬದುಕಾಗಲೀ ರಾಜ್ಯಾಡಳಿತವಾಗಲಿ ಧರ್ಮ ಸಂಯಮಿತವಾದಲ್ಲಿ ಆದರ್ಶಪ್ರಾಯವೆನಿಸಿಕೊಳ್ಳುತ್ತದೆ. ಅಲ್ಲದೆ ಧರ್ಮ ರಾಜ್ಯಕ್ಕಿಂತ ದೊಡ್ಡದು. ಧರ್ಮದ ಒಂದು ಭಾಗವೇ ರಾಜ್ಯ. ರಾಜ್ಯಶಾಸ್ತ್ರ ಧರ್ಮಶಾಸ್ತ್ರಗಳು ಬೇರೆ ಬೇರೆಯಲ್ಲ... ಧರ್ಮವಿಲ್ಲದ ರಾಜಕೀಯ ಸಾಧ್ಯವೇ ಇಲ್ಲ. ಆದರೆ ಅವೆರಡರ ಸಮನ್ವಯ ಹೇಗಾಗಬೇಕೆಂಬುದೇ ಸಮಸ್ಯೆ. ಶುಷ್ಕವೂ ನೀರಸವೂ ಆಗಿರುವಂತಹ ರಾಜ್ಯಶಾಸ್ತ್ರ ಡಿವಿಜಿ ಅವರನ್ನು ಆಕರ್ಷಿಸಿದ್ದು, ಕೃತಿ ರಚನೆಗೆ ಪ್ರಚೋದಿಸಿದ್ದೂ ಕೂಡಾ ಒಂದು ಆಶ್ಚರ್ಯವೇ.

ರಾಜ್ಯರಚನೆ ಅಥವಾ ರಾಜ್ಯದ ಉಗಮದ ಬಗ್ಗೆ ಡಿವಿಜಿ ಸರಳವಾದ ವಿವರಣೆ ನೀಡುತ್ತಾರೆ. "ಎಂದು ಇಬ್ಬರು ಮನುಷ್ಯ ಜೀವಿಗಳು ಒಂದು ಕಡೆ ಸೇರಿ ಒಟ್ಟಿಗೆ ಬಾಳಬೇಕೆಂದು ನಿಶ್ಚಯಿಸಿಕೊಂಡರೋ ಅಂದು ರಾಜ್ಯದ ಅಂಕುರಾರ್ಪಣೆಯಾಯಿತು. ಎಲ್ಲಿ ಸಂಸಾರ ಹುಟ್ಟಿತೋ ಅಲ್ಲಿ ರಾಜ್ಯ ಹುಟ್ಟಿತು." ಎನ್ನುತ್ತಾರೆ.

ರಾಜ್ಯವ್ಯವಸ್ಥೆ ಅಥವಾ ರಾಜ್ಯಸಂಸ್ಥೆ ಎನ್ನುವುದು, ಜನರ ಸ್ವೇಚ್ಛಾಪ್ರವೃತ್ತಿಯನ್ನು ತಡೆದು ಒಂದು ನ್ಯಾಯದ ಹದ್ದುಬಸ್ತಿನಲ್ಲಿ ನಿಲ್ಲಿಸುವುದಕ್ಕೋಸ್ಕರ ಏರ್ಪಟ್ಟದ್ದು ಎಂಬುದು ಡಿವಿಜಿ ಅವರ ಅಭಿಪ್ರಾಯ.

ಇನ್ನೊಂದು ಪ್ರಕರಣದಲ್ಲಿ ಸ್ವಾತಂತ್ರ್ಯದ ಅರ್ಥವನ್ನು ವಿವರಿಸುತ್ತಾ ಯಾವುದನ್ನು ನಾವು ನಮ್ಮ ಸಂವಿಧಾನದಲ್ಲಿ ಹಕ್ಕುಗಳಡಿಯಲ್ಲಿ ಕಾಣಿಸಿದ್ದೇವೆಯೋ ಅದನ್ನೇ ಡಿವಿಜಿ ಅವರು ಹಲವು ಬಗೆಯ ಸ್ವಾತಂತ್ರ್ಯಗಳನ್ನು ಪ್ರಸ್ತಾಪಿಸುತ್ತಾರೆ. ಸ್ವತಃ ಸ್ವಾತಂತ್ರ್ಯ, ಉದ್ಯೋಗ ಸ್ವಾತಂತ್ರ್ಯ ಸಂಚಾರ ಸ್ವಾತಂತ್ರ್ಯ, ಮತ, ಧರ್ಮ ಸಂಸ್ಕೃತಿ ಸ್ವಾತಂತ್ರ್ಯ ವಿಮರ್ಶನ ಸ್ವಾತಂತ್ರ್ಯ, ಇದರಡಿಯಲ್ಲಿಯೇ ವೃತ್ತ ಪತ್ರಿಕಾ ಸ್ವಾತಂತ್ರ್ಯ, ಬಹಿರಂಗ ಭಾಷಣ ಸ್ವಾತಂತ್ರ್ಯ ಬಹಿರಂಗ ಸಭಾಸಂಘ ಸ್ವಾತಂತ್ರ್ಯ ಇತ್ಯಾದಿಗಳ ಸ್ವರೂಪವನ್ನು ಖಚಿತವಾದ ಶಬ್ದಗಳಲ್ಲಿ ವಿವರಿಸುತ್ತಾರೆ.

ಡಿವಿಜಿ ಅವರಿಗೆ ರಾಜಪ್ರಭುತ್ವಕ್ಕಿಂತ ಪ್ರಜಾಪ್ರಭುತ್ವದಲ್ಲಿಯೇ ನಂಬಿಕೆಯಿದ್ದರೂ ಪ್ರಜಾರಾಜ್ಯವಾಗುವವರೆಗೆ ರಾಜಪ್ರಭುತ್ವವೇ ಇದ್ದುದು ಐತಿಹಾಸಿಕ ಸತ್ಯವಾಗಿದೆ. ಡಿವಿಜಿ ಅವರ ರಾಜಕೀಯ ಚಿಂತನೆಗಳಿಗೆ ರಾಜ್ಯಶಾಸ್ತ್ರ ಗ್ರಂಥ ರಚನೆಗೆ, ಇಂದಿನ ಪ್ರಜಾ ಪ್ರಭುತ್ವದ ರೂಪರೇಷೆಗಳ ವಿವರಣೆಗೆ ಚರ್ಚೆಗೆ ಮೊದಲು ರಾಜ, ರಾಜ್ಯ, ರಾಜ್ಯದಲ್ಲಿ ರಾಜನ ಸ್ಥಾನ ಇತ್ಯಾದಿ ಪರಿಕಲ್ಪನೆಗಳ ಬಗ್ಗೆ ವಿಸ್ತೃತ ವಿವರಣೆ ನೀಡಿದ್ದಾರೆ. ರಾಮಾಯಣ, ಮಹಾಭಾರತ ಗಳಂಥ ಕಾವ್ಯಗಳಲ್ಲಿ ರಾಜ ಪ್ರಜೆ ಇವರಿಬ್ಬರ ಸಂಬಂಧ ಸ್ವರೂಪದ ಬಗ್ಗೆ ವಾಲ್ಮೀಕಿ, ವ್ಯಾಸರು ಸಾಧ್ಯವಾದಲ್ಲೆಲ್ಲ ಆದರ್ಶ ರಾಜನ ಲಕ್ಷಣಗಳನ್ನು ರಾಜ್ಯ, ಪ್ರಜೆ ಇವುಗಳ ಬಗೆಗಿನ ಅವನ ಕರ್ತವ್ಯಗಳೇನು? 'ಸುಖಿ ರಾಜ್ಯ' ನಿರ್ಮಾಣದಲ್ಲಿ ಅವನ ಪಾತ್ರವೇನು – ಎಂಬುದನ್ನೆಲ್ಲ ಸಾಂದರ್ಭಿಕವಾಗಿ ವಿವರಿಸಿದ್ದಾರೆ. ಅದರಲ್ಲಿಯೂ 'ರಾಮರಾಜ್ಯ' ಇಂದಿಗೂ ಆದರ್ಶ ರಾಜ್ಯದ ಕಲ್ಪನೆಗೆ ನಿದರ್ಶನವಾಗಿದೆ. ರಾಜನೆಂದರೆ ರಾಮನಂತಹ ರಾಜ ಎಂಬುದು ಪ್ರಚಲಿತ ನಂಬಿಕೆಗಳಾಗಿವೆ. ಗಾಂಧೀಜಿ ಕನಸು ಕಂಡದ್ದು ಇಂತಹ

ಆದರ್ಶಮಯವಾದ ರಾಮರಾಜ್ಯವನ್ನೇ! ಡಿವಿಜಿ ಅವರು ಆದರ್ಶ ರಾಜನ ಗುಣಗಳು ಹೇಗಿರಬೇಕೆಂಬುದಕ್ಕೆ ಧರ್ಮರಾಯನಿಗೆ ಭೀಷ್ಮರು ವಿವರಿಸಿದ ಭಾಗವನ್ನು ಪ್ರಸ್ತಾಪಿಸುತ್ತಾರೆ. ಅವರು ವಿವರಿಸುವ ಪ್ರಕಾರ ರಾಜನಾದವನು ದೇವಬ್ರಾಹ್ಮಣ ಪೂಜಾನಿರತ, ಪುರುಷ ಪ್ರಯತ್ನ ಉಳ್ಳವನು, ಸತ್ಯವ್ರತಿ, ಗುಣವಂತ ಶೀಲವಂತ, ಧರ್ಮಿಷ್ಠ, ಮೃದುಸ್ವಭಾವದವನು, ವರ್ಣಾಶ್ರಮಧರ್ಮ ಪಾಲಕ, ನಿಸ್ವಾರ್ಥನು ಇತ್ಯಾದಿ ಇತ್ಯಾದಿಯಾಗಿ ಇನ್ನೂ ಹಲವಾರು ಗುಣಗಳು ಉಳ್ಳವನಾಗಿರಬೇಕು. ಪಾಶ್ಚಿಮಾತ್ಯರಲ್ಲಿಯೂ ರಾಜನ ಬಗ್ಗೆ ಇದೇ ಅಭಿಪ್ರಾಯ ಗಳಿದ್ದರೂ ಅವರು ನಿರಂಕುಶರಾಗಿ ವರ್ತಿಸಿದಾಗ ತಿರುಗಿ ಬೀಳುತ್ತಿದ್ದರು ಮಾತ್ರ!

ಇದೇ ಅಧ್ಯಾಯದಲ್ಲಿ ರಾಜನ ಕರ್ತವ್ಯಗಳೇನೆಂಬುದನ್ನೂ ಸ್ಪಷ್ಟಪಡಿಸುತ್ತಾರೆ. ರಾಜಶಾಸ್ತ್ರ ಸಂಬಂಧವಾದ ಯಾವುದೇ ವಿಷಯ ವಿವರಣೆಗೆ ಹೊರಟರೂ ಕೇವಲ ಭಾರತೀಯ ರಾಜ್ಯವ್ಯವಸ್ಥೆಗಷ್ಟೇ ಸೀಮಿತಗೊಳ್ಳುವುದಿಲ್ಲ. ಸಮಾಂತರದಲ್ಲಿ ಅನ್ಯರಾಜ್ಯ, ರಾಷ್ಟ್ರಗಳಲ್ಲಿ ರಾಜಕೀಯ ವ್ಯವಸ್ಥೆಯನ್ನೂ ವಿವರಿಸುತ್ತಾ ಏಕಕಾಲದಲ್ಲಿ ಸಾದೃಶ್ಯ ವೈದೃಶ್ಯಗಳ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ.

ರಾಜ್ಯಾಂಗ ತತ್ವಗಳ ಬಗ್ಗೆಯೂ ಒಂದು ಪುಟ್ಟ ಪುಸ್ತಕ ಬರೆದಿದ್ದು ಇದರಲ್ಲಿ ರಾಜ್ಯಶಾಸನ ಸಂಬಂಧವಾದ ಲಿಖಿತ, ಅಲಿಖಿತ ಕಾನೂನುಗಳು ರಾಜ, ಮಂತ್ರಿ, ಪ್ರಜೆ ಇವರ ನಡುವಿನ ಸಂಬಂಧಗಳು ಪ್ರಜೆಗಳು ರಾಜರುಗಳು ನಡೆದುಕೊಳ್ಳುವಲ್ಲಿನ ಕಟ್ಟುಪಾಡುಗಳು ಇತ್ಯಾದಿಗಳ ವಿವರವಿದೆ.

ಕನ್ನಡವಲ್ಲಿ ರಾಜ್ಯಶಾಸ್ತ್ರ ಕುರಿತ ಗ್ರಂಥಗಳೇ ಅಪರೂಪ. ಸುದ್ದಿ ಪತ್ರಿಕೆಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ರಾಜಕೀಯ ವಿಷಯಗಳನ್ನು ಕುರಿತು ಅಂದಂದಿನ ಸಮಸ್ಯೆಗಳ ಬಗ್ಗೆ ಬೆಳಕು ಚೆಲ್ಲುವಂತಹ ಲೇಖನಗಳು ಬರುವುದು ಸಾಮಾನ್ಯ ಆದರೆ ಅದನ್ನು ಕುರಿತೇ ಬೃಹದ್ ಗ್ರಂಥಗಳನ್ನು ಬರೆದಿರುವುದು ತೀರ ವಿರಳ. ಅಂತಹ ವಿಷಯದ ಬಗ್ಗೆ ಡಿವಿಜಿ ಅವರು ನಾಲ್ಕೈದು ಕೃತಿಗಳನ್ನು ರಚಿಸಿ ಅವರ ರಾಜಕೀಯ ವಿಚಾರಧಾರೆಯ ಮಿಡಿತಗಳನ್ನು ಅರ್ಥಮಾಡಿಕೊಳ್ಳಲು ಅನುವು ಮಾಡಿಕೊಟ್ಟಿದ್ದಾರೆ.

ಈ ಸಣ್ಣ ಸಣ್ಣ ಪುಸ್ತಕಗಳಲ್ಲಿಯೇ ಜಗತ್ತಿನ ರಾಜಕೀಯ ಇತಿಹಾಸವನ್ನು ಆದಿಯಿಂದ ನಡೆದು ಬಂದ ರೀತಿಯನ್ನು ಸಮಾಜ ಬೆಳೆದ ಕ್ರಮ, ರಾಜ್ಯಶಾಸನದ ಅನಿವಾರ್ಯತೆ ಮೊದಮೊದಲಿನ ರಾಜ್ಯವ್ಯವಸ್ಥೆ, ಅದರ ಸ್ವರೂಪ. ರಾಜ ಪ್ರಜೆಗಳು – ರಾಜನ ಕರ್ತವ್ಯ ರೀತಿ ನೀತಿಗಳು, ಪ್ರಜೆ ಅಥವಾ ವ್ಯಕ್ತಿಗಳ ಹಕ್ಕುಗಳು ಇತ್ಯಾದಿಗಳ ವಿಸ್ತೃತ ವಿವರಣೆ ನೀಡಿದ್ದಾರೆ.

ರಾಜ್ಯಶಾಸ್ತ್ರದ ಅವಶ್ಯಕತೆ ಏಕೆಂಬ ಪ್ರಶ್ನೆಗೆ ಡಿವಿಜಿ ಅವರು ಕೊಡುವ ಉತ್ತರ ಹೀಗಿದೆ. "ನಮ್ಮ ಮಹಾರಾಜನ ' ರಾಷ್ಟ್ರಕ ತತ್ವಗಳನ್ನೂ ರಾಜ್ಯಸಂಸ್ಥೆಯ ಅಂಗಗಳನ್ನೂ ತಿಳಿದುಕೊಳ್ಳಲು ಕುತೂಹಲವುಳ್ಳವರಾಗಿರಬಹುದೆಂಬ ಆಶೆ ಉತ್ಸಾಹಗಳಲ್ಲಿ ಹೀಗೆ ಬರೆದೆ" ಎನ್ನುತ್ತಾರೆ. ಮತ್ತೆ ಮುಂದುವರೆಸುತ್ತಾ, "ಪ್ರಜಾರಾಜ್ಯ ಬಂದಿದೆಯಾದರೂ ರಾಷ್ಟ್ರಕ ತತ್ವ, ನ್ಯಾಯನಿಷ್ಠೆ, ನೀತಿ ದಾರ್ಢ್ಯ, ಸೌಜನ್ಯಗಳಿಲ್ಲದಿದ್ದಲ್ಲಿ ಎಂಥ ರಾಜ್ಯ ವ್ಯವಸ್ಥೆಯೂ ಸುವ್ಯವಸ್ಥೆ ಎನಿಸಿಕೊಳ್ಳುವುದಿಲ್ಲ. ಜನರಲ್ಲಿ ನೀತಿ ಸಂಪತ್ತು ಬೆಳೆವಂತೆ ಅವರ

ರಾಜಕೀಯ, ಆರ್ಥಿಕ, ಸಾಮಾಜಿಕ ಸೌಕರ್ಯಗಳು ಬೆಳೆಯುತ್ತವೆ. ಆದರೆ ಇದಕ್ಕೆಲ್ಲ ರಾಷ್ಟ್ರಕ ಪ್ರಜ್ಞೆ, ರಾಜಕೀಯ ವಿವೇಕಬೇಕು. ಇವುಗಳನ್ನು ಪ್ರಚಾರಪಡಿಸಲೆಂದೇ ಇಂಥ ಕೃತಿಗಳ ರಚನೆಯ ಹಿಂದಿನ ಆಶಯ. ವಾಲ್ಮೀಕಿಗಳ ರಾಮರಾಜ್ಯದ ಕನಸನ್ನೂ ಡಿವಿಜಿ ಕಂಡಿದ್ದರೋ ಊಹಿಸಿದ್ದರೋ, ಆಶಿಸಿದ್ದರೋ, ಆದರೆ ಅವರ ಮಾತುಗಳಲ್ಲಿ ಅವರ ನಿಲುವು ಕಾಣಿಸುತ್ತದೆ." ರಾಮರಾಜ್ಯವು ಸಿದ್ಧವಸ್ತುವಾಗದೆ ಸಾಧ್ಯ ಧ್ಯೇಯವಾಗಿಯೇ ಇರುವ ಒಂದು ಜೀವಿತ ಸೌಂದರ್ಯದ ಕಲ್ಪನೆ. ಅದನ್ನು ಹುಡುಕುತ್ತಿರುವುದೇ, ಅದಕ್ಕಾಗಿ ಪಡುವ ಶ್ರಮವೇ, ಅದನ್ನು ಕುರಿತ ತಪಸ್ಸೇನಮ್ಮ ಆತ್ಮಕ್ಕೆ ಲಾಭ – ಈ ಮಾತುಗಳಲ್ಲಿ, 'ರಾಮರಾಜ್ಯದ ಸಾಧ್ಯತೆಯ ಬಗ್ಗೆ ಖಚಿತತೆ ಇದೆಯೋ ಇಲ್ಲವೋ ಆದರೂ ಅದನ್ನು ಕುರಿತ ಆಸೆ, ತುಡಿತ ಇರಿಸಿಕೊಳ್ಳುವುದೂ ಒಂದು ಆರೋಗ್ಯಕರ ಮನಸ್ಥಿತಿಯೇ ಆಗಿರುತ್ತದೆ ಎನ್ನುವುದು ಸ್ಪಷ್ಟವೆನಿಸುತ್ತದೆ. ಅದಕ್ಕಾಗಿಯೇ' ಮನುಷ್ಯನ ರಾಮರಾಜ್ಯಾನ್ವೇಷಣೆ ಸತತವಾಗಿ ನಡೆಯುತ್ತಿರಬೇಕು. ರಾಮರಾಜ್ಯವನ್ನು ಅರಸುತ್ತಿರಬೇಕು ಎನ್ನುತ್ತಾರೆ.

ರಾಷ್ಟ್ರಕತ್ವ ಆತ್ಮಸಂಸ್ಕಾರವಾಗಿ ಬರಬೇಕೆನ್ನುವುದು ಅವರ ಆಸೆ. ಭಾರತದ ಸ್ವಾತಂತ್ರ್ಯ ಚಳವಳಿಯನ್ನು ಕಂಡಿದ್ದರು. ಎಷ್ಟೋ ರಾಷ್ಟ್ರನಾಯಕರಂತೆ ಸ್ವತಂತ್ರ ಭಾರತದ ಬಗ್ಗೆ ಡಿವಿಜಿ ಅವರೂ ಕೂಡಾ ಅನೇಕ ಕನಸುಗಳನ್ನೂ ಕಟ್ಟಿಕೊಂಡಿದ್ದರೂ ನಂತರ ಸಂಭವಿಸಿದ ಘಟನೆಗಳಿಂದ, ಬದಲಾದ ಧೋರಣೆಗಳಿಂದ ನಿರಾಶೆಯನ್ನು ಅನುಭವಿಸಿದರು.

ಪಕ್ಷ ರಾಜಕೀಯಕ್ಕೆ ಪ್ರಬಲ ವಿರೋಧಿಯಾಗಿದ್ದರೂ ಪ್ರಜಾರಾಜ್ಯದಲ್ಲಿ ಪಕ್ಷಗಳ ಅನಿವಾರ್ಯತೆಯನ್ನು ವಿರೋಧಿಸಲಿಲ್ಲ. ಆದರೆ ಅಸಂಖ್ಯಾತ ಪಕ್ಷಗಳಿದ್ದರೆ ರಾಷ್ಟ್ರದ ಐಕ್ಯತೆಗೆ ಧಕ್ಕೆ ಬರುವುದರಿಂದ ಎರಡೋ ಅಥವಾ ಮೂರೋ ಪಕ್ಷಗಳಿಗೆ ಸೀಮಿತ ಗೊಳ್ಳಬೇಕು ಎಂಬ ಅಭಿಪ್ರಾಯಕ್ಕೆ ಸಮರ್ಥನೆಯಾಗಿ ಇಂಗ್ಲೆಂಡಿನ ಲಿಬರಲ್ ಮತ್ತು ಕನ್ಸರ್ವೇಟೀವ್ ಪಕ್ಷಗಳನ್ನು ಉದಾಹರಿಸುತ್ತಾರೆ. ಅಪಾರವಾದ ರಾಜಕೀಯ ಚಿಂತನೆ ಗಳಿಂದ ನಿಬಿಡವಾದ ಅವರ ರಾಜಕೀಯ ಕೃತಿಗಳು ಕನ್ನಡಕ್ಕೆ ಅಮೂಲ್ಯ ಕೊಡುವೆಯಾಗಿವೆ.

ಒಂದು ಜೀವಮಾನದಲ್ಲಿ ಸಾಧಿಸಲು ಸಾಧ್ಯವೇ ಇಲ್ಲವೆನ್ನುವಂತಹ ಸಾಧನೆಯನ್ನು ಡಿವಿಜಿ ಅವರು ಮಾಡಿತೋರಿಸಿದ್ದಾರೆ. ಅವರ ಆಸಕ್ತಿಗೆ ಒಳಗಾಗದ ವಿಷಯವೇ ಇಲ್ಲವೇನೋ ಎನಿಸುತ್ತದೆ. ಜ್ಞಾನದಾಹಿಃ ಜ್ಞಾನದೈತ್ಯ ಎಂದು ಕರೆಯಬಹುದಾದ ಇವರು ಲೌಕಿಕವನ್ನೂ ಅಧ್ಯಾತವನ್ನೂ ತಮ್ಮ ಬದುಕಿನೊಂದಿಗೆ ಮಿಳಿತಗೊಳಿಸಿಕೊಂಡಿದ್ದ ರೀತಿಯೇ ದಿಗ್ಭ್ರಮೆಗೆ ದೂಡುತ್ತದೆ. ಆದರೆ ಒಂದೇ ಒಂದು ಅವರು ಪ್ರಬಲವಾಗಿ ನಂಬಿದ್ದ ತತ್ವವೆಂದರೆ ಭಗವಂತನ ವಿಶ್ವವ್ಯಾಪಕತ್ವ, ಹಸನಾದ ಬಾಳು. ಕಲೆ, ಸಾಹಿತ್ಯ, ಸಂಗೀತ, ಸೌಂದರ್ಯ, ಸಂಘಟನಾತ್ಮಕತೆ, ಸಾರ್ವಜನಿಕ ಹಿತಚಿಂತನೆ ಇತ್ಯಾದಿಗಳಿಂದ ಸಂಸ್ಕಾರ ಗೊಂಡ ಬಾಳ್ವೆಯನ್ನೇ ಬಯಸಿದ್ದು. ವ್ಯಕ್ತಿ, ಸಮಾಜ, ರಾಷ್ಟ್ರ, ಜಗತ್ತು, ಸೃಷ್ಟಿ ಎಲ್ಲವೂ ಭಗವಂತ ತತ್ವದ ಪರಿಧಿಯೊಳಗೆ ಬರುವಂತಹುದು. ಆದ್ದರಿಂದ ವ್ಯಕ್ತಿ ಮಾಡುವ ಯಾವೊಂದು ಕೆಲಸವಾಗಲೀ, ಆಲೋಚನೆಯಾಗಲೀ ಅವನ ದೃಷ್ಟಿಗೆ ಹೊರತಾಗಿ ಉಳಿಯಲಾರದು. ಅದಕ್ಕಾಗಿಯೇ ಮಾಡುವುದೆಲ್ಲವನ್ನೂ 'ನಿಷ್ಕಾಮ' ಮನಸ್ಸಿನಿಂದ ಫಲಾಫಲಗಳ ಅಪೇಕ್ಷೆ, ನಿರೀಕ್ಷೆಗಳಿಲ್ಲದೆ ಮಾಡಬೇಕು. ಮಾಡುವ ಪ್ರತಿಯೊಂದನ್ನೂ

ಉತ್ಸಾಹದಿಂದ, ಬದ್ಧತೆಯಿಂದ ಸಮಚಿತ್ತದಿಂದ ಮಾಡಬೇಕು; ವ್ಯಕ್ತಿಜೀವನ ಲೋಕಜೀವನಗಳಲ್ಲಿ ಸಮನ್ವಯ. ಈಶನಿಷ್ಠೆ, ದೇಶನಿಷ್ಠೆಗಳು ಅನಿವಾರ್ಯ ಎಂಬುದನ್ನು ಬದುಕಿನ ಮೌಲ್ಯಗಳಾಗಿ ಸ್ವೀಕರಿಸಿದ್ದರು. ಅವರ ಜೀವನಾದರ್ಶ ಮತ್ತು ಪ್ರಬಲವಾದ ಹಂಬಲ ಅವರೇ ಬರೆದ 'ವನಸುಮ' ಕವನದಲ್ಲಿನ ಸಾಲುಗಳು, ಹೀಗೆ ಮೂಡಿದೆ: "ವನಸುಮದೊಲೆನ್ನಜೀ / ವನವು ವಿಕಸಿಸುವಂತೆ / ಮನವವನುಗೊಳಿಸು ಗುರುವೇ ಹೇ ದೇವ... ಉಪಕಾರಿಸಾನು ಎ/ ನ್ನು ಪ್ರಕೃತಿಯು ಜಗಕೆಂಬ / ವಿಪರೀತ ಮತಿಯನುಳಿದು" ವಿಪುಲಾಶ್ರಯವನೀವ / ಸುಫಲಸುಮ ಭರಿತ ಪಾ / ದಪದಂತೆ ನೈಜಮಾದೊಳ್ಪಿನಿಂ ಬಾಳ್ವವೊಲು" ॥ ಎಂದು ವಿನಯದಿಂದ ಪ್ರಾರ್ಥಿಸುವ ಡಿವಿಜಿಯವರ ನಿಸ್ಪೃಹ ನಿಲುವು, ಘನವ್ಯಕ್ತಿತ್ವಕ್ಕೆ ಅನನ್ಯ ನಿದರ್ಶನವಾಗಿದೆ. ಅವರ ಸಾಗರೋಪಮ ಸಾಧನೆಯನ್ನು ಮಾತುಗಳಲ್ಲಿ ಕಟ್ಟಿಕೊಡುವುದಾಗಲೀ ಹೋಲಿಸುವುದಾಗಲೀ ದುಸ್ಸಾಹಸದ ಸಂಗತಿ. ಡಿವಿಜಿ ಅವರಿಗೆ ಡಿವಿಜಿಯೇ ಸಾಟಿ. ಆದರೂ ಆ ಮಹಾಸತೆಯನ್ನು ಗುರುತಿಸಿ, ಗೌರವಿಸುವ ಪ್ರಯತ್ನಗಳಂತೂ ನಡೆದಿವೆ. ಸಮಾಜ ತೋರಿಸುವ ಕೃತಜ್ಞತೆಗೆ ಸಂಕೇತವಾಗಿದೆ. ಬೆಂಗಳೂರು ನಗರಸಭೆ, ಪಠ್ಯಪುಸ್ತಕ ಸಮಿತಿ, ಮೈಸೂರು ನ್ಯಾಯ ವಿಧಾಯಕ ಸಭೆ, ಮೈಸೂರು ವಿಶ್ವವಿದ್ಯಾನಿಲಯದ ಕೌನ್ಸಿಲ್ ಹಾಗೂ ಸೆನೆಟ್ ಸಭೆ ಇತ್ಯಾದಿಗಳ ಸದಸ್ಯತ್ವದ ಗೌರವ ಕರ್ನಾಟಕ ಪತ್ರಕರ್ತರ ಸಮ್ಮೇಳನ, ಮೈಸೂರು ರಾಜ್ಯ ಪತ್ರಕರ್ತರ ಸಂಘ, ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ಸಮ್ಮೇಳನ ಇವುಗಳ ಅಧ್ಯಕ್ಷತೆ; ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷತೆ. ೧೯೬೧ರಲ್ಲಿ 'ಗೌರವ ಡಾಕ್ಟರೇಟ್' (ಮೈಸೂರು ವಿಶ್ವವಿದ್ಯಾಲಯದಿಂದ ೧೯೬೭ರಲ್ಲಿ ಶ್ರೀ ಮದ್ಭಗವದ್ಗೀತಾ ತಾತ್ಪರ್ಯ' ಅಥವಾ ಜೀವನ ಧರ್ಮಯೋಗಕ್ಕೆ ಕೇಂದ್ರ ಸಾಹಿತ್ಯ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ೧೯೭೪ರಲ್ಲಿ ಕೇಂದ್ರ ಸರಕಾರದಿಂದ 'ಪದ್ಮ ಭೂಷಣ' ಬಿರುದು. ಪುರಭವನದಲ್ಲಿ ಸನ್ಮಾನ. ನಿಧಿ ಸಮರ್ಪಣೆ, ಸರಕಾರದಿಂದ ೫೦೦ರೂ.ಗಳ ಗೌರವ ವೇತನ ಇತ್ಯಾದಿಯಾಗಿ ಅನೇಕ ಬಗೆಗಳಲ್ಲಿ ಅವರ ಮಹತ್ಸಾಧನೆಗೆ ಜನಸಮುದಾಯದಿಂದ ಅಭಿಮಾನಿಗಳಿಂದ ದೊರೆತ ಸನ್ಮಾನ ಪ್ರಶಸ್ತಿ ಪದವಿಗಳು ಕೃತಜ್ಞತೆಯ ಮೆಚ್ಚುಗೆಯ ಸಂಕೇತವಾಗಿದೆ. ಆದರೆ ಡಿವಿಜಿಯವರು ಬಯಸಿದ್ದು ಅರಸರು ನೀಡುವ ಸ್ವರ್ಣಕಂಕಣವನ್ನಲ್ಲ. ಕಾವ್ಯರಸಿಕ ರೊಲಿದೀವಾ ಭಾಸುರತರ ಕರ್ಣ್ಕಣಮೇ ನಿಜವಾದ ಕಂಕಣವೆನ್ನುತ್ತಾರೆ.



# ದೇವಮಾನವ ಪ್ರೊ. ಟಿ.ಎಸ್. ವೆಂಕಣ್ಣಯ್ಯ

❖

**ಪ್ರೊ. ಎಸ್. ಬಿಳಿಗಿರಿವಾಸನ್***

**ಕ**ನ್ನಡದ ಹೊಸಗನ್ನಡ ಸಾಹಿತ್ಯದ ಅಶ್ವಿನೀ ದೇವತೆಗಳಲ್ಲಿ ಒಬ್ಬರಾದ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ಗಂಡುಮೆಟ್ಟಿನ ನೆಲವಾದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ತಳಕು ಎಂಬ ಪುಟ್ಟ ಗ್ರಾಮದವರು. ಮುಲಕ ನಾಡು ಪಂಗಡ ದವರಾದ ಅವರ ಮಾತೃಭಾಷೆ ತೆಲುಗು ಆಗಿದ್ದರೂ ಕನ್ನಡ ಅವರ ಜೀವನದ ಉಸಿರಾಗಿತ್ತು. ಕನ್ನಡಕ್ಕಾಗಿ ಬಾಳಿ, ಕನ್ನಡಕ್ಕಾಗಿ ಬಾಳನ್ನು ಅರ್ಪಿಸಿಕೊಂಡ ಹಿರಿಯ ಜೀವಿಗಳು. ಅವರ ತುಂಗಾಕೃತಿ ಇದ್ದಂತೆ ಅವರ ಜೀವನಾದರ್ಶವೂ ಅಷ್ಟೇ ಉತ್ತುಂಗವಾಗಿತ್ತು. ಕನ್ನಡದ ಸೇವೆ ತಮ್ಮ ಕರ್ತವ್ಯವೆಂಬ ನಿಷ್ಠೆಯಿಂದ ದುಡಿದ ಮಹಾಚೇತನವಾಗಿದ್ದು 'ಥಳುಕಿಲ್ಲದ ತಳಕು ಮಾಸ್ತರು' ಎಂದು ಪ್ರಸಿದ್ಧರಾಗಿದ್ದು, ಶ್ರೇಷ್ಠ ಉಪಾಧ್ಯಾಯರಾಗಿ ಸಂಘಟಕರಾಗಿ ಮಾನವೀಯ ಗುಣಗಳ ಆಗರವಾಗಿದ್ದು, ಅಚ್ಚಳಿಯದ ಛಾಪನ್ನು ಮೂಡಿಸಿದವರು.

### ಮನೆತನದ ಹಿರಿಯರು

ವೆಂಕಣ್ಣಯ್ಯನವರ ವಂಶೀಕರು ವೆಂಗಿ ನಾಡಿನವರಾಗಿದ್ದು. ಕಾರಣಾಂತರಗಳಿಂದ ದೇಶಾಂತರ ಹೊರಟು ಮೊಳ

* # ೨೮, 'ಶ್ರೀ ಶ್ವೇತಾದ್ರಿ' ನ್ಯಾನಪ್ಪನಹಳ್ಳಿ, ಬೇಗೂರು ಹೋಬಳಿ, ಬೆಂಗಳೂರು-೫೬೦ ೦೬೮, ಮೊ.: ೯೦೩೬೬೧೨೪೮೮೪.

ಕಾಲ್ಕುರುಪಿನಲ್ಲಿ ನೆಲೆಸಿದವರು. ಶ್ರೀರಾಮಚಂದ್ರ ವಂಶದವರ ಆರಾಧ್ಯದೈವವಾಗಿದ್ದು ಶ್ರೀ ರಾಮನಲ್ಲಿ ಅನನ್ಯವಾದ ಭಕ್ತಿಯುಳ್ಳವರಾಗಿದ್ದರು. ದೈವಭಕ್ತಿ, ಸದಾಚಾರ, ಸತ್ಯಸಂಧತೆ, ಧರ್ಮನಿಷ್ಠೆಗಳಿಂದ ಆಧ್ಯಾತ್ಮಿಕವಾಗಿ ಅತ್ಯಂತ ಮುನ್ನಡೆಯನ್ನು ಸಾಧಿಸಿದ್ದರೂ, ಲೌಕಿಕವಾಗಿ ಅಷ್ಟೇನೂ ಸ್ಥಿತಿವಂತರಾಗಿರಲಿಲ್ಲ. ಲಭ್ಯವಾಗಿರುವ ಮಾಹಿತಿಯಂತೆ ಬಾಲಕೃಷ್ಣಪ್ಪ ಎಂಬುವವರು ವಂಶದ ಮೂಲಪುರುಷರಾಗಿದ್ದು ಇವರ ಪತ್ನಿ ತಿಮ್ಮಾಜಮ್ಮನವರಿಗೆ ಹಿರಿಯ ಪುತ್ರರಾಗಿ ದೊಡ್ಡ ಪುಟ್ಟಣ್ಣನವರು ಜನಿಸಿದರು. ಇವರ ಪತ್ನಿ ವೆಂಕಟರಮಣಸ್ವಾಮಿಯನ್ನು ಸಾಕ್ಷಾತ್ಕರಿಸಿಕೊಂಡಿದ್ದ 'ದೇವರ' ರಂಗಮ್ಮನವರು. ಈ ದಂಪತಿಗಳಿಗೆ ದೊಡ್ಡ ವೆಂಕಟಪ್ಪ, ಪುಟ್ಟ ಲಕ್ಷ್ಮಪ್ಪ ಹಾಗೂ ದೊಡ್ಡ ದೇವಪ್ಪ ಎಂಬ ಪುತ್ರರು ಜನಿಸಿದರು. ಇವರಲ್ಲಿ ದೊಡ್ಡ ದೇವರಪ್ಪನವರ ವಂಶವು ಎರಡು ತಲೆಮಾರಿನವರೆಗೆ ಮುಂದುವರೆದು ಅನಂತರ ಸ್ಥಗಿತವಾಯಿತು. ಉಳಿದಿಬ್ಬರ ವಂಶಗಳು ವೃದ್ಧಿಹೊಂದಿ ಇಂದಿಗೂ ನಡೆದುಬರುತ್ತಿದೆ. ಪುಟ್ಟಲಕ್ಷ್ಮಪ್ಪನವರ ಮಗ ಸುಬ್ಬಣ್ಣನವರು ಶಿರಸ್ತೇದಾರ್ ಸುಬ್ಬಣ್ಣ ಎಂದು ಪ್ರಖ್ಯಾತರಾದವರು. ಅವರ ಪತ್ನಿ ವೆಂಕಮ್ಮನವರಾಗಿದ್ದು, ಅವರಿಗೆ ವೆಂಕಣ್ಣಯ್ಯನವರು  ಮಗನಾಗಿ ಜನಿಸಿದರು. ಇವರು ತಳಕಿನ ವೆಂಕಣ್ಣಯ್ಯನವರ ತಾತಂದಿರು ವೆಂಕಣ್ಣಯ್ಯನವರ ಪತ್ನಿ ಹನುಮಕ್ಕಮ್ಮನವರಿಗೆ ಹಿರಿಯ ಮಗನಾಗಿ ಸುಬ್ಬಣ್ಣನವರು ಜನಿಸಿದರು. ಇವರನ್ನು ದೊಡ್ಡ ಸುಬ್ಬಣ್ಣ ಎಂದೂ ಕರೆಯುತ್ತಿದ್ದರು. ಇವರ ಪತ್ನಿ ಲಕ್ಷ್ಮೀ - ದೇವಮ್ಮನವರ ಹಿರಿಯ ಪುತ್ರರೇ ತಳಕಿನ ವೆಂಕಣ್ಣಯ್ಯನವರು. ಇವರಿಗೆ ವೆಂಕಮ್ಮ, ಸೀತಮ್ಮ, ರಾಮಸ್ವಾಮಿ, ಕೃಷ್ಣರಾವ್, ಕಮಲಮ್ಮ, ಹನುಮಕ್ಕಮ್ಮ, ಲಕ್ಷ್ಮಣರಾವ್, ಶಾಮರಾವ್, ಹನುಮಂತರಾವ್, ಯೇಟೂರಿಗೆ ದತ್ತು ನೀಡಿದ್ದ ಜಯಶಂಕರಯ್ಯ ಮತ್ತು ಸುನಂದಮ್ಮ  ಎಂಬ ಆರು ಸಹೋದರರು ಹಾಗೂ ಐವ್ವರು ಸಹೋದರಿಯರಾದರು (ಒಟ್ಟು ೭ ಗಂಡು, ೫ ಹೆಣ್ಣುಮಕ್ಕಳ ತುಂಬು ಸಂಸಾರವಾಗಿತ್ತು.)

ತಳಕಿನ ವೆಂಕಣ್ಣಯ್ಯನವರ ತಾತಂದಿರಾದ ವೆಂಕಣ್ಣಯ್ಯನವರು ಚೆಳ್ಳಕೆರೆ ತಾಲ್ಲೂಕಿನ ಪರಶುರಾಮಪುರದಲ್ಲಿ ಶೇಕದಾರರಾಗಿದ್ದು, ನಿಸ್ಪೃಹತೆ, ದೈವಭಕ್ತಿ, ಆಡಳಿತ ವಿಚಕ್ಷಣತೆ ಯಿಂದ ಚೆಳ್ಳಕೆರೆ ತಾಲ್ಲೂಕಿನಲ್ಲಿಯೇ ಪ್ರಸಿದ್ಧರಾಗಿದ್ದರು. ನಿವೃತ್ತ ಜೀವನವನ್ನು ಮನ್ನೇಕೋಟೆ ಎಂಬ ಹಳ್ಳಿಯಲ್ಲಿ ಕಳೆಯಲು ಅಲ್ಲಿ ನೆಲೆಸಿದರು. ಅವರ ಕಾಲಾನಂತರ ಅವರ ಕುಟುಂಬ ಅನಾಥವಾಗಿ ಮನ್ನೇಕೋಟೆಯಿಂದ ತಳಕಿಗೆ ಆಶ್ರಯಕ್ಕಾಗಿ ಬಂದು ಕುಟುಂಬ ಸಮೇತ ಆತ್ಮಹತ್ಯೆಯ ಯೋಚನೆಯಲ್ಲಿ ಹತಾಶವಾಗಿದ್ದಾಗ ತಳಕಿನ ಪಟೇಲ ಉಜ್ಜನಪ್ಪ ಈ ಕುಟುಂಬಕ್ಕೆ ಆಶ್ರಯದಾತನಾಗಿ ಬಂದನು. ಅವನ ಪತ್ನಿ ಗುರುಸಿದ್ದಮ್ಮನೂ ಸಹಾ ಶೇಕದಾರ್ ವೆಂಕಣ್ಣಯ್ಯನವರ ಕುಟುಂಬವನ್ನು ಅತ್ಯಂತ ವಿಶ್ವಾಸದಿಂದ ಕಂಡು ಅನ್ನ, ವಸತಿಗೆ ಅನುಕೂಲ ಮಾಡಿಕೊಟ್ಟರು. ಹೀಗೆ ಸುಮಾರು ಎರಡು ಶತಮಾನಗಳಿಗೂ ಹೆಚ್ಚು ಕಾಲ ಈ ಕುಟುಂಬ ತಳಕಿನ ಆಶ್ರಯವನ್ನು ಹೊಂದಿದರು. ಇವರೇ ತಳಕಿನ ವೆಂಕಣ್ಣಯ್ಯನವರ ಪೂರ್ವಿಕರು ವೆಂಕಣ್ಣಯ್ಯನವರು ತಳಕಿನಲ್ಲಿ ಜನಿಸಿದ್ದರಿಂದ ತಳಕಿನ ವೆಂಕಣ್ಣಯ್ಯ ಎಂದು ಪ್ರಸಿದ್ಧರಾದರು.

ತಳಕು ಪ್ರಕೃತಿರಮ್ಯವಾದ ಸುಂದರವಾದ ಪುಟ್ಟ ಗ್ರಾಮ. ಚಾರಿತ್ರಿಕವಾಗಿ ಚಿತ್ರದುರ್ಗದ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು. ಈ ಗ್ರಾಮಕ್ಕೆ 'ತಳಕು' ಎಂಬ ಹೆಸರು ಬರಲು ಕಾರಣವೆಂದರೆ ಎರಡು ಹೋರಿಗಳು ಒಂದರ ಕೊಂಬಿನಲ್ಲಿ ಇನ್ನೊಂದರ ಕೊಂಬನ್ನು ತಳಕು ಹಾಕಿಕೊಂಡು ಹೋರಾಡಲಾರಂಭಿಸಿ ಎಷ್ಟೇ ಪ್ರಯತ್ನಿಸಿದರೂ ಯಾರಿಗೂ ಹೋರಾಟವನ್ನು ನಿಲ್ಲಿಸಲಾಗಲಿಲ್ಲ. ಇಂತಹ ಅಸಾಧಾರಣ ಘಟನೆಯನ್ನು ಕಂಡ ಪಾಳೇಗಾರನು 'ಇದು ಗಂಡು ಮೆಟ್ಟಿನ ನೆಲ' ಎಂದು ನಿರ್ಧರಿಸಿ, ಊರನ್ನು ನಿರ್ಮಿಸಿ 'ತಳಕು' ಎಂಬ ಹೆಸರಿಟ್ಟಿರಬಹುದೆಂಬ ನಂಬಿಕೆಯಿದ್ದು, ಅಲ್ಲಿನ ಶಿಲಾಶಾಸನವೊಂದರಲ್ಲಿ ಈ ಘಟನೆಯನ್ನು ಉಲ್ಲೇಖಿಸಲಾಗಿದೆ.

ಶೇಕದಾರ್ ವೆಂಕಣ್ಣಯ್ಯನವರು ಕೊನೆಗಾಲದಲ್ಲಿ ತಮ್ಮ ಮಗನಾದ ಸುಬ್ಬಣ್ಣನವರಿಗೆ ತಾವು ಪಾರಾಯಣ ಮಾಡುತ್ತಿದ್ದ ರಾಮಾಯಣ ಕೃತಿಯನ್ನು ಕೊಟ್ಟು 'ನೀನೂ ಇದನ್ನು ಪಾರಾಯಣ ಮಾಡು. ರಾಮ ನಿನ್ನನ್ನು ಕಾಪಾಡುತ್ತಾನೆ' ಎಂಬ ಕೊನೆಯ ಮಾತನ್ನು ಹೇಳಿದರು. ಪಿತೃವಾಕ್ಯ ಪರಿಪಾಲಕರಾದ ಸುಬ್ಬಣ್ಣನವರು ರಾಮಾಯಣವನ್ನು ನಂಬಿ ಪಾರಾಯಣವನ್ನು ತಮ್ಮ ಬದುಕಿನ ಮುಖ್ಯ ಅಂಗವನ್ನಾಗಿಸಿಕೊಂಡರು. ಸುಬ್ಬಣ್ಣನವರಿಗೆ ಧರ್ಮಶ್ರದ್ಧೆ, ಸಾತ್ವಿಕತೆ, ಸದಾಚಾರಗಳು ಹುಟ್ಟುಗುಣವಾಗಿದ್ದು ಮೇಧಾವಿಗಳಾಗಿದ್ದರು. ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಜಗನ್ನಾಥ ವಿಜಯ, ರಾಜಶೇಖರ ವಿಳಾಸ ಕಾವ್ಯಗಳನ್ನು ಓದಿ ಅರ್ಥವನ್ನು ಹೇಳುವಲ್ಲಿ ಪ್ರವೀಣರಾಗಿದ್ದು, ಆಶುಕವಿಗಳಾಗಿದ್ದರು. ತಳಕಿನ ಪಟೇಲ ಶಾನುಭೋಗರ ವಿಶ್ವಾಸಕ್ಕೆ ಪಾತ್ರರಾಗಿದ್ದರಿಂದ ಸುಬ್ಬಣ್ಣನವರ ಕುಟುಂಬದ ಹೊಣೆಯನ್ನು ಅವರೇ ಹೊತ್ತುಕೊಂಡಿದ್ದು ಜೀವನ ನಿರ್ವಹಣೆ ಕಷ್ಟವೆನಿಸಲಿಲ್ಲ. ಅಂದಿನ ಕಾಲದಲ್ಲಿ ತಳಕಿನಲ್ಲಿಯೂ ಒಂದು ಧರ್ಮಛತ್ರವಿದ್ದು, ಪಟೇಲ ಶಾನುಭೋಗರ ಕೃಪೆಯಿಂದ ಅದರ ಪಾರುಪತ್ತೇದಾರ ಕೆಲಸ ದೊರೆಯಿತು. ತಿಂಗಳಿಗೆ ಎರಡು ರೂ.ಗಳ ಸಂಬಳದ ಕೆಲಸ ದೊರೆತಾಗ ತಾಯಿ ಹನುಮಕ್ಕಮ್ಮನವರಿಗೆ ಅತ್ಯಾನಂದವಾಯಿತು.

**ಬಾಲ್ಯ, ವಿದ್ಯಾಭ್ಯಾಸ, ವಿವಾಹ**

ಸುಬ್ಬಣ್ಣನವರಿಗೆ ಇಪ್ಪತ್ತು ವರ್ಷವಾಗಿದ್ದು, ಹದಿನಾಲ್ಕು ವರ್ಷದ ಲಕ್ಷ್ಮೀದೇವಮ್ಮನವರು ಪತಿಗೃಹವನ್ನು ಪ್ರವೇಶಿಸಿದರು. ಅವರಿಬ್ಬರ ಅನ್ಯೋನ್ಯ ದಾಂಪತ್ಯದಲ್ಲಿ ತಾಯಿ ಹನುಮಕ್ಕಮ್ಮನವರ ಹರಕೆ ಫಲಿಸಿದಂತೆ ೧ನೆಯ ಅಕ್ಟೋಬರ್ ೧೮೮೫ರಲ್ಲಿ ದಂಪತಿಗಳಿಗೆ ಪುತ್ರೋತ್ಸವವಾಯಿತು. ಪುರೋಹಿತರಾದ ನಂಜುಂಡ ಶಾಸ್ತ್ರಿಗಳು ಮಗುವಿನ ಜಾತಕವನ್ನು ಬರೆದು, ಮಗುವಿನ ಅದೃಷ್ಟವನ್ನು ಕೊಂಡಾಡಿ ಮಗುವು ಮಹಾಬುದ್ಧಿಶಾಲಿಯೂ, ಕೀರ್ತಿಶಾಲಿಯೂ ಆಗಿ, ಮಹಾನುಭಾವ ನೆನಿಸುತ್ತಾನೆಂದು ಭವಿಷ್ಯವನ್ನು ನುಡಿದರು. ಮಗುವಿನ ನಾಮಕರಣ ಮಹೋತ್ಸವದಲ್ಲಿ ತಾತನವರ ಹೆಸರಾದ 'ವೆಂಕಣ್ಣಯ್ಯ' ಎಂದು ಹೆಸರಿಟ್ಟು ಕರೆದರು.

ಬಾಲಕ ವೆಂಕಣ್ಣಯ್ಯ ಊರವರ ಪ್ರೀತಿಗೆ ಪಾತ್ರನಾಗಿ, ಅಜ್ಜಿ ಹನುಮಕ್ಕಮ್ಮನಿಗೆ ಪ್ರೀತಿಯ 'ಪುಟ್ಟ'ನಾಗಿದ್ದು, ಅಜ್ಜಿಯ ಅಕ್ಕರೆಯ ಆರೈಕೆಯಲ್ಲಿ ಬೆಳೆಯುತ್ತಾ, ಅಜ್ಜಿಯಿಂದ

ರಾಮಾಯಣ, ಮಹಾಭಾರತ, ಭಾಗವತ ಕಥೆಗಳನ್ನೂ, ದೇವರ ಸ್ತೋತ್ರಗಳನ್ನೆಲ್ಲವನ್ನೂ ಕಲಿಯುತ್ತಾ ತಂದೆ ಸುಬ್ಬಣ್ಣನವರಿಂದ ಪೂಜೆ, ಜಪ, ಮಂತ್ರಪಠಣವನ್ನು ನೋಡಿ ಕೇಳಿ ತಾನು ಅವರಂತೆಯೇ ಅನುಕರಿಸುತ್ತಿದ್ದು, ಬಾಲ್ಯದಾಟವನ್ನು ಪೂಜೆ, ಜಪ, ತಪ ಧ್ಯಾನಗಳಲ್ಲೇ ಕಳೆದು ವೃದ್ಧಿಚಂದ್ರನಂತೆ ವೃದ್ಧಿಸುತ್ತಾ ಬೆಳೆಯುತ್ತಿರಲು, ಐದು ವರ್ಷವಾಗುತ್ತಿದ್ದಂತೆ ಸುಬ್ಬಣ್ಣನವರು ಮಗನನ್ನು 'ಕೂಲಿಮಠ'ಕ್ಕೆ ಸೇರಿಸಿದರು. ಅಲ್ಲಿ ಉಪಾಧ್ಯಾಯರಾಗಿದ್ದ ನರಸಿಂಗರಾಯರ ಅಚ್ಚುಮೆಚ್ಚಿನ ಶಿಷ್ಯನಾಗಿದ್ದು, ಪ್ರತಿವರ್ಷವೂ ತರಗತಿಗೆ ಮೊದಲಿಗನಾಗಿ, ೧೨ ವರ್ಷಗಳು ತುಂಬುತ್ತಿರುವಾಗಲೇ ಐದು ರೂಪಾಯಿ ಪರೀಕ್ಷೆಗೆ ಕಟ್ಟಲು ಸಿದ್ಧನಾಗಲು, ಅಷ್ಟು ಚಿಕ್ಕ ವಯಸ್ಸಿಗೆ ಆ ಪರೀಕ್ಷೆಗೆ ಕಟ್ಟಿದವರಾರೂ ಇರಲಿಲ್ಲವಾದುದರಿಂದ ಊರಿನವರಿಗೆಲ್ಲಾ ಈ ಸಾಧನೆಯು ಹೆಮ್ಮೆಯ ವಿಷಯವಾಗಿತ್ತು.

ವೆಂಕಣ್ಣಯ್ಯನವರು ಬಾಲ್ಯದಲ್ಲಿಯೇ ವೈಚಾರಿಕ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದು, ಮೂಢನಂಬಿಕೆಗಳನ್ನು ಅನುಸರಿಸುತ್ತಿರಲಿಲ್ಲ. ದೇವರ ಅನುಗ್ರಹವನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದು ಅವರಿಗೆ ಅಪ್ರಿಯವಾದ ಸಂಗತಿಯಾಗಿತ್ತು. ಇದಕ್ಕೆ ನಿದರ್ಶನವಾಗಿ ಪ್ರಸಂಗವೊಂದನ್ನು ನೋಡಬಹುದು. ಉಪಾಧ್ಯಾಯರಾದ ನರಸಿಂಗರಾಯರು ೫ ರೂಪಾಯಿ ಪರೀಕ್ಷೆ ಬರೆಯುವ ಆರು ಜನ ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಮುನ್ನ ದೈವಾನುಗ್ರಹಕ್ಕಾಗಿ ಹೊಸಹಳ್ಳಿಯ ಹನುಮಪ್ಪನ ಗುಡಿಗೆ ಕರೆದುಕೊಂಡು ಹೋಗಿ ಪೂಜೆ ಮಾಡಿಸಿ ಪ್ರಸಾದ ವಿನಿಯೋಗಗಳೆಲ್ಲವೂ ನಡೆಯಿತು. ಆದರೆ ವೆಂಕಣ್ಣಯ್ಯ ನಾಪತ್ತೆ!? ಗಾಬರಿಯಾದ ನರಸಿಂಗರಾಯರು ಶಿಷ್ಯನಿಗಾಗಿ ಕಾದು, ಆತಂಕಗೊಂಡು ಉಳಿದ ಶಿಷ್ಯರೊಡನೆ ಊರಿಗೆ ಮರಳುತ್ತಿದ್ದಾಗ ದಾರಿಯಲ್ಲಿ ಕಾಲುವೆಯ ಬಳಿ ತೆಂಗಿನಕಾಯಿ ಯನ್ನು ಒಡೆದು ತಿನ್ನುತ್ತಿದ್ದ ವೆಂಕಣ್ಣಯ್ಯ ಕಣ್ಣಿಗೆ ಕಾಣಿಸಲು ಕೋಪಗೊಂಡ ಉಪಾಧ್ಯಾಯರು 'ಏನಿದು ಕಪಿಚೇಷ್ಟೆ?' ಎಂದು ಪ್ರಶ್ನಿಸಿದಾಗ ವೆಂಕಣ್ಣಯ್ಯನು "ಗುರುಗಳೇ!" ಫಲ ಬಯಸಿ ದೇವರ ಪೂಜೆ ಮಾಡಬಾರದು ಅಂತ ನಮ್ಮಪ್ಪ ಹೇಳಿದ್ದರು. ಅದು ನನಗೂ ಮನದಟ್ಟಾಗಿದೆ. 'ಒಂದು ತೆಂಗಿನಕಾಯನ್ನು ಕೊಡ್ತೀನಿ ಪರೀಕ್ಷೆಯಲ್ಲಿ ಪಾಸುಮಾಡಿಸು' ಎಂದು ಹೇಳುವುದಕ್ಕೆ ನನಗೆ ಮನಸ್ಸು ಬರಲಿಲ್ಲ. ಅದಕ್ಕೇ ಹೀಗೆ ಮಾಡಿದೆ ಎಂದಾಗ 'ನೀನೊಬ್ಬ ದೊಡ್ಡ ಬೃಹಸ್ಪತಿ' ಎಂದು ಗುರುಗಳು ಗೊಣಗಿ ಶಿಷ್ಯರೊಂದಿಗೆ ತಳಕಿಗೆ ಹಿಂದಿರುಗಿದರು. ತಂದೆತಾಯಿಗಳ ಆಶೀರ್ವಾದವನ್ನು ಪಡೆದು ವೆಂಕಣ್ಣಯ್ಯ ಪರೀಕ್ಷೆಗೆ ಹಾಜರಾಗಲು, ಎರಡು ತಿಂಗಳುಗಳ ನಂತರ ಬಂದ ಫಲಿತಾಂಶದಲ್ಲಿ ಆರು ಜನ ವಿದ್ಯಾರ್ಥಿಗಳಲ್ಲಿ ವೆಂಕಣ್ಣಯ್ಯ ಒಬ್ಬರೇ ಪಾಸಾಗಿದ್ದರು. "ಕರ್ತವ್ಯ ದೃಷ್ಟಿಯಿಂದ ನಾವು ಕಾರ್ಯತತ್ಪರರಾಗಬೇಕು. ಫಲಾಪೇಕ್ಷೆ ಇರಬಾರದು. ಭಗವಂತನನ್ನು ಯಾವುದಕ್ಕೂ ಬೇಡಬಾರದು. ಆತ ಕೊಟ್ಟಷ್ಟರಿಂದ ತೃಪ್ತಿ ಪಡಬೇಕು" ಎಂಬ ಮನೋಭಾವವನ್ನು ಜೀವನಪರ್ಯಂತ ತಾಳಿದ್ದವರು ವೆಂಕಣ್ಣಯ್ಯನವರು.

ತಳಕಿನಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಪೂರೈಸಿದ ನಂತರ ಇಂಗ್ಲಿಷ್ ಓದಲು ಚಳ್ಳಕೆರೆಯ ಎ.ವಿ. ಸ್ಕೂಲ್ ಸೇರಿದ ವೆಂಕಣ್ಣಯ್ಯನವರು, ತಂದೆ ಸುಬ್ಬಣ್ಣನವರು ಏರ್ಪಡಿಸಿದಂತೆ ದೂರದ ಸಂಬಂಧಿಗಳಾದ ಶ್ರೀಕಂಠಜೋಯಿಸರ ಮನೆಯಲ್ಲಿ

ವಾಸ್ತವ್ಯವಾಯಿತು. ಆ ಮನೆಯಲ್ಲಿ ಮುಂದೆ ಮನೆಗೆ ಅಳಿಯನಾಗಬೇಕಾಗಿದ್ದ ಲಕ್ಷ್ಮೀಪತಿಯು ವೆಂಕಣ್ಣಯ್ಯನವರೂ ಒಂದೇ ತರಗತಿಯಲ್ಲಿ ಓದಬೇಕಾಗಿದ್ದುದರಿಂದ ಸ್ವಾಭಾವಿಕವಾಗಿ ಜನರು ಇಬ್ಬರ ಚಟುವಟಿಕೆಗಳನ್ನು ಗಮನಿಸುತ್ತಿದ್ದರು. ಲಕ್ಷ್ಮೀಪತಿರಾಯನಿಗೆ ಓದಿನಲ್ಲಿ ಅತ್ಯಂತ ಆಸಕ್ತಿ ಊಟದ ವೇಳೆಯನ್ನು ಬಿಟ್ಟು ಉಳಿದಂತೆ ಗಂಭೀರವಾದ ಧ್ವನಿಯಲ್ಲಿ ಓದುತ್ತಿದ್ದ. ಆದರೆ ವೆಂಕಣ್ಣಯ್ಯ ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗಿ ಕಥೆ ಕಾದಂಬರಿಗಳಲ್ಲಿ ತಲ್ಲೀನನಾಗುತ್ತಿದ್ದುದನ್ನು ಕಂಡವರು ವೆಂಕಣ್ಣಯ್ಯನಿಗೆ ಚಟುವಟಿಕೆ ಸಾಲದೆಂದೂ, ಯಾವ ರೀತಿಯ ಅಭಿವೃದ್ಧಿಗೂ ಹೇಳಿ ಮಾಡಿಸಿದವನಲ್ಲವೆಂಬ ಅಭಿಪ್ರಾಯವಿತ್ತು. ಲಕ್ಷ್ಮೀಪತಿ 'ಪರೀಕ್ಷೆಯಲ್ಲಿ ನಿನ್ನ ಗತಿಯೇನೋ?' ಎಂದು ಗದರಿ ಕೊಂಡಾಗ 'ನೀವು ಓದುವುದನ್ನು ಕೇಳಿದರೆ ಸಾಕು ನನಗೆಲ್ಲ ಮನದಟ್ಟಾಗುತ್ತದೆ' ಎನ್ನುತ್ತಿದ್ದು ಎರಡು ವರ್ಷಗಳ ಓದನ್ನು ಹೀಗೆಯೇ ಮುಕ್ತಾಯಗೊಳಿಸಿ ತಳಕಿಗೆ ಹಿಂದಿರುಗಿದರು.

ತಳಕಿನಲ್ಲಿ ಸಾಹಿತ್ಯ ಪ್ರಿಯರಾದ ಸುಬ್ಬಣ್ಣನವರು, ಚಿಕ್ಕಪ್ಪ ಶ್ರೀನಿವಾಸರಾಯರು ಸಂಗ್ರಹಿಸಿದ್ದ ಕಿರುಗ್ರಂಥ ಭಂಡಾರವೇ ಓದಿಗೆ ದೊರೆಯಿತು. ಬೇತಾಳ ವಿಂಶತಿ ಕಥೆ, ಬತ್ತೀಸ ಪುತ್ಥಳಿ ಕಥೆಗಳು, ಅರೇಬಿಯನ್ ನೈಟ್ಸ್ ಕಥೆಗಳು, ಬಿ. ವೆಂಕಟಾಚಾರ್ಯರ ಕಾದಂಬರಿಗಳು, ರಾಮಾಯಣ, ಭಾರತ, ಭಾಗವತ, ತತ್ವದ ಪದಗಳು, ಸರ್ವಜ್ಞನ ವಚನಗಳು ಇತ್ಯಾದಿಗಳು ವೆಂಕಣ್ಣಯ್ಯನವರ ಜ್ಞಾನದಾಹವನ್ನು ಇಂಗಿಸುತ್ತಿದ್ದವು. ಅದರೊಂದಿಗೆ ತಂದೆ ಸುಬ್ಬಣ್ಣನವರು ದಿವಾನಖಾನೆಯಲ್ಲಿ ಕುಳಿತು ಊರ ಜನರ ಸಮಸ್ಯೆಗಳನ್ನು ಪರಿಹರಿಸುವ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಮಾತು ಸಾಹಿತ್ಯದ ಕಡೆಗೆ ತಿರುಗಿ ಕಥೆ, ಉಪಕಥೆಗಳನ್ನು ಹೇಳುತ್ತಾ ಧರ್ಮಬೋಧೆ ಮಾಡುತ್ತಿದ್ದರು. ತಾವೇ ಬರೆದ ಹೊಸ ನಾಟಕವನ್ನು ಓದುತ್ತಿದ್ದರು. ಆಗ ವೆಂಕಣ್ಣಯ್ಯ ಮೈಮರೆತು ಕೇಳುತ್ತಿದ್ದರು. ಸಂಜೆ ಮನೆಯಲ್ಲಿ ಮಹಿಳೆಯರ ಗೋಷ್ಠಿಯಲ್ಲಿ ತಾಯಿ ಲಕ್ಷ್ಮೀದೇವಮ್ಮನವರು ಕುಮಾರವ್ಯಾಸ ಭಾರತವನ್ನೋ, ಜೈಮಿನಿ ಭಾರತವನ್ನೋ ಅಥವಾ ತೊರವೆ ರಾಮಾಯಣವನ್ನೋ ಓದಿ ಅರ್ಥಹೇಳುವಾಗಲೂ ಆ ಗೋಷ್ಠಿಯಲ್ಲಿ ಪಾಲ್ಗೊಳ್ಳುತ್ತಿದ್ದರು. ಕೆಲವೊಮ್ಮೆ ಕಾವ್ಯವಾಚನವನ್ನು ಮಾಡುತ್ತಿದ್ದರು.

ಇಂಗ್ಲಿಷ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ವೆಂಕಣ್ಣಯ್ಯ ತೇರ್ಗಡೆಯಾಗಿದ್ದು ಲಕ್ಷ್ಮೀಪತಿ ನಪಾಸಾಗಿದ್ದು ಎಲ್ಲರಿಗೂ ಆಶ್ಚರ್ಯ ಉಂಟುಮಾಡಿತ್ತು.

ಅಜ್ಜಿಯಾದ ಹನುಮಕ್ಕಮ್ಮ ಮೊಮ್ಮಗನಾದ ವೆಂಕಣ್ಣಯ್ಯನ ಮದುವೆಯನ್ನು ನೋಡ ಬೇಕೆಂದು ಮಗನಿಗೆ ಒತ್ತಾಯಿಸುತ್ತಿದ್ದರು. ಆ ವೇಳೆಗೆ ತಕ್ಕ ಮಟ್ಟಿಗೆ ಶ್ರೀಮಂತರಾಗಿದ್ದ ಸುಬ್ಬಣ್ಣನವರು ತಮ್ಮ ಪತ್ನಿಯ ಅಣ್ಣ ನರಸಿಂಹಶಾಸ್ತ್ರಿಗಳ ಪುತ್ರಿ ಭಾಗೀರಥಮ್ಮನನ್ನು ವೆಂಕಣ್ಣಯ್ಯನವರೊಂದಿಗೆ ವಿವಾಹ ಮಾಡಿ ತಾಯಿಯ ಆಸೆಯನ್ನು ನೆರವೇರಿಸಿದರು. ವಿವಾಹವಾದಾಗ ವೆಂಕಣ್ಣಯ್ಯನವರಿಗೆ ೧೪ ವರ್ಷ ಭಾಗೀರಥಮ್ಮನಿಗೆ ೮ ವರ್ಷ ವಯಸ್ಸಾಗಿತ್ತು. ವಿವಾಹದ ನಂತರವೂ ವೆಂಕಣ್ಣಯ್ಯನವರು ವಿದ್ಯಾಭ್ಯಾಸವನ್ನು ಮುಂದು ವರಿಸಿದರು. 'ವಿವಾಹಂ ವಿದ್ಯನಾಶಾಯ' ಎಂಬ ಮಾತು ಅವರ ಜೀವನದಲ್ಲಿ ಸುಳ್ಳಾಯಿತು. ವೆಂಕಣ್ಣಯ್ಯನವರು ಲೋಯರ್ ಸೆಕೆಂಡರಿ ಅಥವಾ ಮಿಡಲ್‌ಸ್ಕೂಲ್ ಪರೀಕ್ಷೆಯಲ್ಲಿ

ತೇರ್ಗಡೆಯಾದ ಮೇಲೆ ಮಗನನ್ನು ಮುಂದೆ ಓದಿಸುವ ಮಹದಾಸೆ ಹೊಂದಿದ್ದ ಸುಬ್ಬಣ್ಣನವರು ಚಿತ್ರದುರ್ಗದಲ್ಲಿ ತಮ್ಮ ಅಕ್ಕನ ಮಗ ತಿರುಮಲರಾಯನೊಂದಿಗೆ ಒಟ್ಟಿಗೆ ವಿದ್ಯಾಭ್ಯಾಸ ಮಾಡಲು ಏರ್ಪಾಡು ಮಾಡಿದರು. ಸುಬ್ಬಣ್ಣನವರ ಭಾವ ಸುಬ್ಬರಾಯರು ಶ್ರೀಮಂತರಾಗಿದ್ದು ದುರ್ಗದಲ್ಲಿ ಮನೆ ಮಾಡಿ ಮಗನೊಂದಿಗೆ ವೆಂಕಣ್ಣಯ್ಯನನ್ನು ಕಳುಹಿಸುವಂತೆ ತಿಳಿಸಿದರು. ಹೀಗಾಗಿ ತಿರುಮಲರಾಯ ಹಾಗೂ ವೆಂಕಣ್ಣಯ್ಯನವರು ಒಟ್ಟಿಗೆ ವಿದ್ಯಾಭ್ಯಾಸ ಮಾಡುವಂತಾಯಿತು. ಈ ಮೂರು ವರ್ಷಗಳ ವ್ಯಾಸಂಗದಲ್ಲಿ ವೆಂಕಣ್ಣಯ್ಯನಲ್ಲಿ ಯಾವುದೇ ಬದಲಾವಣೆಯಿಲ್ಲದೆ ಎಂದಿನಂತೆ ಪಾಠಕ್ಕಿಂತ ಕಥೆ, ಕಾದಂಬರಿಗಳಲ್ಲಿ ಆಸಕ್ತರಾಗಿದ್ದು, ಹಾಸಿಗೆಯಲ್ಲಿ ಮಲಗಿಕೊಂಡೇ ಭಾವನಿಗೆ ಓದುವಂತೆ ಹೇಳಿ ಕೇಳಿಸಿಕೊಳ್ಳುತ್ತಿದ್ದರು. ಮೊದಲೆರಡು ವರ್ಷಗಳಲ್ಲಿ ಇಬ್ಬರಿಗೂ ತೇರ್ಗಡೆಯಾದರೂ ಅಂತಿಮ ವರ್ಷದ ಪಬ್ಲಿಕ್ ಪರೀಕ್ಷೆಯಾದ ಮೆಟ್ರಿಕ್ಯೂಲೇಷನ್ ಪರೀಕ್ಷೆಯಲ್ಲಿ ವೆಂಕಣ್ಣಯ್ಯನವರು ಉತ್ತೀರ್ಣರಾಗಿದ್ದು, ತಿರುಮಲರಾಯನು ಅನುತ್ತೀರ್ಣನಾಗಿದ್ದನು. ಇದು ವೆಂಕಣ್ಣಯ್ಯನವರ ಅಪಾರವಾದ ಜ್ಞಾಪಕಶಕ್ತಿಯ ಪ್ರಭಾವವೆಂದು ಬೇರೆಯವರಿಗೆ ತಿಳಿಯಲಿಲ್ಲ. ಈ ಸಮಯಕ್ಕೆ ವೆಂಕಣ್ಣಯ್ಯನವರಿಗೆ ೧೭ ವರ್ಷ ವಯಸ್ಸಾಗಿದ್ದು ಚಿಗುರು ಮೀಸೆಯ ಯುವಕರಾಗಿ ಆರು ಅಡಿಗಿಂತಲೂ ಎತ್ತರವಾಗಿ ಬೆಳೆದು ಅಜಾನುಬಾಹುವಾಗಿದ್ದರು. ಈ ಸಂದರ್ಭದಲ್ಲಿ ಅಜ್ಜಿಯ ಅಪೇಕ್ಷೆಯಂತೆ ನಿಷೇಕ ಶಾಸ್ತ್ರವೂ ನಡೆಯಿತು. ಅದರೊಂದಿಗೆ ಸುಬ್ಬಣ್ಣನವರ ಸಂಸಾರವೂ ಸಾಕಷ್ಟು ಬೆಳೆದಿತ್ತು.

ವೆಂಕಣ್ಣಯ್ಯನವರು ಉತ್ತೀರ್ಣರಾದ ಮೇಲೆ ಸುಬ್ಬಣ್ಣನವರಿಗೆ ಮಗನ ಭವಿಷ್ಯದ ಚಿಂತೆ ಆವರಿಸಿತು. ಮಗನನ್ನು ಹೇಗಾದರೂ ಮಾಡಿ ಪದವೀಧರನನ್ನಾಗಿಸಬೇಕೆಂಬ ಉತ್ಕಟಾಕಾಂಕ್ಷೆ ಅವರದಾಗಿತ್ತು. ಆದರೆ ತಮ್ಮ ದೊಡ್ಡ ಸಂಸಾರದ ನಿರ್ವಹಣೆಯೊಂದಿಗೆ ಮಗನ ಕಾಲೇಜು ವಿದ್ಯಾಭ್ಯಾಸವು ಕಷ್ಟಸಾಧ್ಯವಾಗಿತ್ತು. ಆ ಸಂದರ್ಭದಲ್ಲಿ ತಂದೆ ಮಕ್ಕಳ ಆಸೆಯನ್ನು ನೆರವೇರಿಸಲೆಂಬಂತೆ ಸಜ್ಜನರಾದ ಐಕ್ಸೈಸ್ ಇನ್ಸ್ಪೆಕ್ಟರ್ ಶಿವರಾಮಯ್ಯನವರು ತಳಕಿಗೆ ಆಪದ್ಬಾಂಧವರಾಗಿ ಆಗಮಿಸಿದಾಗ ಅವರಿಗೆ ಸುಬ್ಬಣ್ಣನವರೊಂದಿಗೆ ಸ್ನೇಹ ಉಂಟಾಗಿ, ಅವರ ಪ್ರಭಾವದಿಂದ ಟಾಡಿ ಕಂಟ್ರಾಕ್ಟರ್ ಮುನಿಯಪ್ಪನವರಲ್ಲಿ ಸುಬ್ಬಣ್ಣನವರಿಗೆ ಪಾಲುದಾರಿಕೆ ದೊರೆತು ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸಿ ಮಗನನ್ನು ಕಾಲೇಜಿನ ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಕಳುಹಿಸಿದರು.

ಮೈಸೂರು ಮಹಾರಾಜಾಕಾಲೇಜಿನಲ್ಲಿ ಎಫ್.ಎ. ಪರೀಕ್ಷೆಗೆ ದಾಖಲಾಗಿ ಮೊದಲನೆಯ ವರ್ಷದ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ದ್ವಿತೀಯ ವರ್ಷದ ಪರೀಕ್ಷೆಯಲ್ಲಿ ಗಣಿತದ ಪರೀಕ್ಷೆಗೆ ಹಾಜರಾಗದೆ ನಪಾಸಾಗಿ ಗಣಿತಶಾಸ್ತ್ರದ ಅಧ್ಯಾಪಕರೂ, ಪ್ರಾಂಶುಪಾಲರೂ ಆಗಿದ್ದ ಏಯರ್ ಸಾಹೇಬರ ಕೋಪಕ್ಕೆ ಗುರಿಯಾಗಿ ಜೂನಿಯರ್ ಎಫ್.ಎ.ಗೆ ಡಿಮೋಟ್ ಆದಾಗ ಉದ್ವಿಗ್ನರಾಗದೆ ಕಾಲೇಜನ್ನು ಬದಲಾಯಿಸಿ ಬಳ್ಳಾರಿಯ ವಾರ್ಡಲಾ ಕಾಲೇಜಿನಲ್ಲಿ ಅಭ್ಯಾಸಮಾಡಿ ಎಫ್.ಎ. ಪರೀಕ್ಷೆಯನ್ನು ಮುಗಿಸಿ ಬಿ.ಎ. ತರಗತಿಗಾಗಿ ಮೈಸೂರಿಗೆ ಹಿಂದಿರುಗಿದರು. ಆ ಸಂದರ್ಭದಲ್ಲಿ ಸುಬ್ಬಣ್ಣನವರ ಆರ್ಥಿಕ

ಪರಿಸ್ಥಿತಿ ಚಿಂತಾಜನಕವಾಗಿದ್ದು, ಮಗನ ಮುಂದಿನ ವಿದ್ಯಾಭ್ಯಾಸದ ಚಿಂತೆ ಕಾಡತೊಡಗಿದಾಗ ಶ್ರೀರಾಮನ ಮೇಲೆ ಭಾರ ಹಾಕಿ ಮೌನವಹಿಸಿದ್ದರು.

ಇಂತಹ ಸಂದರ್ಭದಲ್ಲಿ ಸುಬ್ಬಣ್ಣನವರ ಸಹೋದರರಾದ ಶ್ರೀನಿವಾಸರಾಯರ ನೆರವು ಅನಿರೀಕ್ಷಿತವಾಗಿ ಒದಗಿ ಬಂದಿತು. ಅವರು ಸುಬ್ಬಣ್ಣನವರ ಆರ್ಥಿಕಸ್ಥಿತಿಯನ್ನು ಅರಿತು "ಪುಟ್ಟನ ಓದನ್ನು ನಿಲ್ಲಿಸಬೇಡ. ನಾನಂತೂ ಬಿ.ಎ. ಪಾಸು ಮಾಡಿಲ್ಲ. ಅವನಾದರೂ ವಂಶಕ್ಕೆ ಕೀರ್ತಿ ತರಲಿ. ಅವನನ್ನು ಓದಿಸುವ ಭಾರ ನನಗಿರಲಿ" ಎಂದರು. ಹೀಗಾಗಿ ವೆಂಕಣ್ಣಯ್ಯನವರ ವಿದ್ಯಾಭ್ಯಾಸ ಮುಂದುವರೆಯಿತು. ಮೈಸೂರಿನಲ್ಲಿ ಬಿ.ಎ.ಗಾಗಿ ಮಹಾರಾಜಾ ಕಾಲೇಜನ್ನು ಸೇರಿದ ವೆಂಕಣ್ಣಯ್ಯನವರಿಗೆ ಕಾಲೇಜಿನ ಶುಲ್ಕಕ್ಕೆ ಹಣ ಒದಗಿಸುವುದು ಕಷ್ಟವಾದಾಗ, ತಮ್ಮ ಸಜ್ಜನಿಕೆ, ಸನ್ನಡತೆ, ಸ್ನೇಹಭಾವದಿಂದ ಮಿತ್ರ ಸಂಪತ್ತನ್ನು ಗಳಿಸಿದ್ದರಿಂದ, ಮಿತ್ರರ ಸಲಹೆಯಂತೆ ಪ್ರಾಂಶುಪಾಲರಾದ ವಿಯರ್ ಸಾಹೇಬರನ್ನು ಕಂಡಾಗ ಅವರು ಅರ್ಧಶುಲ್ಕ ಮನ್ನಾ ಮಾಡಿದರು. ಆದರೆ ಇತಿಹಾಸದ ಅಧ್ಯಾಪಕರಾದ ಡೆನ್‌ಹ್ಯಾಂ ಸಾಹೇಬರು ಶಿಫಾರಸ್ಸು ಮಾಡಿ ಪೂರ್ಣಶುಲ್ಕ ಮನ್ನಾ ಮಾಡಿಸಿದರಿಂದ ವೆಂಕಣ್ಣಯ್ಯನವರು ಬಿ.ಎ. ಪದವಿ ಪಡೆಯಲು ಸಾಧ್ಯವಾಯಿತು. ಈ ಸಮಯದಲ್ಲಿ ಪ್ರೊ. ಬಿ.ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಮತ್ತು ಕನ್ನಡ ಭಾಷಾ ಸಾಹಿತ್ಯ ಗಳನ್ನೂ, ಕನ್ನಡದಲ್ಲಿ ಭಾಷಾಂತರ ಪಾಠಗಳನ್ನು ಬೋಧಿಸುತ್ತಿದ್ದರು. ಈ ವರ್ಷದಲ್ಲಿಯೇ ಟಿ.ಎಸ್. ವೆಂಕಣ್ಣಯ್ಯನವರು ಬಿ.ಎಂ. ಶ್ರೀಯವರ ವಿದ್ಯಾರ್ಥಿ ಯಾಗಿದ್ದರು. ಆಗ ಆರಂಭಗೊಂಡ ಅವರಿಬ್ಬರ ಗುರುಶಿಷ್ಯ ಸಂಬಂಧ ಶಿಷ್ಯನ ಬಾಳ ಕೊನೆಯವರೆಗೂ ಗಾಢವಾಗಿತ್ತು.

ವೆಂಕಣ್ಣಯ್ಯನವರು ೧೯೧೦ರಲ್ಲಿ ಬಿ.ಎ. ಪದವೀಧರರಾದರು. ಆಗಿನ ಕಾಲದಲ್ಲಿ ಬಿ.ಎ. ಪದವೀಧರರಾಗುವುದು ಮಹತ್ಸಾಧನೆಯಾಗಿತ್ತು. ಈ ಪದವಿಯು ಅವರಿಗೆ ಸಾಮರ್ಥ್ಯವನ್ನು ಬಾಳಿಗೆ ಅರ್ಹತೆಯನ್ನೂ, ಸಮಾಜದಲ್ಲಿ ಗೌರವವನ್ನೂ ತಂದಿತು. ತಳಕಿನಲ್ಲಿ ತಮ್ಮ ಊರಿನ ವಿದ್ಯಾರ್ಥಿಗೆ ಬಿ.ಎ. ಪದವಿ ಲಭಿಸಿದಾಗ ಊರಿಗೆ ಊರೇ ಹಿಗ್ಗಿ ನಲಿಯಿತು ಹಾಗೂ ಊರಿನ ಹಬ್ಬವನ್ನಾಗಿ ಆಚರಿಸಿ ಊರಿಗೆಲ್ಲಾ ಸಕ್ಕರೆ ಹಂಚಿ ಸಂಭ್ರಮಿಸಿದುದಲ್ಲದೆ ಸುಬ್ಬಣ್ಣನವರು ರಚಿಸಿದ್ದ 'ಶನಿಮಹಾತ್ಮೆ' ನಾಟಕವನ್ನು ಊರವರು ಅಭಿನಯಿಸಿ ಸಂತೋಷವನ್ನು ಹಂಚಿದರು. ಒಟ್ಟಿನಲ್ಲಿ ತಳಕಿನಲ್ಲಿ ಅಭೂತಪೂರ್ವವಾದ ಸಡಗರ ಸಂಭ್ರಮ ಒಂದು ವಾರದವರೆಗೆ ನಡೆಯಿತು.

ವೆಂಕಣ್ಣಯ್ಯನವರ ತಂದೆ ಸುಬ್ಬಣ್ಣನವರಿಗೆ ಮಗ ಉದ್ಯೋಗಕ್ಕೆ ಸೇರಿ ಮನೆಗೆ ಸಹಾಯಕನಾಗಲೆಂಬ ಆಶಯವಿದ್ದರೂ, ಸಹೋದರ ಶ್ರೀನಿವಾಸರಾಯರು ವಿದ್ಯಾಭ್ಯಾಸವನ್ನು ಮುಂದುವರೆಸುವುದು ಸೂಕ್ತವೆಂಬ ಅಭಿಪ್ರಾಯ ವ್ಯಕ್ತಪಡಿಸಲು, ಅವರ ಸಲಹೆಯಂತೆ ಬೊಂಬಾಯಿಗೆ ಹೋಗಿ ಬಿ.ಎಲ್. ಪದವಿ ಪಡೆಯುವುದೆಂಬ ನಿರ್ಧಾರವಾಗಿದ್ದು, ಸುಬ್ಬಣ್ಣನವರಿಗೂ ಸೂಕ್ತವೆನಿಸಿದರೂ ಈ ನಿರ್ಧಾರದಲ್ಲಿ ವೆಂಕಣ್ಣಯ್ಯನವರ ಪಾತ್ರವೇನೂ ಇರದೆ ಹಿರಿಯರ ಮಾತಿನಂತೆ ನಡೆಯುವುದೇ ತಮ್ಮ ಕೆಲಸವೆಂದು ಅರಿತು "ನೀವೆಲ್ಲ ಹೇಳಿದ ಹಾಗೆ" ಎಂದು ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿದರು ಆ ವೇಳೆಗೆ ಅವರು ಎರಡು ಮಕ್ಕಳ ತಂದೆಯಾಗಿದ್ದರು.

ಶ್ರೀನಿವಾಸರಾಯರು ಬೊಂಬಾಯಿಯ ವಿದ್ಯಾಭ್ಯಾಸಕ್ಕೆ ಧನಸಹಾಯ ನೀಡಿದರೂ, ಬೊಂಬಾಯಿಯ ಜೀವನ ಕಠಿಣವಾಗಿತ್ತು. ಬಡವರಿಗಾಗಿ ಉಚಿತ ಊಟ ವಸತಿ ನೀಡುವ 'ಶ್ವೇತಾಂಬರ ಫ್ರೀ ಬೋರ್ಡಿಂಗ್ ಲಾಡ್ಜಿಂಗ್' ಸೇರಿಕೊಂಡು ಕಾಲೇಜಿನ ಶುಲ್ಕ ಕಡಿಮೆಯಾಗುವುದೆಂಬ ಕಾರಣಕ್ಕೆ ಸಂಜೆ ಕಾಲೇಜಿಗೆ ಸೇರಿದರು. ಆದರೂ ದಿನನಿತ್ಯ ಖರ್ಚುವೆಚ್ಚಗಳಿಗಾಗಿ ಚಿಂತಿಸುತ್ತಾ, ಅನ್ಯಮಾರ್ಗವಿಲ್ಲದೆ ತಂದೆಗೆ ಪತ್ರಬರೆಯಲು ಅಂಚೆ ಕಛೇರಿಗೆ ಹೋದಾಗ ಕನ್ನಡಿಗ ಗುಮಾಸ್ತನ ಪರಿಚಯವಾಗಿ, ಅವನ ಸಹಾಯದಿಂದ ಅದೇ ಅಂಚೆ ಕಛೇರಿಯಲ್ಲಿ ಗುಮಾಸ್ತೆಯ ಕೆಲಸ ದೊರೆಯಿತು. ಹೀಗಾಗಿ ಮೊದಲನೆಯ ಬಿ.ಎಲ್. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಎರಡನೆಯ ವರ್ಷವು ಪ್ರಾರಂಭವಾಗುವ ಮೊದಲೆ ಅಂಚೆ ಕಛೇರಿಯ ಹಿರಿಯ ಅಧಿಕಾರಿಯಾಗಿದ್ದ ಮರಾಠಿಗನೊಬ್ಬನ ಅನ್ಯಾಯದ ನಿಂದೆಗೆ ಗುರಿಯಾಗಿ ಸ್ವಾಭಿಮಾನಿಗಳಾದ ವೆಂಕಣ್ಣಯ್ಯನವರು ಊರಿಗೆ ಹಿಂದಿರುಗಿದರು. ಈ ಘಟನೆಯಿಂದ ವೆಂಕಣ್ಣಯ್ಯನವರಿಗೆ "ಮರಾಠಿಗರು ಕನ್ನಡಿಗರ ಬಗ್ಗೆ ಹೀನಾಯವಾಗಿ ನಡೆದುಕೊಳ್ಳುತ್ತಿದ್ದುದು ಅವರ ಗಮನಕ್ಕೆ ಬಂದು, ಅವರ ಕನ್ನಡತನದ ಹಾವು ಹೆಡೆಯೆತ್ತಿ ನಿಂತಂತಾಗಿ ಕನ್ನಡದ ಬಗ್ಗೆ ಪೂರ್ಣ ತಿಳಿವಳಿಕೆ ಪಡೆಯುವ ಮನಸ್ಸಾಯಿತು."

ಅಂದಿನ ದಿನಗಳಲ್ಲಿ ಕನ್ನಡ ಸ್ನಾತಕೋತ್ತರ ಪದವಿಯನ್ನು ಪಡೆಯಲು ಮದರಾಸು ವಿಶ್ವವಿದ್ಯಾನಿಲಯವನ್ನು ಆಶ್ರಯಿಸಬೇಕಾಗಿತ್ತು. ಮೈಸೂರಿನಲ್ಲಿ ಖಾಸಗಿಯಾಗಿ ಅಭ್ಯಾಸಮಾಡಿ ಮದರಾಸಿನಲ್ಲಿ ಪರೀಕ್ಷೆಗೆ ಕುಳಿತುಕೊಳ್ಳುವ ಅವಕಾಶವಿದ್ದುದರಿಂದ ಮೈಸೂರಿನ ಪ್ರಸಿದ್ಧ ಸಂಸ್ಕೃತ, ಕನ್ನಡ ವಿದ್ವಾಂಸರಾಗಿದ್ದ ವಿದ್ವಾನ್ ತಿಮ್ಮಪ್ಪ ಶಾಸ್ತ್ರಿಗಳಲ್ಲಿ ಕನ್ನಡವನ್ನೂ, ವಿದ್ವಾನ್ ರಾಳ್ಳಪಳ್ಳಿ ಅನಂತಕೃಷ್ಣ ಶರ್ಮರಲ್ಲಿ ತೆಲುಗನ್ನು ಅಭ್ಯಾಸ ಮಾಡಿ ೧೯೧೪ರಲ್ಲಿ ಮದರಾಸ್ ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪದವಿಯನ್ನು ಪಡೆದರು. ಅವರು ಧಾರವಾಡದಲ್ಲಿ ಉಪಾಧ್ಯಾಯರಾಗಿದ್ದಾಗ ಎಂ.ಎ. ಪರೀಕ್ಷೆಯ ಫಲಿತಾಂಶ ಪ್ರಕಟವಾಯಿತು. ಈ ಸಮಯದಲ್ಲಿ ದೂರದ ಬಂಧುಗಳಾಗಿದ್ದ ಚಿತ್ರದುರ್ಗದ ಶ್ರೀಕಂಠಶಾಸ್ತ್ರಿಗಳೊಂದಿಗೆ ಸ್ನೇಹವಾಗಿ ವೆಂಕಣ್ಣಯ್ಯನವರ ಜೀವದ ಗೆಳೆಯರಾದರು. ಶಾಸ್ತ್ರಿಗಳು ಸಂಸ್ಕೃತ ಪಾಠಶಾಲೆಯಲ್ಲಿ ವಿದ್ವತ್ ಪರೀಕ್ಷೆಗಾಗಿ ಓದಲು ಬಂದಿದ್ದರು. ಸಮಯ ದೊರೆತಾಗಲೆಲ್ಲಾ ಗೆಳೆಯರಿಬ್ಬರೂ ಅಧ್ಯಾತ್ಮ ವಿಚಾರಗಳನ್ನು ಕುರಿತು ಚರ್ಚಿಸುತ್ತಿದ್ದು, ಅವರಿಬ್ಬರ ಜ್ಞಾನಭಂಡಾರಗಳು ಶ್ರೀಮಂತವಾದವು. ೧೯೧೨ರಲ್ಲಿ ವಿದ್ಯಾಭ್ಯಾಸ ಮುಗಿಸಿದ ಶಾಸ್ತ್ರಿಗಳು ಧಾರವಾಡ ಜಿಲ್ಲೆಯ ಅಗಡಿ ಕ್ಷೇತ್ರದ ಆನಂದವನ ಆಶ್ರಮದಲ್ಲಿದ್ದ ಶೇಷಾಚಲ ಸ್ವಾಮಿಗಳ ಅನುಗ್ರಹದಿಂದ ಅಲ್ಲಿಯೇ ಸಂಸ್ಕೃತ ಪಂಡಿತರಾಗಿ ನೆಲೆಸಿದರು.

ಧಾರವಾಡದ ಬಾಸೆಲ್ ಮಿಸನ್ ಸ್ಕೂಲ್‌ನಲ್ಲಿ ಅಧ್ಯಾಪಕರಾಗಿ ಹೋಗಲು ಕಾರಣ ಮೈಸೂರಿನಲ್ಲಿ ಅವರ ಸಹಪಾಠಿಯಾಗಿದ್ದ ಜ್ಞಾನಕಣ್ಣನ್ ಈ ಪ್ರೌಢಶಾಲೆಯ ಮುಖ್ಯೋಪಾಧ್ಯಾಯನಾಗಿದ್ದು, ವೆಂಕಣ್ಣಯ್ಯನವರ ಗುಣಸ್ವಭಾವಗಳನ್ನು ಮೆಚ್ಚಿ ಕೊಂಡಿದ್ದು, ಆತನೇ ವೆಂಕಣ್ಣಯ್ಯನವರಿಗೆ ಪತ್ರ ಬರೆದು ತನ್ನ ಶಾಲೆಗೆ ಅಧ್ಯಾಪಕರಾಗಿ ಬರುವಂತೆ ಆಹ್ವಾನಿಸಿದ. ಇಂಥ ಅವಕಾಶವನ್ನು ಎದುರು ನೋಡುತ್ತಿದ್ದ

ವೆಂಕಣ್ಣಯ್ಯನವರು ಸಂತೋಷದಿಂದ ಶಾಲೆಯ ಉಪಾಧ್ಯಾಯರಾಗಿ ಸೇರಿಕೊಂಡರು. ಜ್ಞಾನಕಣ್ಣನ್ ಪ್ರಾಂಶುಪಾಲರಾದ ಮುಲ್ಲರ್ ಸಾಹೇಬರನ್ನು ಪರಿಚಯಿಸುವುದರೊಂದಿಗೆ, ಧಾರವಾಡದ ಹಿರಿಯ ವಿದ್ವಾಂಸರಾದ ಆಲೂರು ವೆಂಕಟರಾವ್, ಮುದವೀಡು ಕೃಷ್ಣರಾವ್, ಕಡಪ ರಾಘವೇಂದ್ರರಾವ್, ಉತ್ತಂಗಿ ಚೆನ್ನಬಸಪ್ಪ ಮುಂತಾದ ಹಿರಿಯ ವಿದ್ವಾಂಸರನ್ನು ಪರಿಚಯಿಸಿದರು. ಇವರೆಲ್ಲಾ ವೆಂಕಣ್ಣಯ್ಯನವರ ಜೀವದ ಗೆಳೆಯರಾದರು.

ಜ್ಞಾನಕಣ್ಣನ್ ವೆಂಕಣ್ಣಯ್ಯನವರ ಬಗ್ಗೆ ವಿಶ್ವಾಸ ವ್ಯಕ್ತಪಡಿಸಲು ಕಾರಣವೆಂದರೆ ಬಳ್ಳಾರಿಯ ವಾರ್ಡ್‌ಲಾ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಅಲ್ಲಿ ನಡೆದ ಬೈಬಲ್ ಸ್ಪರ್ಧೆಯಲ್ಲಿ ವೆಂಕಣ್ಣಯ್ಯನವರು ಪ್ರಥಮ ಬಹುಮಾನ ಪಡೆದದ್ದು ಕ್ರೈಸ್ತರಿಗೆಲ್ಲ ಆಶ್ಚರ್ಯವಾಗಿ ಕಂಡಿದ್ದು, ಆ ಬಹುಮಾನ ಪಡೆದವರ ಬಗ್ಗೆ ಅಭಿಮಾನ ಉಂಟಾಗಿತ್ತು. ಹೀಗಾಗಿ ಜ್ಞಾನಕಣ್ಣನ್ ಅವರನ್ನು ಬರಮಾಡಿಕೊಂಡಿದ್ದರು.

ವೆಂಕಣ್ಣಯ್ಯನವರಿಗೆ ಧಾರವಾಡದಲ್ಲಿ ವಾಸಕ್ಕೆ ಮನೆಯೊಂದು ದೊರೆಯಿತು. ತಮ್ಮ ಮೊದಲ ಸಂಬಳ ಅರವತ್ತು ರೂಪಾಯಿಯಲ್ಲಿ ಮೂವತ್ತು ರೂಪಾಯಿಗಳನ್ನು ತಂದೆ ಸುಬ್ಬಣ್ಣನವರಿಗೆ ಕಳುಹಿಸಿದರು. ಮಗನ ಅಭ್ಯುದಯದಿಂದ ಸಂತೋಷಗೊಂಡ ತಂದೆಯವರು ಹೆಮ್ಮೆಪಟ್ಟರು. ವೆಂಕಣ್ಣಯ್ಯನವರು ತಮ್ಮ ಪತ್ನೀಪುತ್ರರೊಂದಿಗೆ ತಮ್ಮ ಕೃಷ್ಣರಾಯರನ್ನು ಧಾರವಾಡಕ್ಕೆ ಕರೆಸಿಕೊಂಡು ವಿದ್ಯಾಭ್ಯಾಸಕ್ಕೆ ಅನುಕೂಲಮಾಡಿದರು. ತಂದೆಗೆ ಪ್ರತಿ ತಿಂಗಳೂ ತಪ್ಪದೆ ಹಣ ಕಳುಹಿಸುತ್ತಿದ್ದರು.

ಧಾರವಾಡದಲ್ಲಿ ವೆಂಕಣ್ಣಯ್ಯನವರು 'ತಳಕು ಮಾಸ್ತರ್' ಎಂದೇ ಪ್ರಸಿದ್ಧರಾದರು. ವರ್ಷದೊಳಗಾಗಿ ಅತ್ಯಂತ ಜನಪ್ರಿಯ ಉಪಾಧ್ಯಾಯರಾಗಿ ಇಂಗ್ಲಿಷ್, ಇತಿಹಾಸ ದೊಂದಿಗೆ ಕನ್ನಡವನ್ನೂ ಬೋಧಿಸುತ್ತಿದ್ದರು. ಅವರ ಬೋಧನಾಕ್ರಮ ವಿದ್ಯಾರ್ಥಿಗಳ ಮನಸೂರೆಗೊಂಡು ಮೂಲೆಗುಂಪಾಗಿದ್ದ ಕನ್ನಡ ಎಲ್ಲಕ್ಕಿಂತ ಅಚ್ಚುಮೆಚ್ಚಿನ ವಿಷಯ ವಾಯಿತು. ಅವರು ವಿದ್ಯಾರ್ಥಿಗಳಿಗೆ ಭಾಷಣಕಲೆ ಕಲಿಸುವುದು, ವಾರ್ಷಿಕೋತ್ಸವದಲ್ಲಿ ನಾಟಕ ಆಡಿಸುವುದು ಇತ್ಯಾದಿ ರೀತಿಗಳಿಂದ ಶಾಲೆಯಲ್ಲಿ ಹೊಸ ಚೈತನ್ಯವನ್ನು ಮೂಡಿಸಿ, ಶಾಲೆಯ ಬಗ್ಗೆ ಜನ ಸದ್ಭಾವನೆ ಬೆಳೆಸಿಕೊಳ್ಳಲು ಕಾರಣರಾದರು.

**ಅಗಡಿ ಸ್ವಾಮಿಗಳ ಸಾನಿಧ್ಯದಲ್ಲಿ**

"ವೆಂಕಣ್ಣಯ್ಯನವರ ಮೇಲೆ ಪ್ರಭಾವ ಬೀರಿದ ಎರಡು ಶಕ್ತಿಗಳಲ್ಲಿ ಅಗಡಿಯ ಶೇಷಾಚಲ ಭಗವಾನರು ಮತ್ತೊಬ್ಬರು ಶ್ರೀರಾಮಕೃಷ್ಣ ಪರಮಹಂಸರು. ವೆಂಕಣ್ಣಯ್ಯ ನವರು ತಮ್ಮ ತಂದೆಯವರಿಂದ ಅಗಡಿ ಸಾಧುಗಳ ಹೆಸರನ್ನು ಕೇಳಿದ್ದರು. ಆಗಾಗ ಶ್ರೀಕಂಠಶಾಸ್ತ್ರಿಗಳಿಂದ ಅವರು ದೇವಮಾನವರೆಂದು ಕೇಳಿದ್ದರಾದರೂ ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಎರಡು ದೇಹ ಒಂದು ಜೀವದಂತೆ ಇದ್ದ ಶಾಸ್ತ್ರಿಗಳ ಅಗಲಿಕೆಯನ್ನು ಸಹಿಸಲಾಗದೆ ಬೇಸಿಗೆ ರಜೆ ಬಂದೊಡನೆ ಗೆಳೆಯನನ್ನು ಕಾಣಲು ಅಗಡಿಯ ಆನಂದವನಕ್ಕೆ ಧಾವಿಸಿ ಮಿತ್ರನನ್ನು ಕಂಡೊಡನೆ ಹೃದಯ ತುಂಬಿ ಬಂದು ಆನಂದಬಾಷ್ಪ

ಸುರಿಸುತ್ತಾ ಗಾಢಾಲಿಂಗನ ಮಾಡಿಕೊಂಡರು. ಸಂತೋಷದ ಕಾವು ಇಳಿದ ನಂತರ ಶಾಸ್ತ್ರಿಗಳು ತಮ್ಮ ಗೆಳೆಯನನ್ನು ಶೇಷಾಚಲ ಸಾಧುಗಳ ಬಳಿಗೆ ಕರೆದೊಯ್ದಾಗ ಸಾಧುಗಳು ಧ್ಯಾನಮಗ್ನರಾಗಿದ್ದರು. ಗೆಳೆಯರಿಬ್ಬರೂ ಅವರಿಗೆ ದೀರ್ಘದಂಡ ಪ್ರಣಾಮವನ್ನು ಸಲ್ಲಿಸಿ ಕೈಮುಗಿದು ನಿಂತ ಮರುಕ್ಷಣದಲ್ಲಿ ಸಾಧುಗಳು ಮೆಟ್ಟಿಬಿದ್ದವರಂತೆ ಎಚ್ಚರಗೊಂಡು ಅವರು ವೆಂಕಣ್ಣಯ್ಯನವರತ್ತ ಚಿರಪರಿಚಿತರಂತೆ ನೋಡುತ್ತಾ 'ನಮಸ್ಕಾರ ಮಹಾರಾಜ ನಿಮ್ಮ ದರ್ಶನ ಮಾಡಬೇಕೆಂದು ಎಷ್ಟು ದಿನದಿಂದ ಕಾದಿದ್ದೆ. ಅಂತೂ ಬಂದಿರಲ್ಲ; ಬಹಳ ಚಲೋದಾಯಿತು, ಕೂತುಕೊಳ್ಳಿ ಮಹಾರಾಜ್' ಎಂದಾಗ, ವೆಂಕಣ್ಣಯ್ಯನವರಿಗೆ ಆಶ್ಚರ್ಯವಾಯಿತು. ಇದೇ ಮಾತನ್ನು ಶ್ರೀರಾಮಕೃಷ್ಣ ಪರಮಹಂಸರು ಮೊಟ್ಟ ಮೊದಲ ಬಾರಿಗೆ ನರೇಂದ್ರನನ್ನು ಕಂಡಾಗ ಹೇಳಿದುದು ನೆನಪಿಗೆ ಬಂತು. 'ನಾನೇನು ನರೇಂದ್ರನೇ? ಆತನಂತೆ ಬೆಳಕನ್ನು ಅರಸುತ್ತಾ ಬಂದಿದ್ದೇನೆಯೇ? ಎಂದುಕೊಂಡ ಭಾವನೆ ಮನಸ್ಸಿನಲ್ಲಿ ಸುಳಿಯುತ್ತಿದ್ದಂತೆ, ಸಾಧುಗಳು, 'ದೊಡ್ಡವರು ಹೇಳುವುದೆಲ್ಲಾ ಒಂದೇ ಮಾತು ಮಹಾರಾಜ್, ಹೇಳುವ ರೀತಿ ಬೇರೆ ಅಷ್ಟೇ' ಎಂದಾಗ ವೆಂಕಣ್ಣಯ್ಯನವರಿಗೆ ಪರಮಾಶ್ಚರ್ಯವಾಯಿತು. ಅವರಿಗೆ ಉತ್ತರಿಸುವ ಮೊದಲೇ ಸಾಧುಗಳೂ ಶಾಸ್ತ್ರಿಗಳ ಕಡೆ ತಿರುಗಿ 'ಬಡವರ ಆಶ್ರಮಕ್ಕೆ ದೊಡ್ಡವರು ಬಂದಿದ್ದಾರೆ ಮಹಾರಾಜ್, ಎರಡು ದಿನ ಹಾಯಾಗಿಟ್ಟುಕೊಂಡು ಕಳಿಸಿ' ಎಂದು ಹೇಳಿ ಕಣ್ಣು ಮುಚ್ಚಿದರು. ಇದು ವೆಂಕಣ್ಣಯ್ಯ ನವರಿಗೆ ಶ್ರೀಸಾಧುಗಳ ಪ್ರಪ್ರಥಮ ದರ್ಶನವಾಗಿತ್ತು.

ವೆಂಕಣ್ಣಯ್ಯನವರು ಎರಡು ದಿನ ಆಶ್ರಮದಲ್ಲಿ ತಂಗಿದ್ದಾಗ, ಅವರಿಗೆ ಅಲ್ಲಿದ್ದ ನಾರಾಯಣ ಭಗವಾನ್, ಶಂಕರಭಗವಾನ್, ಶ್ರೀನಿವಾಸ ಶಾಸ್ತ್ರಿಗಳು, ಎಲ್ಲೋ ಗುಡ್ಡೋ ಕುಲಕರ್ಣಿ ಮುಂತಾದ ಭಗವದ್ಭಕ್ತರೂ, ಅಧ್ಯಾತ್ಮದಲ್ಲಿ ತುಂಬಾ ಮುಂದುವರೆದವರ ಪರಿಚಯ ವಾಯಿತು. ಅವರ ಸಹವಾಸ, ಸಂಭಾಷಣೆ, ಅಲ್ಲಿನ ಪ್ರಶಾಂತ ವಾತಾವರಣ, ಜನರ ನಡೆನುಡಿಗಳೆಲ್ಲವೂ ವೆಂಕಣ್ಣಯ್ಯನವರ ಭಾವುಕ ಹೃದಯದ ಮೇಲೆ ಚಿರಮುದ್ರೆ ಒತ್ತಿದವು.

ವೆಂಕಣ್ಣಯ್ಯನವರು ಆ ವರ್ಷ ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಸಂತೋಷದ ವಿಚಾರವನ್ನು ಸ್ನೇಹಿತರಾದ ಶಾಸ್ತ್ರಿಗಳಿಗೆ ಹೇಳಿಕೊಳ್ಳಲು ಹಾಗೂ ಮಾನವ ದೇವ ರಂತಿರುವ ಶ್ರೀ ಸಾಧುಗಳ ದರ್ಶನಕ್ಕಾಗಿ ಮತ್ತೊಮ್ಮೆ ಅಗಡಿಗೆ ಹೋಗಿದ್ದಾಗ, ಸಾಧುಗಳ ಸಾನಿಧ್ಯದಲ್ಲೇ ಹೆಚ್ಚು ಸಮಯವನ್ನು ಕಳೆಯುತ್ತಿದ್ದು, ಒಂದು ದಿನ ಮುಂಜಾನೆ ಸಾಧುಗಳ ಪೂಜೆಯನ್ನು ನೋಡಬೇಕೆಂದು ಹೋದರು. ಅವರ ಇದಿರಿನಲ್ಲಿ ಅವರದೊಂದು ಭಾವಚಿತ್ರ, ಅದಕ್ಕೆ ಪೂಜೆಯಾಗುತ್ತಿತ್ತು. ಸಾಧುಗಳೇ ಸ್ವತಃ ಪೂಜೆ ಮಾಡುತ್ತಿದ್ದುದು ವಿಲಕ್ಷಣವಾಗಿ ಕಾಣಿಸಿತು. ತಮ್ಮ ಭಾವಚಿತ್ರಕ್ಕೆ ತಾವೇ ಷೋಡಷೋಪಚಾರ ಪೂಜೆ, ಕಾಕಡಾರತಿ ತಮ್ಮ ಗುಣಗಾನವನ್ನೇ ಹಾಡುವುದು ಕಂಡಾಗ ಒಂದು ಕ್ಷಣ ಮನದಲ್ಲಿ ಗಲಿಬಿಲಿ ಯಾಯಿತು. ಪೂಜೆಯನ್ನು ಮುಗಿಸಿದ ಸಾಧುಗಳು 'ಮಹಾರಾಜ್ ಈ ಪೂಜೆಯನ್ನು ನೋಡಿ ನಿಮಗೆ ಆಶ್ಚರ್ಯವಾಗಿರಬಹುದು. ಅಹುದು ಮಹಾರಾಜ್ ಒಳಗಿರುವ ಆತ್ಮ ಎಲ್ಲರಲ್ಲೂ ಒಂದೇ. ಅದು ಈ ದೇಹವಲ್ಲ, ಈ ಕವಚದ ಒಳಗಡೆ ಇರುವ ಭವ್ಯ ದಿವ್ಯವಾದ ಜ್ಯೋತಿ, ಈ ಅರ್ಥದಲ್ಲಿಯೇ ಶಂಕರಾಚಾರ್ಯರು 'ಅಹಂಬ್ರಹ್ಮಾಸ್ಮಿ'

ಎಂದಿದ್ದಾರೆ ಎಂದರು. ಅವರ ಮಾತು ಸರಳವಾಗಿದ್ದರೂ ಅದರಿಂದ ಅದ್ಭುತವಾದ ದಿವ್ಯದರ್ಶನ ವೊಂದು ಗೋಚರಿಸಿದಂತಾಯಿತು; ಸತ್ಯ ಸಾಕ್ಷಾತ್ಕಾರ ವಾದಂತಾಯಿತು. ಇದನ್ನು ಹೇಳುತ್ತಾ ವೆಂಕಣ್ಣಯ್ಯನವರು ಏನು ಹೇಳುತ್ತಾರೆಂಬುದು ಮುಖ್ಯವಲ್ಲ, ಯಾರು ಹೇಳುತ್ತಾರೆಂಬುದು ಮುಖ್ಯ ಎನ್ನುತ್ತಿದ್ದರು.

ವೆಂಕಣ್ಣಯ್ಯನವರು ಆಶ್ರಮದಿಂದ ಹಿಂದಿರುಗುವ ಮುನ್ನ ತಮ್ಮ ಒಂದು ತಿಂಗಳ ಸಂಬಳವನ್ನು ಸಾಧುಗಳ ಮುಂದೆ ಇಟ್ಟು ಸ್ವೀಕರಿಸಬೇಕೆಂದು ಬೇಡಿಕೊಂಡಾಗ ಸಾಧುಗಳು 'ಮಹಾರಾಜ್ ಈ ಹಣ ಸದ್ಯಕ್ಕೆ ನಮಗಿಂತ ನಿಮಗೆ ಹೆಚ್ಚು ಅಗತ್ಯ, ಅದನ್ನು ಜೇಬಿಗೆ ಹಾಕಿ, ಅದು ನಮ್ಮದಾಗಿ, ನಿಮ್ಮಲ್ಲಿರಲಿ; ಮುಂದೆ ನೀವು ಐನೂರು ರೂಪಾಯಿ ಪಗಾರ ಬರುವ ದೊಡ್ಡ ಅಧಿಕಾರಿಗಳಾಗುತ್ತೀರಿ, ನಿಮ್ಮ ಕೀರ್ತಿ ದಿಗಂತ ವಿಶ್ರಾಂತವಾಗುತ್ತದೆ. ಆಗ ನಿಮ್ಮ ಒಂದು ತಿಂಗಳ ಪಗಾರದೊಡನೆ ಇದನ್ನು ಕೂಡಿಸಿ ಕೊಡಿರಿ, ಎಂದು ಹೇಳಿ ಆಶೀರ್ವದಿಸಿ ಫಲ ಮಂತ್ರಾಕ್ಷತೆಯನ್ನು ಕೊಟ್ಟಾಗ, ವೆಂಕಣ್ಣಯ್ಯ ನವರು ಶಾಸ್ತ್ರಿಗಳತ್ತ ನೋಡಿದರು. ಅವರು ಮುಗುಳು ನಗುತ್ತಾ 'ಸಾಧುಗಳ ಅನುಗ್ರಹ' ಎಂದರು. ಸಾಧುಗಳು ಗಹಗಹಿಸಿ ನಗುತ್ತಾ 'ಮಹಾರಾಜ ನುಡಿದಂತೆ ನಡಿ, ನಿನ್ನ ಜನ್ಮಕ್ಕೆ ಇದೇ ಕಡಿ' ಎಂದರು. ವೆಂಕಣ್ಣಯ್ಯನವರು ಹನಿಗಣ್ಣಾಗಿ ಅವರ ದಿವ್ಯವಾಣಿಯನ್ನೇ ಮೆಲುಕು ಹಾಕುತ್ತಾ ಧಾರವಾಡಕ್ಕೆ ಹಿಂದಿರುಗಿದರು.

ಅನಂತರ ವೆಂಕಣ್ಣಯ್ಯನವರ ಜೀವನದಲ್ಲಿ ಉಂಟಾದ ಮಾರ್ಪಾಟು ಒಂದು ಸುಂದರವಾದ ಸ್ವರ್ಣಸ್ವಪ್ನವಾಗಿತ್ತು. ಅವರು ಬೆಂಗಳೂರಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಅಧ್ಯಾಪಕರಾಗಿ, ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಪ್ರಪ್ರಥಮ ಪ್ರಾಧ್ಯಾಪಕರಾದರು. ಶೇಷಾಚಲ ಸಾಧುಗಳು ಆ ಸಮಯಕ್ಕೆ ಪರಮಪದವನ್ನು ಸೇರಿದ್ದು, ಅವರ ಪರವಾಗಿ ನಾರಾಯಣ ಭಗವಾನರು ವೆಂಕಣ್ಣಯ್ಯನವರ ಒಂದು ತಿಂಗಳ ಸಂಬಳ ೫೭೫ರೂ.ಗಳನ್ನು 'ಎಲ್ಲಿ ನಮ್ಮ ಹಳೆಯ ಸಾಲ' ಎಂದು ಕೇಳಿ ಅದನ್ನು ತೆಗೆದುಕೊಂಡು ಹೋದರು.

### ಉದ್ಯೋಗಕ್ಕಾಗಿ ಬೆಂಗಳೂರಿಗೆ; ತಂದೆಯವರ ನಿಧನ

ವಿದ್ಯೆಗೆ ತಕ್ಕ ವೃತ್ತಿಯನ್ನು ಹುಡುಕುತ್ತಾ ಬಂಧುಮಿತ್ರರ ಒತ್ತಾಯಕ್ಕೆ ಕಟ್ಟುಬಿದ್ದು, ವೆಂಕಣ್ಣಯ್ಯನವರು ಮೂರು ವರ್ಷಗಳ ಅಧ್ಯಾಪನಸೇವೆಯ ನಂತರ ಧಾರವಾಡವನ್ನು ತೊರೆದು ಬೆಂಗಳೂರಿಗೆ ಆಗಮಿಸಿ, ಬೆಂಗಳೂರಿನ ಸೈಂಟ್ ಜೋಸೆಫ್ಸ್ ಹೈಸ್ಕೂಲಿನಲ್ಲಿ ಇತಿಹಾಸದ ಅಧ್ಯಾಪಕರಾಗಿ ೧೯೧೬ರಲ್ಲಿ ಸೇವೆಯನ್ನು ಪ್ರಾರಂಭಿಸಿದರು. ದೊಡ್ಡ ಬಂಗಲೆಯೊಂದನ್ನು ಕಂಟೋನ್ಮೆಂಟಿನಲ್ಲಿ ಬಾಡಿಗೆಗೆ ಪಡೆದು ತಮ್ಮ ಕುಟುಂಬದೊಂದಿಗೆ, ದೊಡ್ಡಮ್ಮ ಹಾಗೂ ತಮ್ಮ ಕೃಷ್ಣರಾಯರನ್ನು ಕರೆಸಿಕೊಂಡಿದ್ದಲ್ಲದೆ, ವಿಶಾಲವಾದ ಮನೆಯಾದುದರಿಂದ ಸ್ನೇಹಿತರಾದ ಎ.ಎನ್. ನರಸಿಂಹಯ್ಯ ಮತ್ತು ಎ.ಆರ್. ಕೃಷ್ಣಶಾಸ್ತ್ರಿಗಳನ್ನು ಕುಟುಂಬ ಸಮೇತ ಬಂದು ನೆಲೆಸುವಂತೆ ಆಹ್ವಾನಿಸಿದಾಗ ಅವರುಗಳೂ ಜೊತೆಗೆ ಬಂದು ನೆಲೆಸಿದರು.

ಒಮ್ಮೆ ಜೀವದ ಗೆಳೆಯರಾದ ಕೃಷ್ಣಶಾಸ್ತ್ರಿಗಳಿಗೆ ಅನಾರೋಗ್ಯವಾಗಿ ಸಾವು ಬದುಕಿನೊಂದಿಗೆ ಹೋರಾಡುತ್ತಿದ್ದ ಸಂದರ್ಭದಲ್ಲಿ ಎಂದಿಗೂ ಯಾವುದಕ್ಕೂ ದೇವರನ್ನು ಬೇಡದ ವೆಂಕಣ್ಣಯ್ಯನವರು 'ನನ್ನ ಆಯಸ್ಸಿನಲ್ಲಿ ಒಂದು ಭಾಗವನ್ನು ಕೃಷ್ಣನಿಗೆ ಕೊಟ್ಟು ಅವನನ್ನು ಉಳಿಸು' ಎಂದು ದೇವರಲ್ಲಿ ಮೊರೆಯಿಟ್ಟಾಗ ಪವಾಡವೆಂಬಂತೆ ಕೃಷ್ಣಶಾಸ್ತ್ರಿಗಳ ಅನಾರೋಗ್ಯ ಗುಣವಾಯಿತು. ಈ ಘಟನೆಯನ್ನು ಕೃಷ್ಣಶಾಸ್ತ್ರಿಗಳು ತಮ್ಮ ಜೀವವಿರುವ ತನಕ ಕೃತಜ್ಞತೆಯಿಂದ ಸ್ಮರಿಸುತ್ತಿದ್ದರು.

ವೆಂಕಣ್ಣಯ್ಯನವರು ಸರ್ಕಾರಿ ಉದ್ಯೋಗಕ್ಕಾಗಿ ಪ್ರಯತ್ನಿಸುತ್ತಿದ್ದಂತೆ ಅಂದಿನ ಮೈಸೂರು ಸರ್ಕಾರ ೧೯೧೦ರಲ್ಲಿ ನಾಲ್ಕು ಪ್ರಾಯೋಗಿಕ ಶಾಲೆಗಳನ್ನು ಪ್ರಾರಂಭಿಸಿದಾಗ, ದೊಡ್ಡಬಳ್ಳಾಪುರದಲ್ಲಿ ಪ್ರಾರಂಭವಾದ ಇಂಥ ಶಾಲೆಗೆ ಮುಖ್ಯೋಪಾಧ್ಯಾಯರಾಗಿ ನೇಮಕಗೊಂಡವರು ಕೆಲವು ತಿಂಗಳ ನಂತರ ಬೆಂಗಳೂರಿನ ಕೊಲಿಜಿಯೇಟ್ ಹೈಸ್ಕೂಲಿಗೆ ಇಂಗ್ಲಿಷ್ ಉಪಾಧ್ಯಾಯರಾಗಿ ನೇಮಿಸಲ್ಪಟ್ಟರು.

ಅವರು ದೊಡ್ಡಬಳ್ಳಾಪುರದಲ್ಲಿದ್ದಾಗ ಒಂದು ವಿಲಕ್ಷಣವಾದ ಘಟನೆ ನಡೆಯಿತು. ಮನೆಯಲ್ಲಿದ್ದವರೆಲ್ಲ ಊರಿಗೆ ಹೋಗಿದ್ದು, ಏಕಾಂಗಿಗಳಾಗಿದ್ದ ವೆಂಕಣ್ಣಯ್ಯನವರ ಬಳಿಗೆ ಒಂದು ಸಂಜೆ ಇಳಿವಯಸ್ಸಿನ ಅಪರಿಚಿತ ಬ್ರಾಹ್ಮಣನೊಬ್ಬನು ಬಂದು ತನಗೆ ಚಿರೋಟಿ ತಿನ್ನುವ ಆಸೆಯಾಗಿರುವುದರಿಂದ ಅದನ್ನು ಈಡೇರಿಸಬೇಕೆಂದು ಕೇಳಿದಾಗ, ತಮಗೆ ಚಿರೋಟಿ ಮಾಡಿಸುವ ಅನುಕೂಲವಿಲ್ಲವೆಂದೂ, ಅದಕ್ಕಾಗುವ ಖರ್ಚನ್ನು ಕೊಡುವುದಾಗಿ ಹೇಳಿದರೂ ಆ ಬ್ರಾಹ್ಮಣ ಒಪ್ಪದಿದ್ದಾಗ "ಇದಾವ ದೇವರ ವಿಚಿತ್ರ ಪರೀಕ್ಷೆಯೋ? ಆದದ್ದಾಗಲಿ" ಎಂದು ಭಕ್ಷ್ಯಕ್ಕೆ ಬೇಕಾದ ಸಾಮಗ್ರಿಗಳನ್ನು ತರಿಸಿಕೊಟ್ಟಾಗ, ಆತನೇ ಬುಟ್ಟಿ ತುಂಬ ಚಿರೋಟಿಗಳನ್ನು ತಯಾರಿಸಿ, ಎಲ್ಲವನ್ನೂ ತಾನೇ ತಿಂದನು. ವೆಂಕಣ್ಣಯ್ಯನವರಿಗೆ ರುಚಿಗಾದರೂ ಚೂರು ತಿನ್ನುವಂತೆ ಹೇಳಲಿಲ್ಲ. ಅನಂತರ ತಾಂಬೂಲ ಹಾಕಿಕೊಂಡು "ಅಯ್ಯ ಪುಣ್ಯಾತ್ಮ! ನನಗೆ ತೃಪ್ತಿಯಾಯಿತು. ದೇವರು ನಿನಗೆ ಮಂಗಳವನ್ನುಂಟು ಮಾಡಲಿ, ಸ್ವಲ್ಪ ಕಾಲದಲ್ಲಿಯೇ ನಿಮಗೆ ಒಳ್ಳೆಯ ಸ್ಥಾನ ಸಿಗುತ್ತದೆ" ಎಂದು ಹರಸಿ ಮರೆಯಾದವನು ಯಾರು, ಎಲ್ಲಿಯವನೆಂಬುದೊಂದೂ ತಿಳಿಯಲೇ ಇಲ್ಲ. ಈ ಘಟನೆಯಾದ ಕೆಲವೇ ದಿನಗಳ ನಂತರ ಅಂದರೆ ೧೯೧೯ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಟ್ಯೂಟರ್ ಆಗಿ ನೇಮಕಗೊಂಡರು.

"ಕಾಲೇಜಿನಲ್ಲಿ ಅಧ್ಯಾಪಕ ತಮ್ಮ ಮಗ!" ಸುಬ್ಬಣ್ಣನವರ ಸಂತೋಷಕ್ಕೆ ಪಾರವೇ ಇಲ್ಲ. ಆದರೆ ಆ ಸಂತೋಷವನ್ನು ಅನುಭವಿಸಲು ಅವರು ಬಹಳ ಕಾಲವಿರಲಿಲ್ಲ. ೧೯೧೮ರಲ್ಲಿ ಭಾರತದಲ್ಲಿ ಹರಡಿದ್ದ ಇನ್‌ಫ್ಲುಯೆಂಜಾ ಖಾಯಿಲೆಗೆ ಸುಬ್ಬಣ್ಣನವರು ಪ್ರಾಣಾರ್ಪಣೆ ಮಾಡಿದರು. ತಂದೆಯವರ ಅನಾರೋಗ್ಯವನ್ನು ತಿಳಿದು ಶ್ರೀಕಂಠಶಾಸ್ತ್ರಿಗಳೊಡನೆ ಧಾವಿಸಿದ ವೆಂಕಣ್ಣಯ್ಯನವರಿಗೆ ತಂದೆಯವರ ಅಂತಿಮದರ್ಶನವೂ ಆಗಲಿಲ್ಲ. ಹಿಂದಿನ ದಿನವೇ ಕಾಲವಾಗಿದ್ದರು. ತಂದೆಯ ಅಗಲಿಕೆ ಹಾಗೂ ತಾಯಿಯ ವೈಧವ್ಯ ವೆಂಕಣ್ಣಯ್ಯನವರ ಕರುಳಿರಿಯಿತು. ಸಂಸಾರದ ಸಾಲ ಹಾಗೂ ಹೊಣೆಯನ್ನೆಲ್ಲಾ ತಾವೇ ಹೊತ್ತು ತಮ್ಮ ಕೃಷ್ಣರಾವ್ ಅವರಿಗೆ ತಳಕಿನಲ್ಲೇ ಇದ್ದು ಸುಬ್ಬಣ್ಣನವರ ಮಕ್ಕಳ ಜವಾಬ್ದಾರಿಯನ್ನು ಒಪ್ಪಿಸಿ,

ಆಸ್ತಿಯಲ್ಲಿ ಬಿಡಿಗಾಸನ್ನೂ ಬಯಸದೇ, ತಂದೆಯವರ ನೆನಪಿಗಾಗಿ ಅವರ ಅಂಗಿಯೊಂದನ್ನು ಇಟ್ಟುಕೊಂಡರು! ವಿಧವೆ ತಾಯಿ "ಗಂಡನಿಲ್ಲದ ಮನೆಯಲ್ಲಿ ವಾಸಮಾಡಲೊಪ್ಪದೆ" ವೆಂಕಣ್ಣಯ್ಯನವರೊಂದಿಗಿದ್ದರು. ಅನಂತರ ಆಸ್ತಿ ವಿಭಜನೆ ಮಕ್ಕಳಿಗೆಲ್ಲಾ ಆಯಿತು.

**ಕನ್ನಡ ಸಾಹಿತ್ಯ ಪರಿಷತ್ತು – ಕರ್ಣಾಟಕ ಸಂಘ ಸ್ಥಾಪನೆ**

ರಾಷ್ಟ್ರಪ್ರೇಮದೊಂದಿಗೆ ಸ್ವಭಾಷಾ ಸಾಹಿತ್ಯ ಪ್ರೇಮವು ಸೇರಿದ ಪರಿಣಾಮವಾಗಿ ೧೯೧೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಯಾದ ಒಂದೆರಡು ವರ್ಷದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕ ಸಂಘವು ಸ್ಥಾಪನೆಯಾಗಿ, ಅದರ ಮುಖಪತ್ರಿಕೆಯಾಗಿ ೧೯೧೯ರಲ್ಲಿ ಎ.ಆರ್. ಕೃಷ್ಣಶಾಸ್ತ್ರಿಗಳು 'ಪ್ರಬುದ್ಧ ಕರ್ಣಾಟಕ'ವನ್ನು ಪ್ರಾರಂಭಿಸಿದರು. ಅವರಿಗೆ ಸಹಾಯಕರಾಗಿ ನಿಂತವರು ಟಿ.ಎಸ್. ವೆಂಕಣ್ಣಯ್ಯನವರು. ಕನ್ನಡ ಸಾಹಿತ್ಯ ಪರಿಷತ್ತು, ಕರ್ಣಾಟಕ ಸಂಘ ಹಾಗೂ ಪತ್ರಿಕೆಯ ಬೆಳವಣಿಗೆಯಲ್ಲಿ ಇವರಿಬ್ಬರೂ ಅಹರ್ನಿಶಿ ದುಡಿದರು. ಅಂದಿನ ಕನ್ನಡದ ವಿದ್ವಾಂಸರುಗಳೆಲ್ಲರೂ ಒಂದಲ್ಲ ಒಂದು ಸಂದರ್ಭದಲ್ಲಿ ಕರ್ಣಾಟಕ ಸಂಘದಲ್ಲಿ ಭಾಷಣ ಮಾಡಿ, ಕೃತಿ ರಚನೆಮಾಡಿ, ಸಂಘದ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕನ್ನಡದ ಕೆಲಸವನ್ನು ನೆರವೇರಿಸಿದವರಲ್ಲಿ ಡಿ.ವಿ. ಗುಂಡಪ್ಪನವರು, ಮಾಸ್ತಿ ವೆಂಕಟೇಶ ಅಯ್ಯಂಗಾರರು, ಬಿ.ಎಂ.ಶ್ರೀಕಂಠಯ್ಯನವರು, ಎಂ.ಆರ್. ಶ್ರೀನಿವಾಸಮೂರ್ತಿಗಳು, ಸಿ.ಕೆ. ವೆಂಕಟರಾಮಯ್ಯನವರು ವಿ. ಸೀತಾರಾಮಯ್ಯನವರು, ಎಸ್.ವಿ. ರಂಗಣ್ಣನವರು, ಬೆಳ್ಳಾವೆ ವೆಂಕಟ ನಾರಾಯಣಪ್ಪನವರು ಇಂತಹ ಮಹನೀಯರ ಸಹಕಾರ ಪ್ರೋತ್ಸಾಹಗಳಿಂದ ಕನ್ನಡದ ಕಾರ್ಯಗಳಿಗೆ ಕರ್ಣಾಟಕ ಸಂಘವು ಕೇಂದ್ರಸ್ಥಾನವಾಗಿತ್ತು.

ಕರ್ಣಾಟಕ ಸಂಘ ವಿಮರ್ಶೆಯ ಹೊಸ ದೃಷ್ಟಿಕೋನವನ್ನು ಮೂಡಿಸಿತು. ಈ ಸಂಘದ ಪ್ರಕಟಣೆಯಾದ 'ಪ್ರಬುದ್ಧ ಕರ್ಣಾಟಕ'ವು ಕನ್ನಡ ಸಾಹಿತ್ಯದ ಮುನ್ನಡೆಗೆ ಅನನ್ಯ ಸೇವೆಯನ್ನು ಸಲ್ಲಿಸಿತು. "ಶಾಸ್ತ್ರಿಗಳ ಕರ್ತೃತ್ವ ವೆಂಕಣ್ಣಯ್ಯನವರ ವ್ಯಕ್ತಿತ್ವದಿಂದ ಪತ್ರಿಕೆಗೆ ಸ್ಪಷ್ಟವಾದ ಆಕಾರವು ದೊರೆಯಿತು" ಕೃಷ್ಣಶಾಸ್ತ್ರಿಗಳು ಮೈಸೂರಿಗೆ ಹೋದ ನಂತರ ಪ್ರಬುದ್ಧ ಕರ್ಣಾಟಕ ಹಾಗೂ ಕರ್ಣಾಟಕ ಸಂಘದ ಪೂರ್ಣ ಜವಾಬ್ದಾರಿ ವೆಂಕಣ್ಣಯ್ಯನವರದಾಯಿತು. ತಮ್ಮ ವ್ಯಕ್ತಿತ್ವದಿಂದ ತರುಣ ವಿದ್ಯಾರ್ಥಿಗಳನ್ನು ಆಕರ್ಷಿಸಿ ಅವರನ್ನು ಲೇಖಕರನ್ನಾಗಿ ಕಾರ್ಯಕರ್ತರನ್ನಾಗಿ ಸೇವೆ ಸಲ್ಲಿಸಲು ಪ್ರೋತ್ಸಾಹಿಸಿದರು. ಮುದ್ರಣವಾದ ಪತ್ರಿಕೆಯ ಪ್ರತಿಗಳನ್ನು ಹಂಚಲು, ಅಂಚೆಮನೆಗೆ ಸಾಗಿಸಲು ವೆಂಕಣ್ಣನಯ್ಯನವರ ಮನೆಯಲ್ಲಿ ವಿದ್ಯಾರ್ಥಿಗಳ ದಂಡೇ ನೆರದಿರುತ್ತಿತ್ತು. ಅವರ ಮನೆಯ ಮುಂದೆ 'ಪಾದರಕ್ಷೆಗಳ ಪರಿಷತ್ತು' ಉಂಟಾಗುತ್ತಿತ್ತು. ಈ ಅಳಿಲುಸೇವೆಯಲ್ಲಿ ಖ್ಯಾತ ಸಣ್ಣಕತೆಗಾರರಾದ ಅಶ್ವತ್ಥ ಅವರೂ ಒಬ್ಬರು.

ಕನ್ನಡ ಸಾಹಿತ್ಯ ಪರಿಷತ್ತು ಪ್ರಾಚೀನ ಕಾವ್ಯಗಳ ಸಂಪಾದನ ಕಾರ್ಯವನ್ನು ಕೈಗೊಂಡಾಗ ವೆಂಕಣ್ಣಯ್ಯನವರು ಆ ವಿಚಾರದಲ್ಲಿ ಮಹತ್ವದ ಪಾತ್ರವಹಿಸಿದ್ದರು. ಅವರ

ವ್ಯಷ್ಟಿ ಸೂಕ್ಷ್ಮತೆ, ಔಚಿತ್ಯ ಪ್ರಜ್ಞೆ, ಸೂಕ್ಷ್ಮಾತಿಸೂಕ್ಷ್ಮ ವಿಷಯಗಳ ಬಗೆಗಿನ ವಿವರಣೆಗಳು ಹಿರಿಯ ವಿದ್ವಾಂಸರ ಮೆಚ್ಚುಗೆಯನ್ನು ಪಡೆದಿತ್ತು. ವೆಂಕಣ್ಣಯ್ಯನವರ ವಿಮರ್ಶಾ ಸೂಕ್ಷ್ಮತೆಯನ್ನು ಕುರಿತು ಡಿವಿಜಿಯವರು "ಅವರಿಗಿದ್ದ ಸಾಹಿತ್ಯದ ಅಂತರ್ದೃಷ್ಟಿ ಅಸಾಧಾರಣವಾದುದು. ಇದನ್ನು ಇಂಗ್ಲಿಷ್‌ನಲ್ಲಿ `feel for literature' ಎಂದು ಹೇಳುವುದುಂಟು" ಎಂದಿದ್ದಾರೆ. ಕಾವ್ಯದ ಒಂದು ಪಂಕ್ತಿ, ಒಂದು ಸನ್ನಿವೇಶ ಅಥವಾ ಒಂದು ಪದ್ಯವನ್ನು ಗಮನಿಸಿದೊಡನೆ ಇಷ್ಟೇ ಇದರ ಸ್ವಾರಸ್ಯ ಎಂದು ಸ್ಪಷ್ಟವಾಗಿ ನಿರ್ಣಯ ಹೇಳಬಲ್ಲ ಸಾಮರ್ಥ್ಯ ಅವರಿಗಿತ್ತು. ಡಿವಿಜಿಯವರು ಕನ್ನಡ ಸಾಹಿತ್ಯದಲ್ಲಿ ತಾವು ಅನುಭವಿಸಿರುವ ಸಂತೋಷದ ಬಹುಭಾಗಕ್ಕೆ ವೆಂಕಣ್ಣಯ್ಯನವರಿಗೆ ಋಣಿಯಾಗಿರುವುದಾಗಿ ಸ್ಮರಿಸುತ್ತಾ "ಆತನ ರಸಪರಿಪಾಕದ ತಾರತಮ್ಯ ವಿವೇಕ ಬಹುಸೂಕ್ಷ್ಮವಾದುದು. ಆತನ ಓದುಗಾರಿಕೆಯದೇ ಒಂದು ಸೊಗಸು. ಅದಕ್ಕಿಂತ ಮಿಗಿಲಾದುದು ರಸಾಭಿಜ್ಞತೆ" ಎಂದು ಕೊಂಡಾಡುತ್ತಾರೆ.

ಕನ್ನಡ ಸಾಹಿತ್ಯ ಪರಿಷತ್ತಿಗೆ ಡಿವಿಜಿಯವರು ಉಪಾಧ್ಯಕ್ಷರಾದಾಗ ನಿಯಮಾವಳಿಗಳನ್ನು ಜಾರಿಗೆ ತರುವ ಹುಮ್ಮಸ್ಸು ಇದ್ದು ಕಾರ್ಯಕಾರಿ ಸಮಿತಿಯೂ ಉತ್ಸಾಹದ ಅನುಮೋದನೆಯನ್ನು ನೀಡಿದರೂ ಜನರ ಸ್ವಭಾವದ ಅನುಭವವಿದ್ದ ವೆಂಕಣ್ಣನವರು "ನಿಮ್ಮ ನಿಯಮಗಳೊಂದೂ ನಡೆಯುವುದಿಲ್ಲ ಜನರ ಸ್ವಭಾವವೆಂತಹುದೆಂದರೆ ಅವರು ನಿಯಮಗಳೊಂದನ್ನು ನಡೆಯಗೊಡುವುದಿಲ್ಲ" ಎಂದು ತಣ್ಣಗೆ ಹೇಳಿದರು. ಅವರು ಹೇಳಿದ ಮಾತಿನ ಸತ್ಯ ಡಿವಿಜಿಯವರ ಅನುಭವಕ್ಕೂ ಬಂದಿತು. ಪರಿಷನ್ಮಂದಿರದ ನಿರ್ಮಾಣದಲ್ಲೂ ವೆಂಕಣ್ಣಯ್ಯನವರ ಪಾತ್ರವಿರುವುದನ್ನು ಕಾಣಬಹುದು. ಪರಿಷತ್ತಿನಲ್ಲಿ ಉಂಟಾಗುತ್ತಿದ್ದ ಗಂಭೀರವಾದ ಸಮಸ್ಯೆಗಳನ್ನು ಸುಲಲಿತವಾಗಿ ಪರಿಹರಿಸುವಲ್ಲಿ ಅವರ ಜಾಣ್ಮೆ ವ್ಯಕ್ತವಾಗುವುದು ಬಿಜಾಪುರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ವಿಷಯದಲ್ಲಿ ಕಾಣಬಹುದು. ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳಲ್ಲಿ ಮಹತ್ವಪೂರ್ಣವಾದ ಪಾತ್ರವಹಿಸುತ್ತಿದ್ದರೂ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಲು ಅವರು ಜೀವಿಸಿರುವವರೆಗೂ ಒಪ್ಪಲೇ ಇಲ್ಲ. ಆ ಪ್ರಸ್ತಾಪ ಬಂದಾಗ 'ನನಗಿಂತಲೂ ಹಿರಿಯರೂ, ಅರ್ಹರೂ ಬಹಳ ಜನರಿದ್ದಾರೆ!' ಎಂದರು ಅವಕಾಶವನ್ನು ತಪ್ಪಿಸಿಕೊಳ್ಳುತ್ತಿದ್ದರು.

ವೆಂಕಣ್ಣಯ್ಯನವರು ಅತ್ಯುತ್ತಮ ಭಾಷಣಕಾರರಾಗಿದ್ದರು. ಅವರು ವಾಗ್ಧೋರಣೆಯ ಆಡಂಬರದ ಮಾತುಗಳನ್ನಾಡದೆ ಹಿತಮಿತವಾಗಿದ್ದು ವಿಷಯ ಸಾರಗರ್ಭಿತವಾಗಿದ್ದು, ಗಂಭೀರವಾದ ನಿರೂಪಣೆಯಿರುತ್ತಿತ್ತು. ಅವರು ಅನೇಕ ಭಾಷಣಗಳನ್ನು ಪರಿಷತ್ತಿನಲ್ಲಿ ಕರ್ನಾಟಕ ಸಂಘದಲ್ಲಿ ಮಾಡಿದ್ದರು. ಅಂತಹ ಭಾಷಣವೊಂದನ್ನು ಕುರಿತು ಡಿ.ವಿ.ಜಿ.ಯವರು "ವೆಂಕಣ್ಣಯ್ಯ ಅಂದು ಬೆಳಿಗ್ಗೆ ಮಾಡಿದಷ್ಟು ಪರಿಣಾಮಕಾರಿ ಯಾದುದ್ದನ್ನು ನಾನು ಎಂದೂ ಕೇಳಿಲ್ಲ. ಅಂದಿನ ವಿಷಯ ನನಗೆ ಜ್ಞಾಪಕವಿರುವ ಮಟ್ಟಿಗೆ ಪ್ರಾಚೀನ ನವೀನಗಳ ಸಮನ್ವಯ.... ``He spoke like are inpired'' ಎಂದು ಹೇಳುವಂತೆ ಒಂದು ದೈವಾಂಶ ಆವೇಶ ಮಾಡಿದ್ದಂತೆ ಕೇಳಿದವರಿಗೆ ತೋರುತ್ತಿತ್ತು" ಎಂದಿದ್ದಾರೆ.

**ಪತ್ನೀ ವಿಯೋಗ, ಮರುವಿವಾಹ, ಪ್ರಾಧ್ಯಾಪಕ ವೃತ್ತಿ**

ವೆಂಕಣ್ಣಯ್ಯನವರ ಪತ್ನಿ ಭಾಗೀರಥಮ್ಮನವರು ೧೯೨೪ರಲ್ಲಿ ನಿಧನರಾದಾಗ ವೆಂಕಣ್ಣಯ್ಯನವರಿಗೆ ಮಧ್ಯವಯಸ್ಸು. ತಾಯಿ ಮರುವಿವಾಹಕ್ಕೆ ಬಹಳವಾಗಿ ಒತ್ತಾಯಿಸುತ್ತಿದ್ದರು. ಕೆಲವೇ ತಿಂಗಳ ಹಿಂದೆ ಡಿವಿಜಿಯವರ ಪತ್ನಿ ತೀರಿಕೊಂಡಿದ್ದು, ಅವರು ಮರುವಿವಾಹ ಮಾಡಿಕೊಂಡಿರಲಿಲ್ಲವಾದ್ದರಿಂದ ವೆಂಕಣ್ಣಯ್ಯನವರ ನಿರ್ಧಾರವೂ ಅದೇ ಆಗಿದ್ದು. ೧೯೨೫ರಲ್ಲಿ ತಮ್ಮ ಕೊನೆಯ ತಂಗಿಯ ಮದುವೆಯನ್ನು ಮಾಡಿದ್ದರು. ಆ ಮದುವೆಯ ಸಾಲ, ಮನೆಮಂದಿಯ ಪೋಷಣೆ, ವಾರಾನ್ನದ ವಿದ್ಯಾರ್ಥಿಗಳು ಹೀಗಾಗಿ ಅವರಿಗೆ ಸಾಲದಿಂದ ಮುಕ್ತಿಯೇ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮಕ್ಕಳನ್ನು ಕುಟುಂಬ ವರ್ಗದವರನ್ನು ನೋಡಿಕೊಳ್ಳಲು ಯಜಮಾನಿಯೊಬ್ಬಳು ಇರಬೇಕು ಎಂಬ ನೆಪವೊಡ್ಡಿ ತಾಯಿ ಲಕ್ಷ್ಮೀದೇವಮ್ಮನವರು ಮಗನನ್ನು ಒತ್ತಾಯಿಸುತ್ತಿದ್ದರು. ಭಾವಮೈದುನನಾದ ಕಾಶಿನಾಥಶಾಸ್ತ್ರಿಯೂ ಒತ್ತಾಯಿಸಿದಾಗ ಇವರೆಲ್ಲರ ಒತ್ತಾಯಕ್ಕೆ ಮಣಿದು ೧೯೨೬ರಲ್ಲಿ ರುಕ್ಮಿಣಮ್ಮನವರನ್ನು ವಿವಾಹವಾದರು. ವಿವಾಹವಾದ ಆರು ತಿಂಗಳಲ್ಲಿ ಪ್ರಾಧ್ಯಾಪಕರಾಗಿ ವೆಂಕಣ್ಣಯ್ಯನವರು ಮೈಸೂರಿಗೆ ಹೊರಟರು.

ವೆಂಕಣ್ಣಯ್ಯನವರಿಗೆ ಪ್ರೊಫೆಸರ್ ಆಗಿ ಮಹಾರಾಜಾ ಕಾಲೇಜಿಗೆ ಬರಲು ಅವರ ಮನಸ್ಸು ಒಪ್ಪಲಿಲ್ಲ. ಸೇವಾ ಹಿರಿತನವಿರುವ ಎ.ಆರ್. ಕೃಷ್ಣಶಾಸ್ತ್ರಿಗಳಿಗೇ ಆ ಹುದ್ದೆ ಸಿಗಬೇಕೆಂಬುದು ಇವರ ಅಭಿಪ್ರಾಯವಾಗಿತ್ತು. 'ಶ್ರೀ'ಯವರ ಒತ್ತಾಯಕ್ಕೂ ಮಣಿಯದಿದ್ದಾಗ, ಸೆಂಟ್ರಲ್ ಕಾಲೇಜಿನ ಪ್ರಾಂಶುಪಾಲರಾದ ಮೆಟ್‌ಕಾಫ್ ಅವರು ಬೆಂಗಳೂರಿಗೆ ವೆಂಕಣ್ಣಯ್ಯನವರನ್ನು ಕರೆಸಿಕೊಂಡು 'ನೀವು ಅರ್ಜಿ ಹಾಕದಿದ್ದರೆ ಆ ಸ್ಥಾನವು ಸ್ನೇಹಿತರಿಬ್ಬರಿಗೂ ತಪ್ಪಿ ಮೂರನೆಯವರಿಗೆ ಹೋಗುವ ಸಾಧ್ಯತೆಗಳಿದೆಯೆಂದು ತಿಳಿಸಿ ಬಲಾತ್ಕಾರದಿಂದ ಅರ್ಜಿಯಲ್ಲಿ ಸಹಿ ಮಾಡಿಸಿಕೊಂಡು ವಿಶ್ವವಿದ್ಯಾನಿಲಯಕ್ಕೆ ಕಳುಹಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಕನ್ನಡ ಪ್ರೊಫೆಸರ್ ಆಗಿ ವೆಂಕಣ್ಣಯ್ಯನವರು ಅಧಿಕಾರವನ್ನು ಸ್ವೀಕರಿಸಿದರು.

**ಮಹಾನ್ ವ್ಯಕ್ತಿ**

ಮೈಸೂರಿನ ಮಹಾರಾಜಾ ಕಾಲೇಜಿಗೆ ಬಂದ ನಂತರ ಸಹೋದ್ಯೋಗಿಗಳೊಂದಿಗೆ ಸಮರಸವಾಗಿ ಬೆರೆತು ಅವರ ಹೃದಯಗಳನ್ನು ಪ್ರೀತಿಯಿಂದ ಗೆಲ್ಲುವುದರೊಂದಿಗೆ ಕಾಲೇಜಿನ 'ಕಾಮನ್‌ರೂಂ'ನ ಸದಸ್ಯರಾಗಿ ಸಾಮರಸ್ಯ ಸಾಧಿಸಿದರು. ಅವರು 'ಶಿಷ್ಯಸುಲಭ'ರಾಗಿದ್ದರು. ವೆಂಕಣ್ಣಯ್ಯನವರ ಸರಳತೆ, ಸೌಜನ್ಯ, ಸ್ನೇಹ, ಔದಾರ್ಯಗಳು ಅನುಕರಣೀಯವಾಗಿದ್ದು, ಅಧ್ಯಾಪಕರಿಗೆ ಅವರಲ್ಲಿ ಭಯಮಿಶ್ರಿತ ಸಲಿಗೆಯಿದ್ದರೆ, ವಿದ್ಯಾರ್ಥಿಗಳಿಗೆ ತಂದೆಯಲ್ಲಿರುವ ಸಲಿಗೆಯಿತ್ತು. ಇಂದು ಪ್ರಸಾರಾಂಗವೆಂದು ಪ್ರಸಿದ್ಧವಾಗಿರುವ ಸಾಹಿತ್ಯ ಪ್ರಸಾರ ಪ್ರಕಟಣ ಸಂಸ್ಥೆಗೆ ಮೂಲಸ್ಫೂರ್ತಿಯಾದ 'ಯೂನಿವರ್ಸಿಟಿ ಟೀಚರ್ಸ್ ಅಸೋಷಿಯೇಷನ್' (UTA) ಸ್ಥಾಪಿಸಿ ಅದರ ಪ್ರಥಮ ಅಧ್ಯಕ್ಷರಾಗಿ ಪ್ರಚಾರೋಪನ್ಯಾಸಗಳನ್ನು ಮುಖ್ಯ ಕಾರ್ಯಕ್ರಮವಾಗಿ ರೂಪಿಸಿದರು.

ಜೆ.ಸಿ.ರಾಲೊ 'ಮೈಸೂರು ಪ್ರಯೋಗ' ಎಂದು ಇದನ್ನು ಹೆಸರಿಸಿ 'ಇದು ವಿಶ್ವಕ್ಕೆ ಆದರ್ಶ' ಎಂದು ವರ್ಣಿಸಿದರು. ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಬಿ.ಎಂ.ಶ್ರೀ.ಯವರ ಹೆಸರಿನಲ್ಲಿ ನಡೆಯುತ್ತಿದ್ದು, ಬೇರೆಯವರನ್ನು ಮುಂದೆ ಇರಿಸಿ ತಾವು ಹಿಂದೆ ಸರಿಯುವುದು ಅವರ ವಿಶಿಷ್ಟ ಗುಣವಾಗಿತ್ತು.

ವೆಂಕಣ್ಣಯ್ಯನವರ ಶಿಷ್ಯ ಪರಂಪರೆ ಅತ್ಯಂತ ದೊಡ್ಡದಾಗಿದ್ದು, ಅದರಲ್ಲಿಯೂ ಕುವೆಂಪುರವರೊಂದಿನ ಬಾಂಧವ್ಯ ದೈವಿಕವಾಗಿತ್ತು. ಪ್ರಥಮ ದರ್ಶನದಲ್ಲೇ ಆಕರ್ಷಿತರಾದ ಕುವೆಂಪುರವರು 'ವೆಂಕಣ್ಣಯ್ಯನವರಲ್ಲಿ ಅನುಭವಿಸಿದ ಆತ್ಮೀಯತೆಯನ್ನು ಬೇರಾರಲ್ಲಿಯೂ ಅನುಭವಿಸಲಿಲ್ಲ, ಆ ಆತ್ಮೀಯತೆ ಅಹೇತುಕವಾಗಿತ್ತು' ಎಂದಿದ್ದಾರೆ. ಅವರ ಬೋಧನಾ ಕ್ರಮ ಅನುಪಮವಾದುದು ಇಡೀ ತರಗತಿಯನ್ನು ಉದ್ದೇಶಿಸಿ ಪಾಠ ಮಾಡುತ್ತಿದ್ದರೂ ಪ್ರತಿ ವಿದ್ಯಾರ್ಥಿಗೂ ತನ್ನನ್ನೇ ಉದ್ದೇಶಿಸಿ ಸಂಭಾಷಿಸುತ್ತಿರುವರೆಂಬ ಭಾವನೆ ಮೂಡುತ್ತಿತ್ತು. ಕನ್ನಡ ಭಾಷಾಭಿಮಾನ ಉದ್ದೀಪಿತವಾಗುತ್ತಿತ್ತು. ಕನ್ನಡ ಕವಿಗಳು, ಕಾವ್ಯಗಳು, ಆಂಗ್ಲಭಾಷಾ ಕವಿಗಳಿಗೆ, ಕಾವ್ಯಗಳಿಗೆ ಯಾವುದೇ ರೀತಿಯಲ್ಲೂ ಕಡಿಮೆಯಿಲ್ಲ ಎಂಬ ಹೆಮ್ಮೆ ಮೂಡುತ್ತಿತ್ತು. ಕನ್ನಡದ ಸಾಹಿತ್ಯವನ್ನು ವಿಮರ್ಶಿಸುವಾಗ ವಿದ್ಯಾರ್ಥಿಗಳು ರಸವಶರಾಗುತ್ತಿದ್ದರೆಂದು ಕುವೆಂಪು ಅಂದಿನ ಅವರ ತರಗತಿಗಳನ್ನು ಸ್ಮರಿಸುತ್ತಾರೆ. "ಹೀಗೆಂದ ಮಾತ್ರಕ್ಕೆ ವೆಂಕಣ್ಣಯ್ಯನವರು ಎಲ್ಲರಿಗೂ ಮಣೆ ಹಾಕುತ್ತಿದ್ದರು ಎಂದರ್ಥವಲ್ಲ. ಪೊಳ್ಳುಜೊಳ್ಳುಗಳು ಎಂತಹ ಶ್ರೇಷ್ಠ ಕವಿಯಲ್ಲೇ ಕಂಡುಬರಲಿ ನಿಷ್ಠುರವಾಗಿ ಟೀಕಿಸುವ ಖಂಡಿತವಾದಿಗಳು. ನಿಜವಾದ ಪ್ರತಿಭೆ ಎಲ್ಲೇ ಇರಲಿ ಅದನ್ನು ಗುರುತಿಸುವ ವಿಶಾಲ ಹೃದಯ ಅವರಿಗೆ ದೈವದತ್ತವಾಗಿತ್ತು. ಪ್ರತಿಭಾವಂತ ಚೇತನಗಳಿಗೆ ಪ್ರೋತ್ಸಾಹದ ಗೊಬ್ಬರಹಾಕಿ ಪ್ರಸಂಸೆಯ ನೀರೆರೆದು ನಿರ್ಮತ್ಸರವಾಗಿ ಪೋಷಿಸುತ್ತಿದ್ದರು... ಅವರ ಆ ಮಾತೃ ಲಕ್ಷಣದ ಹೊಂಬಿಸಿಲಲ್ಲಿ ಚಳಿ ಕಾಯಿಸಿಕೊಂಡು ಬದುಕಿ ಬಾಳಿದ ಅನೇಕ ಚೇತನಗಳಲ್ಲಿ ನಾನೂ ಒಬ್ಬನು" ಎಂದು ಕುವೆಂಪು ಕೃತಜ್ಞತೆಯಿಂದ ನುಡಿಯುತ್ತಾರೆ. ಅವರು ಒಮ್ಮೆ ಕುಪ್ಪಳ್ಳಿಗೆ ಭೇಟಿ ನೀಡಿದಾಗ, ಅಲ್ಲಿನ ಪ್ರಕೃತಿ ಸೌಂದರ್ಯಕ್ಕೆ ಮಾರು ಹೋಗಿ ಕುವೆಂಪು ಅವರಿಗೆ ಕಾದಂಬರಿ ಬರೆಯಲು ಹೇಳಿದರಂತೆ. ಅನಂತರ ಕುವೆಂಪು 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಕಾದಂಬರಿ ಬರೆದರೆಂದು ಹೇಳಿಕೊಂಡಿದ್ದಾರೆ. ಅವರು ತಮ್ಮ ಮೇರುಕೃತಿ "ಮಹಾಛಂದಸ್ಸಿನ ಶ್ರೀರಾಮಾಯಣದರ್ಶನಂ" ಕೃತಿಯನ್ನು ತಮ್ಮ ಗುರುಗಳಾದ ವೆಂಕಣ್ಣಯ್ಯನವರಿಗೆ ಅರ್ಪಿಸುತ್ತಾ ತಮ್ಮ ಕಾವ್ಯಾವಾಣಿಯಲ್ಲಿ ಹೀಗೆ ಹೇಳುತ್ತಾರೆ:

**ಶ್ರೀ ವೆಂಕಣ್ಣಯ್ಯನವರಿಗೆ**

ಇದೊ ಮುಗಿಸಿ ತಂದಿಹೆನ್ ಈ ಬೃಹದ್ ಗಾನಮಂ
ನಿಮ್ಮ ಸಿರಿಯಡಿಗೊಪ್ಪಿಸಲ್ಕೆ, ಓ ಪ್ರಿಯ ಗುರುವೆ
ಕರುಣೆಸಿಂ ನಿಮ್ಮ ಹರಕೆಯ ಬಲದ ಶಿಷ್ಯನಂ
ಕಾವ್ಯಮಂ ಕೇಳ್ವೊಂದು ಕೃಪೆಗೆ ಕೃತಕೃತ್ಯನಂ ಧನ್ಯನಂ
ಮಾಡಿ ನೀಮುದಯರವಿಗೈತಂದು

ಕೇಳಲೆಳಸಿದಿರಂದು. ಕಿರುಗವನಗಳನೋದಿ
ಮೆಚ್ಚಿಸಿದೆನನಿತರೊಳೆ ಬೈಗಾಯ್ತು. "ಮತ್ತೊಮ್ಮೆ
ಬರುವೆ. ದಿನವೆಲ್ಲಮುಂ ಕೇಳ್ವೆನೋದುವೆಯಂತೆ;
ರಾಮಾಯಣಂ ಅದು ವಿರಾಮಾಯಣಂ ಕಣಾ!"
ಎಂದು ಮನೆಗೈದಿದಿರಿ. ಮನೆಗೈದಿದಿರಿ ದಿಟಂ;
ದಿಟದ ಮನೆಗೈದಿದಿರಿ!

ಹೀಗೆ ವೆಂಕಣ್ಣಯ್ಯನವರು ತೋರಿದ ಶಿಷ್ಯ ಪ್ರೇಮವನ್ನು ಕುವೆಂಪು ನೆನೆದಿದ್ದಾರೆ.

ಶ್ರೀ ಡಿ.ಎಲ್. ನರಸಿಂಹಾಚಾರ್ ಅವರು "ಸದ್ದಿಲ್ಲದೆ ತಿದ್ದುವುದು ವೆಂಕಣ್ಣಯ್ಯನವರ ಸ್ವಭಾವ. ಅಪ್ರಿಯವಾದುದನ್ನು ಮರೆಮಾಚಿ ಪ್ರಿಯವಾದುವನ್ನೇ ಎತ್ತಿ ಆಡುವುದು ಅವರ ವಿಶಿಷ್ಟ ಗುಣ. ತಾವು ಬರೆದ ಲೇಖನವನ್ನು ಮೆಚ್ಚಿ ಕೊಂಡಾಡಿದ, ಸಂಶೋಧನಾ ವಿದ್ಯಾರ್ಥಿಯಾಗಿ ಕೆಲಸ ಮಾಡುತ್ತಿದ್ದಾಗ ಓಲೆಗರಿಯ ಪ್ರತಿಗಳನ್ನು ಓದಿ ಪಾಠಾಂತರಗಳನ್ನು ಗುರುತಿಸುವ ವಿಧಾನವನ್ನು ಹೇಳಿಕೊಟ್ಟ ತಮ್ಮ ಗುರುಗಳ ಶಿಕ್ಷಣ ವಿಧಾನವನ್ನು ಕೊಂಡಾಡಿದ್ದಾರೆ." ಅವರು ಅನಂತರ ಕನ್ನಡ ಸಾಹಿತ್ಯದ ಅದ್ವಿತೀಯ ಪಂಡಿತರಾಗಿ, ನಡೆದಾಡುವ ವಿಶ್ವಕೋಶವೆಂದು ಪ್ರಖ್ಯಾತರಾದರು.

ಶ್ರೀ ಎಸ್.ವಿ. ರಂಗಣ್ಣನವರು "ಅವರ ಬೋಧನಾಮಾರ್ಗವಿಶಿಷ್ಟವಾದುದಾಗಿತ್ತು. ಅಭಿಮತ ಸ್ವಾತಂತ್ರ್ಯ ರೂಢಿಯಾಗುವ ರೀತಿಯಲ್ಲಿ ಅವರ ಮಾರ್ಗದರ್ಶನ. ಪಂಪನ 'ವಿಕ್ರಮಾರ್ಜುನ ವಿಜಯ'ದ ಘೋಷಯಾತ್ರಾ ಪ್ರಸಂಗವನ್ನು ಉತ್ಸಾಹದಿಂದ ವಿವರಿಸಿ ಭಾಷಣ ಮಾಡಿದ, ಪಂಪನ ಬಗ್ಗೆ ಪಕ್ಷಪಾತಹೊಂದಿದ್ದ ತಮ್ಮನ್ನು 'ಕುಮಾರವ್ಯಾಸ ಭಾರತ'ದಲ್ಲಿನ ಘೋಷಯಾತ್ರಾ ಪ್ರಸಂಗವನ್ನು ಓದುವಂತೆ ಪ್ರೇರೇಪಿಸಿ, ಅದನ್ನು ಸವಿದು, ನಲಿಯುವಂತೆ ಮೂಡಿದುದು ಅವರ ಮಾರ್ಗದರ್ಶನ ಕ್ರಮ" ಎಂದಿದ್ದಾರೆ.

ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರು "ವೆಂಕಣ್ಣಯ್ಯನವರು ಬರಿಯ ಬುದ್ಧಿಗೆ ಮಾತ್ರ ಪೋಷಣೆ ನೀಡುವ ಗುರುಗಳಾಗಿರಲಿಲ್ಲ. ತಮ್ಮ ಶಿಷ್ಯರ ಲಾಲನೆ ಪಾಲನೆಯತ್ತಲೂ ಗಮನ ಹರಿಸಿದ್ದವರು. ಪಾಠ ಆರಂಭಿಸುವ ಮೊದಲು ತಿಂಡಿ ತರಿಸಿಕೊಟ್ಟು ವಿದ್ಯಾರ್ಥಿಗಳ 'ಹೊಟ್ಟೆ ತಂಪು ಮಾಡುತ್ತಿದ್ದ' ಅವರ ಶಿಷ್ಯ ಪ್ರೇಮವನ್ನು" ವಿವರಿಸಿದ್ದಾರೆ. "ನಾನು ವಿದ್ಯಾರ್ಥಿಯಾಗಿದ್ದಾಗ ಅವರು ನೀಡಿದ ಸಲಹೆ, ಸಹಕಾರ, ಪ್ರೋತ್ಸಾಹಗಳ ಫಲವಾಗಿಯೇ ಈಗ ನಾನು ಇಷ್ಟರಮಟ್ಟಿಗೆ ಸಾಹಿತ್ಯ ನಂದನವನದಲ್ಲಿ ಇತರ ತರು-ಮರಗಳೊಂದಿಗೆ ಬೇರೂರಿ ನಿಂತಿದ್ದೇನೆ" ಎಂದು ಭಟ್ಟರು ಹೇಳುತ್ತಾರೆ.

ಪ್ರೊ. ವೆಂಕಣ್ಣಯ್ಯನವರು ಆದರ್ಶ ಅಧ್ಯಾಪಕರೆಂದು ಪ್ರಸಿದ್ಧರಾದವರು. ಅವರು ಕನ್ನಡ, ಸಂಸ್ಕೃತ, ತೆಲುಗು, ಬಂಗಾಳಿಗಳಲ್ಲಿ ಆಳವಾದ ಪಾಂಡಿತ್ಯವುಳ್ಳವರು. ಅವರ ಪಾಠ ಪ್ರವಚನಗಳು ಸ್ನೇಹಿತನ ಹಿತೋಕ್ತಿಯಂತೆ ಸತ್ವಯುತವಾಗಿ ಆತ್ಮೀಯವಾಗಿರುತ್ತಿದ್ದವು. ಅವರು 'ಪಂಪಭಾರತ'ವನ್ನೂ, 'ಶಬ್ದಮಣಿದರ್ಪಣ'ವನ್ನೂ ಪಾಠ ಮಾಡುತ್ತಿದ್ದ ಸೊಗಸನ್ನು ಅವರ ಅನೇಕ ಶಿಷ್ಯರು ನೆನಪಿಸಿಕೊಳ್ಳುತ್ತಾರೆ. ಅವರು ಪಾಠ ಮಾಡುವಾಗ ಮೆಲುದನಿಯಲ್ಲಿ ಮಾತನಾಡುತ್ತಿದ್ದರು. ಒಮ್ಮೆ ತುಂಬಿದ ತರಗತಿಯಲ್ಲಿ ಒಬ್ಬ ವಿದ್ಯಾರ್ಥಿ

ಇದ್ದಕ್ಕಿದ್ದಂತೆ ಮೇಲೆದ್ದು "ಕೇಳಿಸೊಲ್ಲ ಗಟ್ಟಿಯಾಗಿ ಹೇಳಿ ಸಾರ್" ಎಂದ. ವೆಂಕಣ್ಣಯ್ಯನವರೂ ಸ್ವಲ್ಪವೂ ವಿಚಲಿತರಾಗದೆ ಶಾಂತಸ್ವರದಲ್ಲಿ "ನಾನು ಇದೇ ಧ್ವನಿಯಲ್ಲಿ ಸಾವಿರಾರು ಜನ ಇದ್ದಂಥ ಸಭೆಯಲ್ಲಿ ಮಾತನಾಡಿದ್ದೇನೆ. ಈವರೆಗೆ ಕೇಳಲಿಲ್ಲವೆಂದು ಯಾರೂ ನನಗೆ ಹೇಳಿಲ್ಲ. ಕೇಳುವ ಮನಸ್ಸು, ಇಚ್ಛೆ ಇದ್ದರೆ ಕೇಳಿಸಿಯೇ ಕೇಳಿಸುತ್ತದೆ" ಎಂದು ಹೇಳಿ ನಿರಾಳವಾಗಿ ಪಾಠ ಮುಂದುವರೆಸಿದರು. ವೆಂಕಣ್ಣಯ್ಯನವರ ತಮ್ಮ ತ.ಸು. ಶಾಮರಾಯರು ಬಿ.ಎ. (ಆನರ್ಸ್) ಓದುತ್ತಿರುವಾಗ ಅವರು ಕೊಡಿಟ್ಟ ಹಣವೆಲ್ಲಾ ಬಹುಪಾಲು ಖರ್ಚಾಗಿದ್ದು, ಯಾವುದಾದರೂ ಸ್ಕಾಲರ್‌ಶಿಪ್ ಸಿಗಲೆಂದು ಆಶಿಸುತ್ತಿದ್ದರು. ಆಗ ಅವರಿಗೆ ಬಿ.ಎಂ.ಶ್ರೀ. ಸ್ಕಾಲರ್‌ಶಿಪ್ ಸಿಕ್ಕಾಗ ಸಂತೋಷದಿಂದ ಹಣ್ಣು ಹಂಪಲು ಹಂಚಿ ಸಂಭ್ರಮಿಸಿದರು. ಆದರೆ ಮೂರನೆಯ ದಿನ ಕಾಲೇಜಿಗೆ ಹೋದಾಗ ಇವರ ಹೆಸರಿಗೆ ಬದಲಾಗಿ ಮತ್ತೊಬ್ಬ ಎಂ.ಎ. ವಿದ್ಯಾರ್ಥಿಗೆ ಆ ಸ್ಕಾಲರ್‌ಶಿಪ್ ಲಭಿಸಿತ್ತು. ಕಾಲೇಜಿನಲ್ಲಿ ವಿಚಾರಿಸಿದಾಗ ಅದಕ್ಕೆ ತನ್ನ ಅಣ್ಣನೇ ಕಾರಣವೆಂದು ತಿಳಿದು ಅಸಮಾಧಾನವಾಗಿ ಮನೆಗೆ ಹಿಂದಿರುಗಿದಾಗ, ಎಂದಿನಂತೆ ಸಂಜೆಯ ವಾಕಿಂಗ್‌ನಲ್ಲಿ ವಿಷಯವನ್ನು ಪ್ರಸ್ತಾಪಿಸಿ ತಮ್ಮ ನಿರ್ಣಯವನ್ನು ಸಮರ್ಥಿಸುತ್ತಾ "ನಿನಗೆ ದೇವರೇನು ಕಡಿಮೆ ಮಾಡಿದ್ದಾನೆ? ಜುಜುಬಿ ನೂರು ರೂಪಾಯಿ ಸಿಗಲಿಲ್ಲವೆಂದು ಇಷ್ಟೊಂದು ಗೋಳಾಡಬೇಕೆ? ಎಂ.ಎ. ಓದಲು ಹೈದರಾಬಾದಿನಿಂದ ಬಂದಿರುವ ಕಡುಬಡವನಾದ ಆ ಹುಡುಗನಿಗೆ ಸಹಾಯವಾಗಲೆಂದು ಬಿ.ಎಂ.ಶ್ರೀ. ಸ್ಕಾಲರ್‌ಶಿಪ್ ಕೊಡಿಸಿದೆ. ಇದು ನಿನಗೆ ಸಹನೆಯಾಗಲಿಲ್ಲವೆ? ನನ್ನಂತಹ ಅಣ್ಣ ನಿನಗಿಲ್ಲವೆ?" ಎಂದರು. ಸ್ವಾರ್ಥಿಗಳೇ ತುಂಬಿರುವ ಈ ಪ್ರಪಂಚದಲ್ಲಿ ಅಪರಿಚಿತ ವ್ಯಕ್ತಿಯೊಬ್ಬನಿಗೆ ಸಹಾಯ ಮಾಡಿದ ತಮ್ಮ ಅಣ್ಣ 'ಮಹಾನುಭಾವ' ಎಂದರಿತ ಶಾಮರಾಯರು ಅಣ್ಣನ ಕ್ಷಮೆ ಕೋರಿದರು.

ಶ್ರೀ ಎಂ.ವಿ. ಸೀತಾರಾಮಯ್ಯನವರು ಗುರುಪರಂಪರೆಯನ್ನು ಕುರಿತು ವರ್ಣಿಸುತ್ತ:

"ನಿಮ್ಮೆತ್ತರಕೆ ನಾನು ಬರಲಾರೆ ಕುಬ್ಜನೆನೆ, ನಾನೆ ಬಾಗುವೆ ಹಿಡಿ
ಎನುತ ಫಲಿತ ಕದಳಿಯ ತೆರದೆ ಕೈ ನಿಲುಕಿಸುತ ನೀಡಿ ವಿದ್ಯಾಫಲವ
ಜೀವನದ ಕಾವ್ಯಕ್ಕೆ ಮುನ್ನುಡಿಯ ಬರೆದ ಸಾಹಿತ್ಯ ಗುರು"

ಎಂದು ಹೇಳಿರುವುದು ವೆಂಕಣ್ಣಯ್ಯನವರ ಮೇರು ವ್ಯಕ್ತಿತ್ವದ ನಿರೂಪಣೆಯಾಗಿದೆ.

"ವೆಂಕಣ್ಣಯ್ಯನವರ ವ್ಯಕ್ತಿತ್ವದ ವಿಶಿಷ್ಟ ಅಂಶಗಳಲ್ಲಿ ಅವರ ಎತ್ತರವಾದ ನಿಲುವು ಪ್ರಮುಖವಾದುದು. ಆರಡಿ ಅಥವಾ ಅದಕ್ಕೂ ಎತ್ತರದ ಮೈಕಟ್ಟು ಹೊಂದಿದ್ದ ಅವರದು ತೆಳುವಾದ ದೇಹ, ಎರಡು ಬೆರಳಂಚಿನ ಜರಿಯ ರುಮಾಲು, ಚೌಕಮುಖ, ಅದಕ್ಕೊಪ್ಪುವಂತೆ ದಪ್ಪ ಮೀಸೆ, ಎಣ್ಣೆಗೆಂಪು ಮುಖವರ್ಣ, ಯಾವುದೋ ಚಿಂತೆಯಲ್ಲಿರುವಂತಹ ಮುಖಭಾವ, ಸಂದರ್ಭೋಚಿತ ಮೃದುಮಂದಹಾಸ ಇದು ಅವರ ಬಹಿರಂಗ ರೂಪ. ಅವರು ಉಡುತ್ತಿದ್ದುದು ಮೇಲುಕೋಟೆ ಪಂಚೆ, ತೊಡುತ್ತಿದ್ದುದು ಕಪ್ಪು ಸರ್ಜ್‌ಕೋಟು ಎತ್ತರ ಜಾಸ್ತಿಯಿದ್ದುದರಿಂದ ಸ್ವಲ್ಪ ಬಾಗಿ ನಡೆಯುತ್ತಿದ್ದರು."

ವೆಂಕಣ್ಣಯ್ಯನವರಿಗೆ ಅಧ್ಯಾತ್ಮದಲ್ಲಿ ಅತ್ಯಂತ ಒಲವಿರುವ ಸಾಧಕರು ಗುಬ್ಬಿಯ ಚಿದಂಬರಾಶ್ರಮವನ್ನು ಸ್ಥಾಪಿಸಲು ಶ್ರೀ ಚಿದಂಬರರಿಗೆ ಪ್ರೇರೇಪಿಸಿದವರು. ಅವರಿಗೆ

"ನಮ್ಮ ಮಕ್ಕಳಿಗೆ ಹಿರಿಯ ಆದರ್ಶ, ಆಶ್ರಯ ಸಂಪ್ರದಾಯಗಳ ಪರಿಚಯ ನಮ್ಮ ಸಂಸ್ಕೃತಿಯ ಮೂಲಸ್ರೋತವಾದ ಸಂಸ್ಕೃತ ಭಾಷಾಜ್ಞಾನ, ಜೊತೆಗೆ ಲೌಕಿಕ ಶಿಕ್ಷಣವನ್ನೂ ನೀಡಿ ವ್ಯಾವಹಾರಿಕ ಪ್ರಪಂಚಕ್ಕೆ ಅವರನ್ನು ತಯಾರಾಗಿ ಮಾಡಬಲ್ಲ ಶಿಕ್ಷಣ ಸಂಸ್ಥೆ ಯೊಂದನ್ನು ಸ್ಥಾಪಿಸಬೇಕೆಂಬ ಮಹಾ ಆಶೆ ಅವರದಾಗಿತ್ತು." ತಮ್ಮ ಅಭಿಪ್ರಾಯವನ್ನು ೧೯೩೮ರಲ್ಲಿ ಶ್ರೀ ಚಿದಂಬರರೊಡನೆ ಪ್ರಸ್ತಾಪಿಸುತ್ತಾ. ಅಂತಹ ಸಂಸ್ಥೆಯನ್ನು ಸ್ಥಾಪಿಸುವುದಾದರೆ ಪ್ರತಿ ತಿಂಗಳು ಒಬ್ಬ ಉಪಾಧ್ಯಾಯನ ವೇತನವಾಗಿ ೩೦ ರೂ.ಗಳನ್ನು ನೀಡುವುದಾಗಿ ತಿಳಿಸಿದರು. ಗುಬ್ಬಿಯ ಸೇವಾಸದನ ಪ್ರೌಢಶಾಲೆ, ವೇದ ಸಂಸ್ಕೃತ ಪಾಠಶಾಲೆಗಳು ಅವರ ಕನಸನ್ನು ನನಸಾಗಿಸಿವೆ.

ಒಮ್ಮೆ ಶ್ರೀ ಚಿದಂಬರರು (೧೯೩೦) ಹಿಮಾಲಯ ಯಾತ್ರೆಯನ್ನು ಮುಗಿಸಿದ ನಂತರ ತಮ್ಮ ಗುರು ಕಾಲಿಕ ಮಲಿವಾಲೆ ಅವರ ಆಶ್ರಯದಲ್ಲಿ ಇಡೀ ಜೀವಮಾನವನ್ನು ಕಳೆಯಲು ನಿರ್ಧರಿಸಿದ್ದರು. ಆಗ ವೆಂಕಣ್ಣಯ್ಯನವರು ೧೯೩೫ರಲ್ಲಿ ಚಿಕ್ಕಬಳ್ಳಾಪುರದಲ್ಲಿ ಅವರನ್ನು ಸಂಧಿಸಿ "ನಿಮ್ಮ ಜನ್ಮಸ್ಥಾನ ಕರ್ನಾಟಕ. ನಿಮ್ಮ ಸೇವೆ ಸಲ್ಲಬೇಕಾದುದು ಕರ್ನಾಟಕಕ್ಕೆ, ನಿಮ್ಮ ಸೇವೆ ಜನತಾ ಜನಾರ್ಧನನ ಸೇವೆಯಾಗಲಿ ಸನಾತನ ಧರ್ಮದ ಪುನರುತ್ಥಾನವಾಗಲಿ" ಎಂದು ಹೇಳಿ ಅವರು ಗುಬ್ಬಿಯಲ್ಲಿ ಆಶ್ರಮ ಸ್ಥಾಪಿಸಲು ಕಾರಣರಾದರು.

**ವೆಂಕಣ್ಣಯ್ಯನವರ ಜೀವನದಲ್ಲಿನ ಘಟನೆಗಳು**

೧. ವೆಂಕಣ್ಣಯ್ಯನವರು ಧಾರ್ಮಿಕ ಪ್ರವೃತ್ತಿ ಉಳ್ಳವರಾಗಿದ್ದು, ಪ್ರತಿನಿತ್ಯ ಸಂಧ್ಯಾವಂದನೆ ಪೂಜೆಯ ನಂತರ ರಾಮಾಯಣ ಹಾಗೂ ಭಗವದ್ಗೀತೆಯ ಪಾರಾಯಣ ಮಾಡುತ್ತಿದ್ದರು. ಗೀತೆ ಅವರಿಗೆ ಕಂಠಸ್ಥವಾಗಿತ್ತು ಜೀವನಾನುಷ್ಠಾನವೂ ಆಗಿತ್ತು. ಗೀತೆಯಲ್ಲಿ ಬೋಧಿಸುವ 'ಅನಾಸಕ್ತಿ'ಯನ್ನು ತಮ್ಮ ಬಾಳಿನಲ್ಲಿ ಅಳವಡಿಸಿ ಕೊಂಡಿದ್ದರು. ಅವರ ಅನಾಸಕ್ತಿಗೆ ಅವರ ಮನೆಯಲ್ಲಿಯೇ ನಡೆದ ಘಟನೆ ನಿದರ್ಶನ ವಾಗಿದೆ. ಮೈಸೂರಿನಲ್ಲಿ ೧೯೩೧ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಗಮಕ ಕಲೆಯ ಪ್ರದರ್ಶನವನ್ನು ಏರ್ಪಡಿಸಲು ನಿರ್ಧರಿಸಿ, ಗಮಕ ಕಲಾನಿಪುಣರ ಸಭೆಯನ್ನು ವೆಂಕಣ್ಣಯ್ಯನವರ ಮನೆಯ ಮಹಡಿಯಲ್ಲಿ ಏರ್ಪಡಿಸಿದಾಗ, ಅವರ ಪ್ರಿಯಮಿತ್ರರಾದ ರಾಜೀವಲೋಚನಂ ಅವರೂ ಇದ್ದರು. ಭೋಜನದ ವ್ಯವಸ್ಥೆಯೂ ಭರದಿಂದ ಸಾಗುತ್ತಿದ್ದು, ಸಭೆಯು ಸಂಭ್ರಮದಿಂದ ನಡೆಯುತ್ತಿದ್ದಾಗ ಕೆಳಗಿನ ಮನೆಯಿಂದ ಜೋರಾಗಿ ರೋಧಿಸುವ ಧ್ವನಿ ಕೇಳಿಸಿತು. ಕೆಳಗಿಳಿದು ಬಂದ ವೆಂಕಣ್ಣಯ್ಯನವರಿಗೆ ಅವರ ಎರಡನೆಯ ಪತ್ನಿಯ ಚೊಚ್ಚಲು ಮಗು ನಿಧನವಾಗಿತ್ತೆಂಬುದು ತಿಳಿದು, ದೃಶ್ಯವನ್ನು ಕಂಡು ಉಮ್ಮಳಿಸಿ ಬಂದ ತಮ್ಮ ದುಃಖವನ್ನು ನುಂಗಿಕೊಂಡು ಪತ್ನಿಗೂ ಸಾಂತ್ವನವನ್ನು ಹೇಳಿ, ತಮ್ಮ ಶಾಮರಾಯರು ಹಾಗೂ ಅಳಿಯ ವೆಂಕಟೇಶಯ್ಯ ಇಬ್ಬರಿಗೂ ಮಗುವಿನ ಅಂತ್ಯಕ್ರಿಯೆಯನ್ನು ಮಾಡಲು ಪ್ರಶಾಂತವಾಗಿ ತಿಳಿಸಿ, ಏನೂ ಆಗಲಿಲ್ಲವೆಂಬಂತೆ ಕಲಾಪದಲ್ಲಿ ಭಾಗಿಯಾದರು. ಕಲಾಪವೆಲ್ಲ ಮುಗಿದು, ಊಟೋಪಚಾರಗಳೆಲ್ಲಾ

ನಡೆದು, ಅತಿಥಿಗಳೆಲ್ಲರೂ ರಾಜೀವಲೋಚನಂ ಹೊರತಾಗಿ ನಿರ್ಗಮಿಸಿದರು. ಅತಿಥಿ ಸತ್ಕಾರಕ್ಕೆ ಪ್ರಖ್ಯಾತರಾದ ವೆಂಕಣ್ಣಯ್ಯನವರ ಪತ್ನಿ ರುಕ್ಮಿಣಿಯಮ್ಮನವರು ಕಾಣದಿರಲು ಅಚ್ಚರಿಯಿಂದ ಪಶ್ನಿಸಲು, ಆಗ ನಡೆದ ವಿದ್ಯಮಾನಗಳನ್ನು ವೆಂಕಣ್ಣಯ್ಯನವರು ವಿಶದವಾಗಿ ತಿಳಿಸಲು, ಅದನ್ನು ಕೇಳಿದ ರಾಜೀವಲೋಚನಂ ಕೋಪೋದ್ರಿಕ್ತರಾಗಿ "ವೆಂಕಣ್ಣಯ್ಯ ನೀನು ಮನುಷ್ಯನಲ್ಲ" ಎಂದರು. ಆಗ ಅವರು "ಅಯ್ಯಾ! ಮಗುವಿಗಾಗಿ ನಾನು ಮಾಡಬೇಕಾದ ಕರ್ತವ್ಯವನ್ನೆಲ್ಲಾ ಮಾಡಿದ್ದೇನೆ, ಯೋಗ್ಯವೈದ್ಯರಿಂದ ಶುಶ್ರೂಷೆ ಮಾಡಿಸಿದ್ದೇನೆ ಗುಣಮುಖವಾಗುವುದೆಂಬ ಭರವಸೆಯೂ ಇತ್ತು. ಆದರೆ ಇದ್ದಕ್ಕಿದ್ದಂತೆ ತೀರಿಕೊಂಡಿದೆ ನಾನೇನು ಮಾಡಲಿ? ನಾನೂ ನೀನು ಭಗವದ್ಗೀತೆ ಓದಿಕೊಂಡಿದ್ದೇವೆ. ಅಲ್ಲಿನ ತತ್ವಗಳೆಲ್ಲಾ ಬರಿ ಓದುವುದಕ್ಕೆ ಮಾತ್ರವೇನು? ಅನುಷ್ಠಾನದಲಿಲ್ಲದಿದ್ದರೆ ಆ ಓದಿಗೆ ಪ್ರಯೋಜನವೇನು? ಎಂದಾಗ ರಾಜೀವಲೋಚನಂ ಮತ್ತೆ ನುಡಿದರು "ವೆಂಕಣ್ಣಯ್ಯ! ನೀನು ಮನುಷ್ಯನಲ್ಲ!"

೨. ಅಗಡಿಯ ಸಾಧುಗಳೊಮ್ಮೆ ವೆಂಕಣ್ಣಯ್ಯನವರ ಮನೆಗೆ ಆಗಮಿಸಿದ್ದಾಗ ಮನೆಯಲ್ಲೆಲ್ಲಾ ಸಂಭ್ರಮ, ಹಬ್ಬದ ವಾತಾವರಣವಿದ್ದು, ದೇವರ ಪೂಜಾದಿಗಳು ಭಜನೆ ನಡೆಯುತ್ತಿತ್ತು. ವೆಂಕಣ್ಣಯ್ಯನವರ ಮಿತ್ರ ಹುಚ್ಚುರಾವ್ ಆಗಮಿಸಿದ್ದು. ಮಾತಿನ ನಡುವೆ ಸ್ವಾಮಿಗಳು ಅಲ್ಲೇ ಊಟ ಮಾಡಿಕೊಂಡು ಹೋಗುವಂತೆ ಹುಚ್ಚೂರಾವ್‌ಗೆ ತಿಳಿಸಿದಾಗ, ಅವರು ಗುರ್ವಾಜ್ಞೆ ಮೀರುವಂತಿಲ್ಲ. ಆದರೆ ಮನೆಯ ಒಡೆಯರಾದ ವೆಂಕಣ್ಣಯ್ಯನವರು ಹೇಳಲಿಲ್ಲವೆಂದು ಮುಜುಗರದಲ್ಲಿದ್ದಾಗ ಇದನ್ನು ಗ್ರಹಿಸಿದ ಸ್ವಾಮಿಗಳು ವೆಂಕಣ್ಣಯ್ಯನವರಿಗೆ ಆಹ್ವಾನಿಸಲು ತಿಳಿಸಿದಾಗ, ಅವರು ಅವರ ಭುಜದ ಮೇಲೆ ಕೈಹಾಕಿ "ಹುಚ್ಚೂರಾವ್! ನಮ್ಮಷ್ಟಕ್ಕೆ ನಾವಿರುವಾಗ ನಾವೇ ಮನೆಯ ಯಜಮಾನರು ಆದರೆ ಸ್ವಾಮಿಗಳು ಮನೆಗೆ ಬಂದಾಗ ಅವರೇ ಮನೆಯ ಯಜಮಾನರು. ನಾವೆಲ್ಲ ಅವರು ಹೇಳಿದಂತೆ ನಡೆಯುವವರು. ಅವರು ಹೇಳಿದ ಮೇಲೆ ಗುರ್ವಾಜ್ಞೆ! ನಾವ್ಯಾರೂ ಏನೂ ನುಡಿಯುವಂತಿಲ್ಲ. ಅವರು ಹೇಳಿದ ಮೇಲೆ ನಾನು ಹೇಳುವ ಪ್ರಮೇಯವೇ ಬರುವುದಿಲ್ಲ" ಎಂದು ಅವರ ಮುಜುಗರವನ್ನು ಕಳೆದರು.

೩. ಒಮ್ಮೆ ವೆಂಕಣ್ಣಯ್ಯನವರಿಗೆ ಒಂದು ಪತ್ರ ಬಂದಿತು. ಲಾ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಯೊಬ್ಬನು ತನಗೆ ಫೀಸು ಕಟ್ಟಲಾಗಲಿಲ್ಲವೆಂದೂ ತಕ್ಷಣ ೨೫೦ ರೂಪಾಯಿಗಳನ್ನು ಕಳುಹಿಸುವಂತೆ ಬರೆದಿದ್ದ ಪತ್ರವನ್ನು ಓದಿ, ತಮ್ಮ ಬೀರುವಿನಲ್ಲಿದ್ದ ೧೫೦ರೂ.ಗಳೊಂದಿಗೆ ಸೊಸೈಟಿನಲ್ಲಿ ೧೦೦ ರೂ. ಒ.ಡಿ. ಪಡೆದು ೨೫೦ ರೂ.ಗಳನ್ನು ಎಂ.ಒ. ಮಾಡುವಂತೆ ಶಾಮರಾಯರಿಗೆ ಹೇಳಿ ಎಂ.ಒ ರಸೀತಿ ಹಾಗೂ ವಿಳಾಸದ ಲಕೋಟೆಯನ್ನು ದಾರಿಯಲ್ಲೇ ಹರಿದು ಹಾಕುವಂತೆ ಹೇಳಿ, ತಮಗೆ ಬಂದಿದ್ದ ಕಾಗದವನ್ನೂ ಹರಿದು ಹಾಕಿದರು! ಅವರ ಗುಪ್ತದಾನ ಹೀಗೆ ನಡೆಯುತ್ತಿತ್ತು.

೪. ವೆಂಕಣ್ಣಯ್ಯನವರಿಗೆ ಕೋಪವಾಗಲೀ, ಕೆಟ್ಟ ಬೈಗುಳಗಳಾಗಲೀ ತಿಳಿಯದೆಂದೇ ಹೇಳಬೇಕಾದರೂ ಅಂತಹವರಿಗೂ ಕೋಪಬಂದ ಘಟನೆಗಳನ್ನು ನೋಡಬಹುದು. ವೆಂಕಣ್ಣಯ್ಯನವರು ಮನೆಯಲ್ಲಿದ್ದರೆ ಮನೆ ನಿಶ್ಶಬ್ದ ನೀರವವಾಗಿರುತ್ತಿತ್ತು. ಶಾಂತಿಯಿರುತ್ತಿತ್ತು. ಒಂದು ದಿನ ಹಾಲಿನವಳು ತಮ್ಮ ಪತ್ನಿಯನ್ನು ಕುರಿತು ಅತ್ಯಂತ ಹೀನಾಯವಾಗಿ ಮಾತನಾಡಿದುದನ್ನು ಕೇಳಿ ಕೆರಳಿ ಕೆಂಡಾಮಂಡಲವಾದರು! ಅವರು ತಮ್ಮ ಕೊಠಡಿಯಿಂದ ಹೊರಬಂದು ಹಾಲಿನವಳ ಕಡೆಗೆ ಧಾವಿಸಿ ನಿನ್ನ... ಎಂದು ಅಷ್ಟಕ್ಕೇ ನಿಲ್ಲಿಸಿಬಿಟ್ಟರು. ಅವರ ಬಾಯಲ್ಲಿ ಬೈಗುಳದ ಮಾತುಗಳು ಬರಲಿಲ್ಲ. ಅವರ ರೌದ್ರವತಾರಕ್ಕೆ ಹಾಲಿನವಳು ಓಡಿಹೋದಳು. ಮನೆಯವರೆಲ್ಲರಿಗೂ ಅವರ ರೌದ್ರಮೂರ್ತಿಯನ್ನು ಕಂಡು ಉಸಿರುಗಟ್ಟಿದಂತಾಯಿತು. ಅನಂತರ ತಮ್ಮ ಕೋಪಕ್ಕೆ ತಾವೇ ನೊಂದುಕೊಳ್ಳುತ್ತಾ ತಲೆಗೆ ತಣ್ಣೀರನ್ನು ಸುರಿದುಕೊಂಡು ಉಪಶಮನ ಮಾಡಿಕೊಂಡರಂತೆ!

ವೆಂಕಣ್ಣಯ್ಯನವರ ಮಗ ಅಶ್ವತ್ಥ ತನ್ನ ತಂದೆಗೆ ಸುಳ್ಳು ಹೇಳಿದ್ದಲ್ಲದೆ, ಅದನ್ನೇ ಸತ್ಯವೆಂದೂ ವಾದ ಮಾಡಿದ್ದರಿಂದ, ಅದನ್ನು ಸಹಿಸದೆ ಮಗನನ್ನು ಯದ್ವಾತದ್ವಾ ಹೊಡೆದರು. ಅಷ್ಟೇ ಆಗಿದ್ದರೆ ವಿಶೇಷವೇನೂ ಇರುತ್ತಿರಲಿಲ್ಲವೇನೋ? ಆದರೆ ಅವರು ಆತ್ಮದಂಡನೆ ಮಾಡಿಕೊಂಡು ಮೂರುದಿನ ಅನ್ನವನ್ನೇ ತ್ಯಜಿಸಿದ್ದರು. ಈ ಘಟನೆಯನ್ನು ಅಶ್ವತ್ಥ ತನ್ನ ಆತ್ಮೀಯ ಮಿತ್ರ ಹೆಚ್.ಕೆ. ರಂಗನಾಥ್ ಅವರ ಬಳಿ ಹೇಳಿ ಕಣ್ಣೀರಿಟ್ಟದ್ದನ್ನು ಉಲ್ಲೇಖಿಸಿದ್ದಾರೆ. "ಅಂತಹ ರೌದ್ರದಲ್ಲಿ ವೆಂಕಣ್ಣಯ್ಯನವರನ್ನು ಹಿಂದೆ ಯಾರೂ ನೋಡಿರಲಿಲ್ಲ. ಮುಂದೆ ಯಾರೂ ನೋಡಲಿಲ್ಲ" ಎಂದಿರುವರು.

೫. ಆಗಿನ ಯುವರಾಜ ಜಯಚಾಮರಾಜ ಒಡೆಯರಿಗೆ ಕನ್ನಡ ಪಾಠ ಹೇಳುವಂತೆ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರಿಂದ ಆಹ್ವಾನ ಬಂದಿತು. ವೆಂಕಣ್ಣಯ್ಯನವರಿಗೆ ಕೈತುಂಬ ಸಂಬಳ, ದಿನನಿತ್ಯ ಕಾರಿನಲ್ಲಿ ಅರಮನೆ ಪಯಣ, ಮಹಾರಾಜರ ಕೃಪಾಕಟಾಕ್ಷ, ಶುಚಿರುಚಿಯಾದ ಖಾದ್ಯ ಪದಾರ್ಥಗಳು ಯಾರಿಗುಂಟು, ಯಾರಿಗಿಲ್ಲ ಆ ವೈಭವ? ಆದರೆ ವೆಂಕಣ್ಣಯ್ಯನವರು ತಮ್ಮ ಸ್ವಭಾವಕ್ಕೆ ಅರಮನೆಯ ರೀತಿ ರಿವಾಜುಗಳಂತೆ ನಡೆಯುವುದು ಕಷ್ಟಸಾಧ್ಯ ಎಂದು ತಿಳಿಸಿ, ತೀ ನಂ ಶ್ರೀಕಂಠಯ್ಯನವರಿಗೆ ಆ ಕಾರ್ಯವನ್ನು ವಹಿಸಿಕೊಟ್ಟರು. ವೆಂಕಣ್ಣಯ್ಯನವರದು ಫಲಾಪೇಕ್ಷೆಯಿಲ್ಲದ ಇದ್ದುದರಲ್ಲೇ ತೃಪ್ತಿಪಡುವ ಮನೋಭಾವವಲ್ಲದೆ, ನಿರ್ಲಿಪ್ತತೆ, ಆತ್ಮಗೌರವ, ಒಂದು ರೀತಿಯ ಸಂಕೋಚ ಅವರಲ್ಲಿತ್ತು.

೬. ವೆಂಕಣ್ಣಯ್ಯನವರಲ್ಲಿ ಹಾಸ್ಯ ಪ್ರವೃತ್ತಿ ಕಡಿಮೆ. ಆದರೂ ಆಗಿಂದಾಗ್ಗೆ ನವಿರಾದ ಹಾಸ್ಯ ಹೊರಸೂಸುತ್ತಿದ್ದವು. ನಸ್ಯಪ್ರಿಯರಾದ ವೆಂಕಣ್ಣಯ್ಯನವರು ಅದನ್ನು 'ಬ್ರಹ್ಮಪತ್ರ' ಎಂದು ಕರೆದು 'ಬಿಲ್ವಪತ್ರೆ' ತುಳಸಿಗಳಂತೆ ಹೊಗೆಸೊಪ್ಪು ಕೂಡ ಶ್ರೇಷ್ಠ ಅದನ್ನು ಕೀಳಾಗಿ ಕಾಣುವುದು ಮಹಾಪಾಪ ಎಂದು ಹೇಳಿ ನಗುತ್ತಿದ್ದರಂತೆ.

ಒಮ್ಮೆ ಟಿ.ಪಿ. ಕೈಲಾಸಂ ವೆಂಕಣ್ಣಯ್ಯನವರ ಮನೆಗೆ ಬಂದಾಗ ಬಾಗಿಲ ಬಳಿ ನಿಂತಿದ್ದ

ಆಜಾನುಬಾಹುವಾದ ವೆಂಕಣ್ಣಯ್ಯನವರನ್ನು 'ಸ್ವರ್ಗದಲ್ಲಿ ಎಲ್ಲ ಕ್ಷೇಮವೋ' ಎಂದು ಪ್ರಶ್ನಿಸಿದರಂತೆ ಆಗ ವೆಂಕಣ್ಣಯ್ಯನವರದು ಕುಳ್ಳಗಿದ್ದ ಕೈಲಾಸಂಗೆ, 'ಸ್ವರ್ಗದಲ್ಲಿ ಎಲ್ಲ ಕ್ಷೇಮ.' ಪಾತಾಳದ ಸಮಾಚಾರವೇನು? ಎಂದು ಹಾಸ್ಯದಿಂದ ಪ್ರಶ್ನಿಸಿದರಂತೆ.

ಮಹಾರಾಣಿ ಕಾಲೇಜಿನ ಸಮಾರಂಭವೊಂದರಲ್ಲಿ ಬೋರ್ಡ್‌ನಲ್ಲಿ ಬರೆದಿದ್ದ ಹಂದಿಯ ಚಿತ್ರಕ್ಕೆ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಬಾಲ ಬರೆಯುವ ಸ್ಪರ್ಧೆ ಅದು ತುಂಬಾ ಸುಲಭವೆಂದು ಭಾವಿಸಿದ್ದ ಸ್ಪರ್ಧಾಳುಗಳು ನಾ ಮುಂದು ತಾ ಮುಂದು ಎಂದು ಬಾಲ ಬರೆಯಲು ಹೋಗಿ ಸೋತರು. ಆದರೆ ವೆಂಕಣ್ಣಯ್ಯನವರು ಮಾತ್ರ ಸರಿಯಾದ ಜಾಗದಲ್ಲಿ ಬಾಲವನ್ನು ಬರೆದು ಸ್ಪರ್ಧೆಯಲ್ಲಿ ಗೆದ್ದು 'ಬೆಳ್ಳಿಯ ಹಕ್ಕಿ' ಬಹುಮಾನ ಪಡೆದರು. "ವೆಂಕಣ್ಣಯ್ಯ ಹಂದಿ ಬಾಲ ಬರೆದು ಬೆಳ್ಳಿ ಹಕ್ಕಿ ಪಡೆದರು" ಎಂಬುದು ಬಹುಕಾಲ ತಮಾಷೆಯ ಮಾತಾಗಿತ್ತು.

೭. ಬೆಂಗಳೂರಿಗೆ ಬಂದಾಗಲೆಲ್ಲಾ ಆತ್ಮೀಯ ಮಿತ್ರ ವಿ. ಸೀತಾರಾಮಯ್ಯನವರ ಮನೆಗೆ ಹೋಗುತ್ತಿದ್ದರು. ಆಜಾನುಬಾಹುವಾದ ಅವರು ತಲೆತಗ್ಗಿಸಿಯೇ ಬಾಗಿಲ ಒಳಗೆ ಪ್ರವೇಶಿಸಬೇಕಾಗುತ್ತಿತ್ತು. ವಿ.ಸೀ. ಅವರಿಗೆ ಪೂಜ್ಯ ವೆಂಕಣ್ಣಯ್ಯನವರು ಪ್ರತಿಬಾರಿಯೂ ತಲೆಬಾಗಬೇಕಾಗುತ್ತದಲ್ಲ ಎಂದು ಮನಸ್ಸಿಗೆ ಕಸಿವಿಸಿಯಾಗಿ ಅವರು ತಮ್ಮ ಮನೆ ಬಾಗಿಲನ್ನೇ ಎತ್ತರವಾಗಿ ಮಾಡಿಸಿದರಂತೆ ಇದು ವಿ.ಸೀ. ಅವರಿಗೆ ವೆಂಕಣ್ಣಯ್ಯನವರಲ್ಲಿದ್ದ ಪೂಜ್ಯಭಾವದ ಪ್ರತೀಕವಾಗಿತ್ತು.

೮. ಬದನವಾಳಿನ ಖಾದಿ ಕೇಂದ್ರದಲ್ಲಿ ಖಾದಿ ರುಮಾಲುಗಳನ್ನು ತಯಾರಿಸಿ ಉದ್ದಕ್ಕೂ ಜರಿ ಅಂಚು ಹಾಕಿ ನೇಯುತ್ತಿದ್ದುದರಿಂದ ರುಮಾಲು ದುಬಾರಿಯಾಗುತ್ತಿತ್ತು. ವೆಂಕಣ್ಣಯ್ಯನವರು ಅಂಗಡಿಯವರಿಗೆ "ಜರಿ ಎದ್ದು ಕಾಣುವುದು ಎರಡು ಮೊಳದಷ್ಟು ಮಾತ್ರ, ನೀವು ಉದ್ದಕ್ಕೂ ಜರಿ ನೇಯ್ದು ಬೆಲೆ ಹೆಚ್ಚಿಸುವುದೇಕೆ? ರುಮಾಲಿನ ಕೊನೆಯ ಎರಡು ಸುತ್ತಿಗೆ ಮಾತ್ರ ಬರುವಂತೆ ಜರಿನೆಯ್ದರೆ ರುಮಾಲಿನ ಬೆಲೆ ಅರ್ಧಕ್ಕಿಂತ ಕಡಿಮೆಯಾಗುತ್ತದೆ ಇದರಿಂದ ಜರಿ ಎದ್ದು ಕಾಣುವುದಲ್ಲದೆ ಗಿರಾಕಿಗೂ ಅನುಕೂಲ" ಎಂದಾಗ ಅಲ್ಲೇ ಇದ್ದ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು "ಸಾರ್! ನಾನು ಎಷ್ಟೋ ರುಮಾಲುಗಳನ್ನು ಮಾರಿದ್ದೇನೆ. ಈ ವಿಚಾರ ನನಗೆ ಹೊಳೆಯಲೇ ಇಲ್ಲ" ಎಂದಾಗ ಅವರು "ನೀವು ರುಮಾಲು ಮಾರಿದ್ದೀರಿ ಅಷ್ಟೇ. ನನ್ನ ಹಾಗೆ ನೀವು ಕೊಂಡಿದ್ದರೆ ತಕ್ಷಣ ಹೊಳೆಯುತ್ತಿತ್ತು" ಎಂದರು. ಅನಂತರ ಅವರ ಸಲಹೆಯಂತೆ ಕಾಲುಭಾಗ ಮಾತ್ರ ಜರಿಹಾಕಿ ರುಮಾಲು ತಯಾರಿಸಿದಾಗ ಬೆಲೆ ಕಡಿಮೆಯ್ಯಾಗಿ, ಕೊಳ್ಳುವವರ ಸಂಖ್ಯೆಯೂ ಹೆಚ್ಚಾದುದಲ್ಲದೆ ಆ ರುಮಾಲುಗಳಿಗೆ 'ವೆಂಕಣ್ಣಯ್ಯ ರುಮಾಲು' ಎಂದು ಹೆಸರಾಯಿತು.

**ಸಾಹಿತ್ಯ ಕೈಂಕರ್ಯ**

ವೆಂಕಣ್ಣಯ್ಯನವರದು ಬರೆದುದಕ್ಕಿಂತ ಬರೆಸಿದ್ದೇ ಹೆಚ್ಚು. ಆದರೆ ಬರೆದದ್ದೆಲ್ಲಾ ಅತ್ಯಂತ ತೂಕವಾದದ್ದು, ಮೌಲಿಕವಾದದ್ದು ಆಗಿತ್ತು. ಪರಿಪೂರ್ಣತೆಯ ದೃಷ್ಟಿಯಿಂದ

ಒಮ್ಮೆ ಬರೆದದ್ದನ್ನು ಹಲವು ಬಾರಿ ತಿದ್ದಿ, ತೀಡಿ, ಪರಿಷ್ಕರಿಸಿದ ನಂತರವೇ ಮುದ್ರಣಕ್ಕೆ ನೀಡುತ್ತಿದ್ದರು.

ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಸಂದರ್ಭದಲ್ಲಿ ಎ.ಆರ್. ಕೃಷ್ಣಶಾಸ್ತ್ರಿಗಳಿಂದ ಬಂಗಾಳಿ ಭಾಷೆಯನ್ನು ಕಲಿತ ವೆಂಕಣ್ಣಯ್ಯನವರು ಮೂಲ ಬಂಗಾಳಿ ಕೃತಿಗಳನ್ನು ಅಧ್ಯಯನ ಮಾಡಿ ಶ್ರೀರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಯನ್ನು ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ರಚಿಸಿದರು. 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ'ದಲ್ಲಿನ ಮೊದಲ ಭಾಗವನ್ನು ಕನ್ನಡಕ್ಕೆ ಭಾಷಾಂತರಿಸಿದರು. ವಿಶ್ವಕವಿ ರವೀಂದ್ರನಾಥ ಠಾಕೂರರ 'ಪ್ರಾಚೀನ ಸಾಹಿತ್ಯ' ಎಂಬ ಸಾಹಿತ್ಯಕ ಲೇಖನಗಳ ಕೃತಿಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದು, ಅನುವಾದ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ಕೃತಿ ಎಂಬ ಹೆಗ್ಗಳಿಕೆ ಪಾತ್ರವಾಗಿ ಹಲವಾರು ಮುದ್ರಣಗಳನ್ನು ಕಂಡು ಜನಪ್ರಿಯವಾಯಿತು. ಈ ಕೃತಿಯಲ್ಲಿ ಠಾಕೂರರು ರಾಮಾಯಣ, ಮೇಘದೂತ, ಕುಮಾರಸಂಭವ, ಶಾಕುಂತಲ, ಕಾದಂಬರಿ ಚಿತ್ರ, ಕಾವ್ಯದ ಅನಾದರ, ಧರ್ಮಪದ ಇವುಗಳನ್ನು ಕುರಿತು ರಚಿಸಿರುವ ವಿಮರ್ಶಾತ್ಮಕ ಲೇಖನಗಳಿಂದ ಕೂಡಿದೆ. ಇಂತಹ ಕೃತಿಯನ್ನು ಕನ್ನಡದಲ್ಲಿ ಅನುವಾದಿಸಿದುದು ವೆಂಕಣ್ಣಯ್ಯನವರ ಹೆಗ್ಗಳಿಕೆಯಾಗಿದೆ. ಇದರಲ್ಲಿ ಬಂಕಿಮಚಂದ್ರ ಚಟರ್ಜಿ ಅವರ "ಶಕುಂತಲಾ ಮಿರಾಂಡ ಮತ್ತು ಡೆಸ್ಡಿಮೋನಾ" ಲೇಖನದ ಅನುವಾದವಿದೆ. ವೆಂಕಣ್ಣಯ್ಯನವರ ಭಾಷಾಂತರದ ಹಿರಿಮೆಯೆಂದರೆ ಅವು ಭಾಷಾಂತರಗಳೆಂಬ ಭಾವನೆಯೇ ಬಾರದಂತೆ ಸರಸ ಹಾಗೂ ಸರಳವಾದ ಭಾಷೆಯಲ್ಲಿರುವುದೇ ವೈಶಿಷ್ಟ್ಯವಾಗಿದೆ. ಇದು ಅವರಿಗೆ ಬಂಗಾಳಿ ಭಾಷೆಯ ಮೇಲಿನ ಪ್ರಭುತ್ವವನ್ನು ಎತ್ತಿ ತೋರಿಸುತ್ತಿವೆ. ಈ ಗ್ರಂಥದ ಬಗ್ಗೆ ಕುವೆಂಪುರವರು 'ಇದು ನಮ್ಮ ಆಧುನಿಕರ ಸಾಹಿತ್ಯ ವಿಮರ್ಶಾದೃಷ್ಟಿಗೆ ಸಾಕಷ್ಟು ದಾರಿದೀಪವಾಯಿತು' ಎಂದಿರುವುದು ಗಮನಾರ್ಹ.

ಹರಿಶ್ಚಂದ್ರ ಕಾವ್ಯಸಂಗ್ರಹ, ಕರ್ಣಾಟಕ ಕಾದಂಬರಿ ಸಂಗ್ರಹ, ಬಸವರಾಜ ದೇವರ ರಗಳೆ ವೆಂಕಣ್ಣಯ್ಯನವರು ಸಂಪಾದಿಸಿದ ಕೃತಿಗಳು. ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಪ್ರಾಚ್ಯ ಸಂಶೋಧನಾಲಯದವರು ಪ್ರಕಟಿಸಿದ 'ಪಂಪಭಾರತ' ಹಾಗೂ 'ಕುಮಾರವ್ಯಾಸ ಭಾರತ' ಕೃತಿಗಳ ಸಂಪಾದನಾ ಕಾರ್ಯದಲ್ಲಿ ಅಪಾರವಾಗಿ ಶ್ರಮವಹಿಸಿದರು. 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' ಮತ್ತು 'ಪ್ರಬುದ್ಧ ಕರ್ಣಾಟಕ' ಸಾಹಿತ್ಯ ಪತ್ರಿಕೆಗಳಲ್ಲಿ ಅನೇಕ ಸಂಶೋಧನಾತ್ಮಕ ಲೇಖನಗಳನ್ನು ರಚಿಸಿದರು.

ವೆಂಕಣ್ಣಯ್ಯನವರು ರಾಘವಾಂಕನ 'ಹರಿಶ್ಚಂದ್ರ ಕಾವ್ಯ ಸಂಗ್ರಹ'ವನ್ನು ಎ.ಆರ್. ಕೃಷ್ಣಶಾಸ್ತ್ರಿಗಳೊಡನೆ ಸಂಪಾದಿಸಿದರು. ಶಾಸ್ತ್ರಿಗಳು ವಿದ್ವತ್ಪೂರ್ಣವಾದ 'ಪೀಠಿಕೆ'ಯನ್ನು ರಚಿಸಿದರೆ ವೆಂಕಣ್ಣಯ್ಯನವರು ಗ್ರಂಥಪಾಠಗಳನ್ನು ನಿರ್ಧರಿಸುವುದರೊಂದಿಗೆ ಕಾವ್ಯವನ್ನು ಸಂಗ್ರಹಿಸಿ ಶಬ್ದಕೋಶವನ್ನು ಸಿದ್ಧಪಡಿಸಿದರು. ಈ ಕೃತಿ ಪ್ರಕಟವಾದ ನಂತರ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಎಲ್ಲ ಕೃತಿಗಳಿಗೆ ದಾರಿದೀಪವಾಯಿತು.

'ಕರ್ಣಾಟಕ ಕಾದಂಬರಿ ಸಂಗ್ರಹ'ವು ವೆಂಕಣ್ಣಯ್ಯನವರೇ ಸಂಪೂರ್ಣವಾಗಿ ಸಂಪಾದಿಸಿದ ಕೃತಿ. ಸಂಸ್ಕೃತ ಗದ್ಯ ಸಾಹಿತ್ಯದ ಮೇರುಕೃತಿಯಾದ ಬಾಣಭಟ್ಟನ

'ಕಾದಂಬರಿ'ಯನ್ನು ನಾಗವರ್ಮ ಚಂಪೂಶೈಲಿಯಲ್ಲಿ ರಚಿಸಿದ್ದು, ಅವನ ಶೈಲಿ ಔಚಿತ್ಯ ಪೂರ್ಣವಾಗಿದೆ ಎಂದು ಸಮರ್ಥಿಸಿದ್ದಾರೆ. "ಕಥೆ ಹೇಳುವಾಗ ನಾಗವರ್ಮನ ಶೈಲಿ ತುಂಬಾ ತಿಳಿಯಾಗಿರುತ್ತದೆ" ಎಂದು ಮೆಚ್ಚಿಗೆ ವ್ಯಕ್ತಪಡಿಸಿ, ಮೂಲದಲ್ಲಿನ ಸುಂದರವಾದ ಭಾಗಗಳನ್ನು ತೊರೆದಿರುವುದನ್ನು ಕಟು ವಿಮರ್ಶೆಗೆ ಗುರಿಪಡಿಸಿದ್ದಾರೆ. ಆದರೆ ಒಟ್ಟಾರೆ ನಾಗವರ್ಮ ಕಾದಂಬರಿಯಂತಹ ಮಹಾನ್ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿರುವಲ್ಲಿ ಕವಿ ತೋರಿರುವ ಕೌಶಲ ಹಾಗೂ ಜಾಣ್ಮೆಯನ್ನು ಅವರು ಮೆಚ್ಚಿಕೊಳ್ಳುತ್ತಾರೆ. ತ.ಸು. ಶಾಮರಾಯರು "ಬಾಣಭಟ್ಟ, ಆತನನ್ನು ಕನ್ನಡಕ್ಕೆ ತಂದು ಕೊಟ್ಟಿರುವ ನಾಗವರ್ಮ ಇವರ ಕಾವ್ಯ ಒಂದು ದಟ್ಟವಾದ ಅರಣ್ಯವಾದರೆ ವೆಂಕಣ್ಣಯ್ಯನವರು ಕಾಡನ್ನು ಸವರಿ ಅದನ್ನು ಒಂದು ಸುಂದರವಾದ ನಂದನವನವನ್ನಾಗಿ ಮಾಡಿದ್ದಾರೆ" ಎಂದಿದ್ದಾರೆ.

'ಬಸವರಾಜ ದೇವರ ರಗಳೆ'ಯನ್ನು ವೆಂಕಣ್ಣಯ್ಯನವರು ತಾವೇ ಸ್ವತಃ ಸ್ವತಂತ್ರವಾಗಿ ಸಂಪಾದಿಸಿ ಪ್ರಕಟಿಸಿದ ಕೃತಿಯಾಗಿದೆ. ಈ ಕೃತಿ ಹರಿಹರನಿಂದ ರಚಿತವಾಗಿದ್ದು ಬಸವಣ್ಣನವರ ಜೀವನದ ಬಗ್ಗೆ ಕನ್ನಡದಲ್ಲಿ ರಚನೆಯಾಗಿರುವ ಅತ್ಯಂತ ಪ್ರಾಚೀನ ಕೃತಿ. ಹೀಗಾಗಿ ಇದು ಅತ್ಯಂತ ವಿಶ್ವಾಸಾರ್ಹವಾಗಿದೆ. ಹರಿಹರನೇ ಈ ರಗಳೆಯ ಕವಿಯೆಂದು ಸಾಧಿಸಲು ಅವನ ಇತರ ರಗಳೆಗಳಿಗೂ ಬಸವರಾಜ ದೇವರ ರಗಳೆಗೂ ಇರುವ ಸಾಮ್ಯತೆಯನ್ನು ಎತ್ತಿ ತೋರಿಸಿದುದಲ್ಲದೆ, ಇತರ ಕೃತಿಕಾರರ ಹೇಳಿಕೆಗಳ ನಿದರ್ಶನವನ್ನು ನೀಡಿ ಹರಿಹರನ ಕರ್ತೃತ್ವವನ್ನು ಸ್ಥಾಪಿಸಿದರು. ರಗಳೆ ಛಂದಸ್ಸನ್ನು ತನ್ನ ಕಾವ್ಯವಾಹಕವನ್ನಾಗಿ ಮಾಡಿಕೊಂಡು ಇಡೀ ಕೃತಿಯನ್ನು ರಗಳೆಯಲ್ಲಿ ರಚಿಸಿದ ಕೀರ್ತಿ ಅವನದಾಗಿದೆ. ಈ ಕೃತಿಯನ್ನು ಸಂಪಾದಿಸಿ ವಿಮರ್ಶಿಸಿರುವ ವೆಂಕಣ್ಣಯ್ಯನವರು "ಹರಿಹರನು ಮೇಲಿಂದ ಮೇಲೆ ಬಸವಣ್ಣನವರ ಅಲೌಕಿಕ ಕಾರ್ಯಗಳನ್ನೂ ಅದ್ಭುತ ಗಳನ್ನೂ ಮಹಿಮೆಗಳನ್ನು ಉದ್ಘೋಷಿಸಿದರೂ ಆತನ ಸರಳವಾದ ಮಾನವ ಹೃದಯವನ್ನು ಮಾತ್ರ ಎಲ್ಲಿಯೂ ಮರೆತಿಲ್ಲ" ಎಂದಿದ್ದಾರೆ.

ವೆಂಕಣ್ಣಯ್ಯನವರು ಡಿ.ಎಲ್. ನರಸಿಂಹಾಚಾರ್ಯರೊಂದಿಗೆ ಸಂಪಾದಿಸಿರುವ ಕೃತಿ ರಾಘವಾಂಕನ 'ಸಿದ್ಧರಾಮಚಾರಿತ್ರ.' ಡಿ.ಎಲ್.ಎನ್. ಅವರು ಪಾಂಡಿತ್ಯ ಪೂರ್ಣವಾದ ಸುದೀರ್ಘವಾದ ಪೀಠಿಕೆಯನ್ನು ರಚಿಸಿದ್ದರೆ ವೆಂಕಣ್ಣಯ್ಯನವರು ಪಾಠಾಂತರಗಳನ್ನು ಗುರುತಿಸುವ ಕಾರ್ಯವನ್ನು ನೆರವೇರಿಸಿದರು. ಆದರೆ ದುರ್ದೈವವೆಂದರೆ ಈ ಕೃತಿ ಅವರ ಜೀವಿತಕಾಲದಲ್ಲಿ ಪ್ರಕಟವಾಗಲಿಲ್ಲ. ಅವರ ವೈದುಷ್ಯ, ವಿಮರ್ಶೆ, ರಸಿಕತೆಗಳು ಈ ಕೃತಿಯಲ್ಲೂ ಎದ್ದು ಕಾಣುತ್ತವೆ. ಅತ್ಯುಪಯುಕ್ತವಾದ ಟಿಪ್ಪಣಿ ಹಾಗೂ ಶಬ್ದಕೋಶವನ್ನು ನೀಡಿದ್ದಾರೆ.

ಬಿ.ಎಂ.ಶ್ರೀ.ಯವರೊಂದಿಗೆ ಕನ್ನಡ ಕೈಪಿಡಿಯ ೪ನೆಯ ಭಾಗದಲ್ಲಿರುವ ಅಂದಿನ ಕಾಲದ ಹೊಸ ವಿಷಯವಾದ ಕನ್ನಡ ಭಾಷಾ ಚರಿತ್ರೆಯನ್ನು ರಚಿಸಿದ್ದಾರೆ. ಇದನ್ನು ರಚಿಸಲು ಹಲವಾರು ಆಂಗ್ಲ ಭಾಷಾ ಗ್ರಂಥಗಳಿಂದ ವಿಷಯವನ್ನು ಸಂಗ್ರಹಿಸಿ ಸರಳವಾದ, ನಿರ್ದಿಷ್ಟವಾದ, ಸುಲಭಗ್ರಾಹ್ಯವಾದ ಶೈಲಿಯಲ್ಲಿ ರಚಿತವಾಗಿರುವುದನ್ನು ಕಾಣಬಹುದು.

'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು' ಎಂಬ ಕೃತಿಯಲ್ಲಿ ಕನ್ನಡ

ಸಾಹಿತ್ಯ ಚರಿತ್ರೆ, ಹತ್ತನೆಯ ಶತಮಾನದ ಕರ್ನಾಟಕ ಸಾಹಿತ್ಯ ಚರಿತ್ರೆ. ಹನ್ನೆರಡು, ಹದಿಮೂರು, ಹದಿನಾಲ್ಕನೇ ಶತಮಾನಗಳ ಕನ್ನಡ ಸಾಹಿತ್ಯ ಚರಿತ್ರೆ, ಕವಿರಾಜಮಾರ್ಗ ಗ್ರಂಥದ ಕರ್ತೃಯಾರು? ಬಿಜ್ಜಳನು ಜೈನನೆ? ಪಂಪಭಾರತ, ಕನ್ನಡದಲ್ಲಿ ಬೌದ್ಧ ಸಾಹಿತ್ಯವಿತ್ತೆ?, ನಿಜಾಂ ಕರ್ನಾಟಕದ ಸುರಪುರವೇ ಲಕ್ಷ್ಮೀಶನ ಊರೇ? ಶಿವತತ್ವಸಾರ ಇತ್ಯಾದಿ ವಿದ್ವತ್ಪೂರ್ಣವಾದ ಲೇಖನಗಳು ಕೃತಿರೂಪದಲ್ಲಿ ಒಂದಾಗಿ ಪ್ರಕಟವಾಗಿದೆ. ಇದರೊಂದಿಗೆ ಸಾಹಿತ್ಯ ಪತ್ರಿಕೆಗಳಾದ 'ಪ್ರಬುದ್ಧ ಕರ್ಣಾಟಕ,' 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' 'ಸದ್ಬೋಧ ಚಂದ್ರಿಕೆ' ಇತ್ಯಾದಿಗಳಲ್ಲಿ ಗ್ರಂಥಾವಲೋಕನ ಲೇಖನಗಳು ಪ್ರಕಟವಾಗಿವೆ.

ಉದಯೋನ್ಮುಖ ಬರಹಗಾರರು ಬೆಳಕಿಗೆ ಬರಬೇಕೆಂಬ ಉದ್ದೇಶದಿಂದ ಮಹಾರಾಜಾ ಕಾಲೇಜಿನ ಕರ್ನಾಟಕ ಸಂಘದಿಂದ 'ಕಿರಿಯ ಕಾಣಿಕೆ,' 'ತಳಿರು' ಎಂಬ ವಿದ್ಯಾರ್ಥಿ ಕವಿಗಳ ಕವನ ಸಂಕಲನಗಳನ್ನು ಹೊರತಂದರು. 'ನಾಗಾನಂದ,' 'ಸಾವಿನ ಸಮಸ್ಯೆ,' 'ಆಷಾಢಭೂತಿ' ಇತ್ಯಾದಿ ನಾಟಕಗಳನ್ನು ಪ್ರಕಟಿಸಿ ಹೊಸ ರೀತಿಯ ಬರವಣಿಗೆಗೆ ಪ್ರೋತ್ಸಾಹ ನೀಡಿದರು. 'ಕುಮಾರವ್ಯಾಸ ಜಯಂತಿ'ಯನ್ನು ಏರ್ಪಡಿಸಿ. 'ಕುಮಾರವ್ಯಾಸ ಪ್ರಶಸ್ತಿ'ಯನ್ನು ಪ್ರಕಟಣೆಗೆ ಸಿದ್ಧಗೊಳಿಸಿದರು. ಗಮಕ ಕಲೆಯನ್ನು ಪ್ರೋತ್ಸಾಹಿಸಿ ಕೆ. ಕೃಷ್ಣರಾಯರು, ಎಸ್. ಜಿ. ಬಿಂದೂರಾಯರು, ಕೆ. ಜಿ. ಸಂಪತ್ಕುಮಾರಾಚಾರ್ಯರು ಹಾಗೂ ಮಾಯೀಗೌಡರ ಗಮಕ ವಾಚನಗಳನ್ನು ಆಯೋಜಿಸಿದರು. ಉಪಾಧ್ಯಾಯರ ಸಂಘದ ವತಿಯಿಂದ ಯುವಕರನ್ನು ಪ್ರೋತ್ಸಾಹಿಸಿ ವಿಜ್ಞಾನ ವಿಷಯಗಳನ್ನು ಕುರಿತು ಉಪನ್ಯಾಸವನ್ನು ಏರ್ಪಡಿಸಿದರು.

**ಅಂತಿಮ ದಿನಗಳು**

೧೯೩೮ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕರ್ನಾಟಕ – ಕರ್ಣಾಟಕ ಎಂಬುದರಲ್ಲಿ ನ–ಣ ಚರ್ಚೆ ಅತ್ಯಂತ ತೀವ್ರವಾಗಿ ನಡೆದು ಯಾವುದರ ಬಳಕೆ ಉಚಿತವೆಂಬುದರಲ್ಲಿ ಒಮ್ಮತ ಉಂಟಾಗದೆ ಪರಿಷತ್ತು ವಿಭಜನೆಯಾಗುವ ಹಂತವನ್ನು ತಲುಪಿದಾಗ ವೆಂಕಣ್ಣಯ್ಯನವರು ಚಿಂತಾಕ್ರಾಂತರಾಗಿ ತಮ್ಮ ಶಿಷ್ಯರಾದ ಸಂ.ವಾ. ಕೃಷ್ಣಮೂರ್ತಿರಾಯರ ಮೂಲಕ 'ಕನ್ನಡ ಸಾಹಿತ್ಯ ಪರಿಷತ್ತು' ಎಂಬ ತಿದ್ದುಪಡಿಯನ್ನು ಕಳುಹಿಸಲು ರಾತ್ರಿಯಿಡೀ ಚರ್ಚೆಯಾಗಿ ತಿದ್ದುಪಡಿಯನ್ನು ಅಂಗೀಕರಿಸಿ ಠರಾವು ಮಾಡಲಾಯಿತು. ಬಳ್ಳಾರಿಯಿಂದ ಮೈಸೂರಿಗೆ ತಲುಪಿದ ವೆಂಕಣ್ಣಯ್ಯನವರು ಅನಾರೋಗ್ಯ ಪೀಡಿತರಾಗಿ ಹಾಸಿಗೆ ಹಿಡಿದರೂ ವಿದ್ಯಾರ್ಥಿಗಳಿಗೆ ಪಾಠಗಳು ಆಗಿಲ್ಲವಲ್ಲ ಎಂಬ ಚಿಂತೆ ಅವರನ್ನು ಕಾಡುತ್ತಿತ್ತು. ಖಾಯಿಲೆ ಉಲ್ಬಣಗೊಂಡು ೨೪ನೆಯ ಫೆಬ್ರವರಿ ೧೯೩೯ರಂದು ರಾತ್ರಿ ಅವರು ಹಸನ್ಮುಖಿಗಳಾಗಿ ಇಹಲೋಕವನ್ನು ತ್ಯಜಿಸಿದರು.

ಪ್ರೊ. ಡಿ.ಎಲ್. ನರಸಿಂಹಾಚಾರ್ಯರು ವೆಂಕಣ್ಣಯ್ಯನವರ ಅಂತಿಮ ದಿನಗಳನ್ನು ಕುರಿತು ಹೀಗೆ ಹೇಳುತ್ತಾರೆ: "ಒಂದು ವಾರ ಕಳೆದ ಮೇಲೆ ಜ್ವರ ಹತೋಟಿಗೆ ಬಂದು ಬಿಟ್ಟು ಹೋಯಿತು. ತಡವಾದರೂ ಅವರು ಖಂಡಿತ ಚೇತರಿಸಿಕೊಳ್ಳುವರೆಂಬ ಆಸೆ ನಮ್ಮಲ್ಲಿ

ಬೆಳೆಯಿತು. ಆದರೆ ಜ್ವರ ಅವರ ಶಕ್ತಿಯನ್ನು ಕುಡಿದು ಒಂದೆರಡು ತೊಟ್ಟನ್ನು ಮಾತ್ರ ಉಳಿಸಿತ್ತು. ಜೇನುನೊಣ ಎದ್ದು ಹೋಗುವಾಗ ಗೂಡು ಬರಿದಾಗುವಂತೆ ಅವರ ಮೈ ಆಗಿತ್ತು" ಎಂದಿರುವರು.

ಅವರ ನಿಧನದ ವಾರ್ತೆ ತಿಳಿದ ಕೂಡಲೆ ಕುವೆಂಪು ಇತ್ಯಾದಿ ಸಾಹಿತ್ಯ ಲೋಕದ ದಿಗ್ಗಜರು, ಮೈಸೂರು ವಿಶ್ವವಿದ್ಯಾಲಯದ ಅಧಿಕಾರಿವರ್ಗ, ಅರಮನೆಯ ಪ್ರತಿನಿಧಿಗಳು, ಅವರ ಅಪರಿಮಿತವಾದ ಶಿಷ್ಯರು, ಹಾಗೂ ಬೆಂಗಳೂರಿನಿಂದ ಮಾಸ್ತಿಯವರೂ, ಅಪಾರ ಬಂಧುಮಿತ್ರರು, ಶಿಷ್ಯರ ದಂಡಿನೊಡನೆ ಅಂತಿಮ ಯಾತ್ರೆ ನಡೆಯಿತು.

ಶ್ರದ್ಧಾಂಜಲಿ ಅರ್ಪಿಸುವ ಸಂದರ್ಭದಲ್ಲಿ "ವ್ಯತಿಷಜತಿ ಪದಾರ್ಥಾನ್ ಅಂತರಃ ಕೋಽಪಿ ಹೇತುಃ..." ಎಂಬ ಭವಭೂತಿಯ ಮಾತನ್ನು ಉದ್ಧರಿಸುತ್ತಾ ವೆಂಕಣ್ಣಯ್ಯನವರ ಹಾಗೂ ತಮ್ಮ ನಡುವಿನ ಪ್ರೀತಿ ಅಳತೆಗೆ ಸಿಗುವ ವಸ್ತುವಲ್ಲ ಎಂದು ಡಿವಿಜಿಯವರು ಉದ್ಗರಿಸಿದ್ದಾರೆ.

ಎ.ಆರ್. ಕೃಷ್ಣಶಾಸ್ತ್ರಿಗಳು "ನಮ್ಮೆಲ್ಲರಿಗೂ ಹಿರಿಯಣ್ಣನಾದ ವೆಂಕಣ್ಣಯ್ಯನ ಅಕಾಲ ಮೃತ್ಯುವನ್ನು ಕೇಳಿ ನಾವು ಶೋಕದಲ್ಲಿ ಮುಳುಗಿ ಹೋಗಿದ್ದೇವೆ" ಎಂದು ಕಂಬನಿ ಮಿಡಿದಿದ್ದಾರೆ.

ಕನ್ನಡ ಕಣ್ವ ಆಚಾರ್ಯ ಬಿ.ಎಂ.ಶ್ರೀ.ಯವರು "ನನಗಂತೂ ಅವರೊಂದು ಹೆಮ್ಮೆ, ಬೆಳಕು, ಕಾವಲು ಅವರು ಕಣ್ಮರೆಯಾದರೆಂದು ಕೇಳಿದ ಕಾರಿರುಳಿನಲ್ಲಿ ನನಗೆ ಒಂದು ಪ್ರಾಣ ಹಾರಿತು; ಒಂದು ಕೈ ಮುರಿಯಿತು. ನನ್ನಂತೆ ಒಳಗುದಿ ಕುದಿಯುತ್ತಿರುವ ಗೆಳೆಯರು ಹಲವರು. ನಾವೆಲ್ಲ ಈ ಹಡಗು ಮುಳುಗಿ ಬಡವರು" ಎಂದು ಶ್ರದ್ಧಾಂಜಲಿ ಅರ್ಪಿಸಿದರು.

"ವೆಂಕಣ್ಣಯ್ಯನವರು ನಿಧನರಾದ ಸಂದರ್ಭದಲ್ಲಿ ಕುವೆಂಪು ಅವರಿಗೆ ವಿಚಿತ್ರ ಅನುಭವವಾಯಿತಂತೆ! ರಾತ್ರಿಯ ವೇಳೆಯಲ್ಲಿ ಅವರು ಏನನ್ನೋ ಬರೆಯುತ್ತಿದ್ದಾಗ ಬಾಗಿಲು ಬಡಿದ ಶಬ್ದ, ಒಮ್ಮೆಯಲ್ಲ ಎರಡು ಬಾರಿ! ಬಾಗಿಲು ತೆರೆದು ನೋಡಿದರೆ ಯಾರೂ ಇಲ್ಲ! ಗಾಬರಿಯಾದರೂ ಒಳಗೆ ಬಂದು ಪ್ರಾರ್ಥನೆ ಮಾಡಿದರಂತೆ! ಶಾಮರಾಯರು ಕೆಲವು ದಿನಗಳ ಬಳಿಕ ಅವರನ್ನು ಭೇಟಿಯಾದಾಗ ತಮ್ಮ ಈ ಅನುಭವವನ್ನು ಹೇಳಿಕೊಂಡು "ವೆಂಕಣ್ಣಯ್ಯನವರ ಆತ್ಮವೇ ಅಂದು ನನ್ನಲ್ಲಿಗೆ ಬಂದು ಹೋಗಿರಬಹುದೆಂದು ಕಾಣಿಸುತ್ತದೆ" ಎಂದರಂತೆ ಕುವೆಂಪು!

"ಕನ್ನಡ ಎಲ್ಲರ ತಿರಸ್ಕಾರಕ್ಕೆ ಪಕ್ಕಾಗಿದ್ದ ಕಾಲದಲ್ಲಿ, ಕನ್ನಡಾಭಿಮಾನವೆಂಬ ಒಂದೇ ಧ್ಯೇಯದಿಂದ ಕೈಂಕರ್ಯವನ್ನು ಕೈಕೊಂಡ ಮಹನೀಯರಲ್ಲಿ ವೆಂಕಣ್ಣಯ್ಯನವರು ಪ್ರಮುಖರು." ಅಂತಹ ಮಹನೀಯರನ್ನು ಪಡೆದಿದ್ದ ಕನ್ನಡ ನಾಡು ಧನ್ಯ, ಕನ್ನಡಿಗರು ಧನ್ಯರು. ಅಂತಹವರು "ನಭೂತೋ ನ ಭವಿಷ್ಯತಿ."

---

* ದಿನಾಂಕ : ೨೮–೧೨–೨೦೧೨ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ನೀಡಿದ ಉಪನ್ಯಾಸ.

## ವೆಂಕಣ್ಣಯ್ಯನವರ ಜೀವನದ ಘಟ್ಟಗಳು

ಜನನ : ಅಕ್ಟೋಬರ್ ೧, ೧೮೮೫; ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ತಳಕು ಗ್ರಾಮ.

ವಿದ್ಯಾಭ್ಯಾಸ : ೧೮೯೭ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆ ತೇರ್ಗಡೆ – ಚಳ್ಳಕೆರೆ.
೧೮೯೯ ಇಂಗ್ಲಿಷ್ ಲೋಯರ್ ಸೆಕೆಂಡರಿ ಪರೀಕ್ಷೆ ತೇರ್ಗಡೆ – ಚಳ್ಳಕೆರೆ.
೧೯೦೨ ಪ್ರೌಢಶಾಲೆ, ಮೆಟ್ರಿಕ್ಯುಲೇಷನ್ ತೇರ್ಗಡೆ – ಚಿತ್ರದುರ್ಗ. ವಿವಾಹ– ಪತ್ನಿ ಭಾಗೀರಥಮ್ಮ.
೧೯೦೩ ಮೊದಲ ಎಫ್.ಎ. ತೇರ್ಗಡೆ.
೧೯೦೪ ಎರಡನೇ ಎಫ್.ಎ. ತೇರ್ಗಡೆ.
೧೯೦೮ ಬಿ.ಎ. ಪರೀಕ್ಷೆ ತೇರ್ಗಡೆ – ಮೈಸೂರು.
೧೯೦೯ ಎಫ್.ಎಲ್. (ಕಾನೂನು) ತೇರ್ಗಡೆ – ಮುಂಬಯಿ.
೧೯೧೦ ಬಿ.ಎಲ್. (ಅಸಂಪೂರ್ಣ) ಮುಂಬಯಿ.
೧೯೧೦–೧೨ ಎಂ.ಎ. ವಿದ್ಯಾಭ್ಯಾಸ (ಖಾಸಗಿಯಾಗಿ) – ಮೈಸೂರು.

ವೃತ್ತಿಜೀವನ : ೧೯೧೩–೧೫ ಧಾರವಾಡದ ಬಾಸೆಲ್ ಮಿಶನ್ ಹೈಸ್ಕೂಲಿನಲ್ಲಿ ಅಧ್ಯಾಪಕ.
೧೯೧೪ ಎಂ.ಎ. ಪದವೀಧರ.
೧೯೧೫ ಬೆಂಗಳೂರಿನ ಸೈಂಟ ಜೋಸೆಫ್ಸ್ ಹೈಸ್ಕೂಲಿನಲ್ಲಿ ಅಧ್ಯಾಪಕ.
೧೯೧೭ ದೊಡ್ಡಬಳ್ಳಾಪುರದ ಕನ್ನಡ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ, ಅನಂತರ ಬೆಂಗಳೂರು ಕೊಲೇಜಿಯೇಟ್ ಹೈಸ್ಕೂಲಿನಲ್ಲಿ ಇಂಗ್ಲಿಷ್ ಅಧ್ಯಾಪಕ.
೧೯೧೮ ಬೆಂಗಳೂರು, ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಟ್ಯೂಟರ್; ಪಿತೃವಿಯೋಗ.
೧೯೧೮–೨೩ ಸೆಂಟ್ರಲ್ ಕಾಲೇಜಿನಲ್ಲಿ ಟ್ಯೂಟರ್ ಮತ್ತು ಲೆಕ್ಚರರ್ ಆಗಿ ಸೇವೆ.
೧೯೨೩–೨೭ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಸೇವೆ.
೧೯೨೪ ಪತ್ನಿ ಭಾಗೀರಥಮ್ಮನವರ ನಿಧನ.
೧೯೨೭ ಎರಡನೆಯ ಮದುವೆ, ಪತ್ನಿ ರುಕ್ಮಿಣಮ್ಮ; ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರೊಫೆಸರ್ ಆಗಿ ನೇಮಕ.
೧೯೩೯ ೨೪–೨–೧೯೩೯ ರಂದು ಮೈಸೂರಿನಲ್ಲಿ ನಿಧನ.

## ವೆಂಕಣ್ಣಯ್ಯನವರ ಕೃತಿಗಳು

೧. ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ (ಎ.ಆರ್. ಕೃ ಅವರೊಡನೆ) – ಅನುವಾದ, ೧೯೧೯.
೨. ಶ್ರೀರಾಮಕೃಷ್ಣ ಪರಮಹಂಸರ ಲೀಲಾಪ್ರಸಂಗ (ಅನುವಾದ)
೩. ಪ್ರಾಚೀನ ಸಾಹಿತ್ಯ (ಅನುವಾದ), ೧೯೨೭.
೪. 'ಕನ್ನಡ ಭಾಷಾ ಚರಿತ್ರೆ' (ಬಿ.ಎಂ.ಶ್ರೀ. ಯವರೊಡನೆ), ೧೯೩೧.
೫. ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು (ಲೇಖನಗಳ ಸಂಗ್ರಹ), ೧೯೫೮.

**ಗ್ರಂಥ ಸಂಪಾದನೆ**

೧. ಹರಿಶ್ಚಂದ್ರ ಕಾವ್ಯ ಸಂಗ್ರಹ (ಎ.ಆರ್.ಕೃ. ಅವರೊಡನೆ), ೧೯೩೧.
೨. ಕರ್ಣಾಟಕ ಕಾದಂಬರೀ ಸಂಗ್ರಹ, ೧೯೩೩.
೩. ಬಸವರಾಜದೇವರ ರಗಳೆ, ೧೯೩೦.
೪. ಸಿದ್ಧರಾಮ ಚಾರಿತ್ರ (ಡಿ.ಎಲ್. ನರಸಿಂಹಾಚಾರ್ ಅವರೊಡನೆ) ೧೯೪೧.

## ಗ್ರಂಥ ಋಣ

೧. ಮುಲಕನಾಡು ಮಹನೀಯರು ಟಿ.ಎಸ್. ವೆಂಕಣ್ಣಯ್ಯ – ಟಿ.ಎಸ್. ವೆಂಕಣ್ಣಯ್ಯ (ಮೈಸೂರು ಮೂಲಕನಾಡು ಸಭಾ(ರಿ))
೨. ಸಿರಿಗನ್ನಡ ಸಾರಸ್ವತರು – ಪ್ರೊ. ಜಿ. ವೆಂಕಟಸುಬ್ಬಯ್ಯ (ವಸಂತ ಪ್ರಕಾಶನ)
೩. ಮಾರ್ಗದರ್ಶಕರು ಮತ್ತು ಮಹನೀಯರು – ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ
೪. ಮೂರು ತಲೆಮಾರು – ಪ್ರೊ. ತ.ಸು. ಶಾಮರಾವ್.
೫. ಸವಿನೆನಪು – ಪ್ರಧಾನ ಸಂಪಾದಕರು : ಕುವೆಂಪು.
೬. ಆನಂದವನ – ಪ್ರಧಾನ ಸಂಪಾದಕರು : ಚಿದಂಬರ ಮೂರ್ತಿ ಚಕ್ರವರ್ತಿ.

# ಹೊಸಗನ್ನಡಕ್ಕೆ ಹೊಸಕೆರೆ ಚಿದಂಬರಯ್ಯನವರ ಕೊಡುಗೆ

❖

ಪ್ರೊ. ಜಿ. ಅಶ್ವತ್ಥನಾರಾಯಣ*

## ಹೊಸಗನ್ನಡ ಗದ್ಯಶಿಲ್ಪಿ

ಕನ್ನಡ ಸಾಹಿತಿಗಳಲ್ಲಿ ಎರಡುಬಗೆಯ ಸಾಹಿತಿಗಳು ಕಂಡುಬರುತ್ತಾರೆ. ಏಕಮುಖ ಪ್ರತಿಭೆಯುಳ್ಳವರು ಮತ್ತು ಬಹುಮುಖ ಪ್ರತಿಭೆಯುಳ್ಳವರು. ಅನೇಕಮಂದಿ ಸಾಹಿತಿಗಳು ಏಕಮುಖ ಪ್ರತಿಭೆಯುಳ್ಳವರು; ಉದಾಹರಣೆಗೆ, ಎಸ್.ಎಲ್. ಭೈರಪ್ಪನವರು ಕಾದಂಬರಿಕಾರರಾಗಿ ಸಿದ್ಧಿಗಳಿಸಿದವರು. ನಾಡಿಗೇರ, ಬೀchi, ನಾ. ಕಸ್ತೂರಿ, ರಾಶಿ ಮೊದಲಾದವರು ಹಾಸ್ಯಸಾಹಿತ್ಯಕ್ಕೆ ಹೆಸರಾದವರು. ತ್ರಿವೇಣಿ ಕಾದಂಬರಿ ರಚನೆಯಲ್ಲಿ ಸಿದ್ಧಿಪಡೆದ ಲೇಖಕಿ. ಹೀಗೆ ಅನೇಕರು ನಾನಾ ಕ್ಷೇತ್ರಗಳಲ್ಲಿ ಕತೆ, ಕಾದಂಬರಿ, ನಾಟಕ, ಜೀವನಚರಿತ್ರೆ, ಪ್ರಬಂಧ ವಿಮರ್ಶೆ ಮೊದಲಾದ ಸಾಹಿತ್ಯಪ್ರಕಾರಗಳಲ್ಲಿ ಏಕಮುಖ ಕೊಡುಗೆ ಇತ್ತಿರುವವರು ಇದ್ದಾರೆ. ಹಾಗಂತ ಇವರುಗಳು ಬೇರೇನೂ ಬರೆದಿಲ್ಲ ಬೇರೆ ಕ್ಷೇತ್ರಗಳ ಪರಿಚಯವಿಲ್ಲದವರು ಎಂದೇನೂ ಅರ್ಥವಲ್ಲ, ಆದರೆ ಇತರ ರಂಗದಲ್ಲಿ ಅವರ ಕೊಡುಗೆ ವಿಶೇಷವಾಗಿ ಏನಿಲ್ಲ ವಿಶೇಷವಾಗಿ ರಾಶಿ ಪದ್ಯ ಬರೆದಿದ್ದರೂ ಅವರನ್ನು ಕವಿಗಳು ಎಂದು ಕರೆಯುವುದಿಲ್ಲ.

---

* # ೯೫. ೩೪ನೇ ಅಡ್ಡರಸ್ತೆ, ೧೬ನೇ ಮುಖ್ಯರಸ್ತೆ, ೪ನೇ ವಿಭಾಗ, ಜಯನಗರ, ಬೆಂಗಳೂರು – ೫೬೦ ೦೪೧. ದೂ. ೦೮೦–೨೬೬೩೭೭೮೩

ತ.ರಾ.ಸು. ಅವರು ನಾಟಕ, ಬರೆದಿದ್ದರೂ ಆ ಬಗ್ಗೆ ಪರಿಗಣನೆಯಿಲ್ಲ; ಅವರ ಕೊಡುಗೆ ಕಥೆ, ಕಾದಂಬರಿ ಕ್ಷೇತ್ರದಲ್ಲಿ ಮಾತ್ರ ಹೀಗೆ ಏಕಮುಖಿ ಪ್ರತಿಭಾ ಸಾಹಿತಿಗಳು ಕನ್ನಡಕ್ಕೆ ಕೊಡುಗೆ ನೀಡಿದ್ದರೂ ಅವರ ಕ್ಷೇತ್ರವ್ಯಾಪ್ತಿ ಸೀಮಿತವಾದುದು.

ಬಹುಮುಖಿ ಪ್ರತಿಭೆಯವರ ವಿಷಯವೇ ಬೇರೆ ಬಹುಮುಖಿ ಪ್ರತಿಭಾಸಾಹಿತಿಗಳು. 'ಸಕಲ ಕಲಾವಲ್ಲಭರಿದ್ದಂತೆ ಕ್ರಿಕೆಟ್ ಭಾಷೆಯಲ್ಲಿ ಹೇಳುವುದಾದರೆ ಆಲ್ ರೌಂಡರ್ ಅವರು ಕನ್ನಡದಲ್ಲಿ ಇಂಥ ಹತ್ತಾರು ಬಹುಮುಖಿಸಾಹಿತಿಗಳ ಕೊಡುಗೆ ಅಪಾರವಾಗಿದೆ. ಶಿವರಾಮಕಾರಂತ, ಡಿವಿಜಿ, ಮಾಸ್ತಿ, ಕುವೆಂಪು, ಬೇಂದ್ರೆ ಮುಂತಾದವರು ಈ ವರ್ಗಕ್ಕೆ ಸೇರಿದವರು. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಥೆ, ಕಾದಂಬರಿ, ನಾಟಕ, ಪ್ರಬಂಧ ವಿಮರ್ಶೆ ಪದ್ಯ, ಕಾವ್ಯ, ಜೀವನಚರಿತ್ರೆ ಮೊದಲಾದ ಸಾಹಿತ್ಯಪ್ರಕಾರದ ಕೃತಿಗಳನ್ನು ರಚಿಸಿದ್ದಾರೆ. ಈ ಪ್ರತಿಭಾವಂತರ ಸಾಲಿಗೆ ಸೇರುವವರು ಹೊಸಕೆರೆ ಚಿದಂಬರಯ್ಯ ನವರು, ಹೊಸಗನ್ನಡ ಗದ್ಯಶಿಲ್ಪಿ, ಕೀರ್ತನಸಾಹಿತಿ, ಗೀತಾವಿದ್ವಾಂಸ, ಆದರ್ಶಶಿಕ್ಷಕ ಅದ್ವೈತಪ್ರತಿಪಾದಕ, ನಾಟಕಕಾರ, ಕಾದಂಬರಿಕಾರ, ಅನುವಾದಕ, ಕವಿ, ವೇದಾಂತಿ ಕರ್ನಾಟಕ ಕವಿರತ್ನ ಬಿರುದಾಂಕಿತ ಹೊಸಕೆರೆ ಚಿದಂಬರಯ್ಯನವರು ಕನ್ನಡ ಸಾಹಿತ್ಯ ಚರಿತ್ರೆಕಾರರು ಕಡೆಗಣಿಸಿದ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ ಎಂಬುದು ಸತ್ಯದ ಸಂಗತಿ.

ಕೆಲವರು ಹೊಸಕೆರೆ ಚಿದಂಬರಯ್ಯನವರ ಬಹುಮುಖಿ ಪ್ರತಿಭೆಯನ್ನು ಅವರ ಕನ್ನಡ ಕೊಡುಗೆಯನ್ನು ಗುರುತಿಸಿದವರಿದ್ದಾರೆ. ಕನ್ನಡದಲ್ಲಿ ಅಧ್ಯಾತ್ಮಿಕ ಸಾಹಿತ್ಯಗ್ರಂಥಗಳನ್ನು ಹೆಚ್ಚಾಗಿ ಬರೆದಿರುವವರಲ್ಲಿ ಮೊದಲನೆಯವರು, ಎಂದು ಇಂಗ್ಲಿಷ್–ಕನ್ನಡ ನಿಘಂಟು ಮೂಲಕ ಕನ್ನಡ ನಾಡಿನಲ್ಲಿ ದ.ಕೃ. ಭಾರದ್ವಾಜರು ಹೇಳಿದ್ದಾರೆ.

ಶಿವರಾಮಕಾರಂತರು ಅವರಿಂದ ಪ್ರಭಾವಿತರಾಗಿದ್ದರು ಅದಕ್ಕೆ ಅವರ ಈ ಮಾತುಗಳೇ ನಿದರ್ಶನವಾಗಿದೆ:

"೧೯೪೪ರಲ್ಲಿ ಸ್ವದೇಶಾಭಿಮಾನಿಯಲ್ಲಿ ಪ್ರಕಟಿತವಾದ ನನ್ನ ಕೆಲವು ಲಘು ಬರಹಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದೇನೆ. ಅದರಲ್ಲಿ ಒಂದು ಸಂಗ್ರಹದ ಹೆಸರು. "ದೇಪಜ್ಯೋತಿಗಳು ಮತ್ತು ಪ್ರಾಣಿಪ್ರಬಂಧಗಳು" ಎಂದು ಅದಕ್ಕಿಂತ ಹಿಂದಣ ದಶಕದಲ್ಲಿ ಹೊಸಕೆರೆ ಚಿದಂಬರಯ್ಯನವರು "ಭರತಖಂಡದ ಜೀವಜ್ಯೋತಿಗಳು" ಎಂಬ ಒಂದು ಗ್ರಂಥದಲ್ಲಿ ಪ್ರಸಿದ್ಧ ವ್ಯಕ್ತಿಗಳ ಜೀವನ ಚಿತ್ರಗಳನ್ನು ಪ್ರಕಟಿಸಿದ್ದರು. ಅವರ ಪುಸ್ತಕದ ಆಖ್ಯೆ, ನನಗೆ ಪ್ರೇರಣೆಯನ್ನು ಕೊಟ್ಟಿತು. (ಸ್ಮೃತಿಪಟಲ, ಭಾಗ –೨ರಲ್ಲಿ ಪುಟ–೨೮)

ಹಾ.ಮಾ. ನಾಯಕರು ಹೇಳಿದ ಮಾತು "ನಮ್ಮ ತಂದೆ ತಮ್ಮ ಮಧ್ಯವಯಸ್ಸಿನಲ್ಲಿ ಅವರು ದಿನವೂ ಸಂಜೆ ಭಗವದ್ಗೀತೆಯನ್ನು ಓದುತ್ತಿದ್ದರು. ಅದರಿಂದ ಮನಸ್ಸಿಗೆ ಶಾಂತಿ ಲಭಿಸುತ್ತದೆ ಎಂದು ಹೇಳುತ್ತಿದ್ದರು. ಅವರು ಬಳಸುತ್ತಿದ್ದ ಪ್ರತಿಯನ್ನು ಹೊಸಕೆರೆ ಚಿದಂಬರಯ್ಯನವರ ಅನುವಾದದೊಡನೆ ಈಗಲೂ ನಾನು ಬಳಸುತ್ತೇನೆ." (ಅಂಕಣ ಬರಹ)

"ಅಭಿನವ ಶಂಕರ"ರೆಂದು ಪ್ರಖ್ಯಾತರಾಗಿ ಕನ್ನಡಕ್ಕೆ ಶಂಕರಾಚಾರ್ಯರ ಸಮಗ್ರ ಕೃತಿಗಳನ್ನು ವಿದ್ವತ್ಪೂರ್ಣವಾಗಿ ಕನ್ನಡಕ್ಕೆ ಅನುವಾದಿಸಿಕೊಟ್ಟ ವೇದಾಂತಿ, ಸಾಹಿತಿ, ಅದ್ವೈತ

ವಿದ್ವಾಂಸರಾದ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು ಹೊಸಕೆರೆ ಚಿದಂಬರಯ್ಯನವರೊಡನೆ ಹತ್ತಾರುವರ್ಷ ಒಟ್ಟಿಗೆ ಇದ್ದರು ಒಟ್ಟಾಗಿ ಶಾಸ್ತ್ರಾಭ್ಯಾಸ ಮಾಡಿದವರು ಜತೆ ಶಿಕ್ಷಕರಾಗಿದ್ದವರು, ಹೇಳಿರುವ ಮಾತಿದು:

"ನನ್ನನ್ನು ವಿದ್ಯಾಭ್ಯಾಸದ ಇಲಾಖೆಗೆ ಸೇರಿಸಿ ಆಗಾಗ್ಗೆ ಉಪಯುಕ್ತವಾದ ಸಲಹೆಗಳನ್ನು ನಡೆನುಡಿಗಳಿಂದ ಕೊಡುತ್ತ ಏಕದೇಹನ್ಯಾಯದಿಂದ ದೀರ್ಘಕಾಲದವರೆಗೆ ಇದ್ದುಕೊಂಡು ನನ್ನ ಬಾಳಿಗೆ ಸುಖದ ಹೊಯ್ನೀರನ್ನು ಎರೆಯುತ್ತಿದ್ದರು" ಎಂದಿದ್ದಾರೆ.

೪ ಕಾದಂಬರಿಗಳನ್ನು ೮ ನಾಟಕಗಳನ್ನು ೫ ನೀತಿಗ್ರಂಥಗಳನ್ನು ೧೫ ಧಾರ್ಮಿಕ ಗದ್ಯ ಗ್ರಂಥಗಳನ್ನು ೭ ಶಿಕ್ಷಣ ಗ್ರಂಥಗಳನ್ನು ೬ ಗೀತಾ ಗ್ರಂಥಗಳನ್ನು ೭ ಜೀವನ ಚರಿತ್ರೆಗಳನ್ನು ೩ ಕಾವ್ಯಗಳನ್ನು ೧೧ ಸ್ತೋತ್ರ ಸಾಹಿತ್ಯವನ್ನು ೫ ಕೀರ್ತನ ಗ್ರಂಥಗಳನ್ನು ನೂರಾರು ಲೇಖನಗಳನ್ನು ಬರೆದಿರುವ ಹೊಸಕೆರೆ ಚಿದಂಬರಯ್ಯನವರು ಸ್ವಾತಂತ್ರ್ಯ ಪೂರ್ವದಲ್ಲಿ ೧೯೪೯ರಿಂದ ೧೯೩೮ರ ವರೆಗೆ ಸುಮಾರು ೪ ದಶಕಗಳ ಕಾಲ ೮೦ಕ್ಕೂ ಹೆಚ್ಚು ಗ್ರಂಥಗಳನ್ನು ಬರೆದು ಕನ್ನಡ ಸೇವೆ ಮಾಡಿದ್ದಾರೆ. ಇವರು ಬರೆದ ಕೃತಿಗಳಲ್ಲಿ ಸಾಮಾನ್ಯ ಕೃತಿಗಳೂ ಇವೆ. ವಿಶಿಷ್ಟ ಕೃತಿಗಳೂ ಇವೆ. ಈ ಉಪನ್ಯಾಸದಲ್ಲಿ ಕನ್ನಡಕ್ಕೆ ಅವರು ಕೊಟ್ಟ ವಿಶೇಷ ಕೊಡುಗೆಗಳು ಇನ್ನಾರು ಕೊಟ್ಟಿಲ್ಲ ಎನಿಸುವಂಥ ಕೆಲವು ಕೃತಿಗಳನ್ನು ಪ್ರಸ್ತಾಪ ಮಾಡಲಾಗಿದೆ. ಅವುಗಳಲ್ಲಿ ಕೀರ್ತನ ಕಂಠಾಭರಣ; ಭರತಖಂಡದ ಜೀವಜ್ಯೋತಿಗಳು. ಆರ್ಯಧರ್ಮ ಪ್ರದೀಪ, ಭಕ್ತಿಗೀತಾವಳಿ, ಕೃಷ್ಣಮಹೇಶ್ವರಿ. ಅನುಭವಾಮೃತ. ಶ್ರೀ ವಿದ್ಯಾರಣ್ಯ ಕಾವ್ಯಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಲಾಗಿದೆ.

ಹೊಸಕೆರೆ ಚಿದಂಬರಯ್ಯನವರ ಕೃತಿಗಳನ್ನು ಕುರಿತು ಹೇಳುವ ಮುಂಚೆ ಅವರ ವ್ಯಕ್ತಿತ್ವ ಜೀವನ ಕುರಿತು ಕೆಲವು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ.

**ಆದರ್ಶಶಿಕ್ಷಕ**

ಹೊಸಕೆರೆ ಚಿದಂಬರಯ್ಯನವರು ೧೮೭೦ನೇ ಇಸವಿ ಡಿಸೆಂಬರ್ ೨೮ರಂದು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹೊಸಕೆರೆಯ ಶ್ರೀ ಶೇಷಗಿರಿಯಪ್ಪ ಪುಟ್ಟನರಸಮ್ಮ ದಂಪತಿಗಳಿಗೆ ಚಿತ್ರದುರ್ಗದ ಹಿರಿಯೂರಿನಲ್ಲಿ ತಾಯಿಯ ತವರಿನಲ್ಲಿ ಹಿರಿಯ ಮಗನಾಗಿ ಜನಿಸಿದರು. ಬಾಲ್ಯದ ವಿದ್ಯಾಭ್ಯಾಸ ತುಮಕೂರು, ಬೆಂಗಳೂರಿನಲ್ಲಿ ಆಯಿತು. ಮೈಸೂರು ಅಪ್ಪರ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಬೆಂಗಳೂರಿನಲ್ಲಿ ಸರ್ಕಾರಿ ಶಾಲೆಯ ಅಧ್ಯಾಪಕರಾಗಿ ಕೆಲಸಕ್ಕೆ ಸೇರಿದರು. ಕಡೂರು, ದಾವಣಗೆರೆ ಸರ್ಕಾರಿ ಶಾಲೆಗಳಲ್ಲಿ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿ, ಸ್ವಯಂ ನಿವೃತ್ತಿ ಹೊಂದಿದರು.

ಅನಂತರ ರಾಷ್ಟ್ರೀಯ ಚಳವಳಿ ಅಂಗವಾಗಿ ಬೆಂಗಳೂರು ನ್ಯಾಷನಲ್ ಸ್ಕೂಲನ್ನು ಒಳಗೊಂಡು ಕರ್ನಾಟಕದ ನಾನಾಭಾಗಗಳಲ್ಲಿ ದೇಶೀಯ ವಿದ್ಯಾಶಾಲೆಗಳು (ಬೆಂಗಳೂರು, ಧಾರವಾಡ, ಶಿವಮೊಗ್ಗ ಮೊದಲಾದ ಕಡೆ ಪ್ರಾರಂಭವಾದವು. ಹಾಗೆ ಧಾರವಾಡದಲ್ಲಿ ಆಲೂರು ವೆಂಕಟರಾಯರು ಇತರರು ಸೇರಿ ಪ್ರಾರಂಭಿಸಿದ ದೇಶೀಯ ವಿದ್ಯಾಶಾಲೆಯಲ್ಲಿ

ಗೌರವ ಅಧ್ಯಾಪಕರಾಗಿ ಹಲವು ವರ್ಷ ಸೇವೆ ಸಲ್ಲಿಸಿದರು. ಮೊದಲಿನಿಂದಲೂ ದೇಶಾಭಿಮಾನಿ ಆದವರು, ಹೊಸಕೆರೆ ಚಿದಂಬರಯ್ಯನವರು. ಅವರು ಬರೆದ ದೇಶ ಪ್ರೇಮದ ನಾಟಕ ಬ್ರಿಟಿಷರಿಂದ ಬಹಿಷ್ಕಾರಗೊಂಡಿತ್ತು. ೧೯೧೭ಕ್ಕೆ ಮುಂಚೆ ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡ ಇರುವ ಜಾಗ ಗಾಂಧೀಮೈದಾನ'ವೆಂದು ಹೆಸರಾಗಿತ್ತು ಭಾರತ ಸ್ವಾತಂತ್ರ್ಯ ಹೋರಾಟಗಾರರು, ಕರ್ನಾಟಕ ಏಕೀಕರಣ ಹೋರಾಟಗಾರರು ದೇಶಾಭಿಮಾನದ ಭಾಷಣಗಳ ವೇದಿಕೆ ಆಗಿತ್ತು. ಅಲ್ಲಿ ನಡೆಯುವ ಕಾರ್ಯಕ್ರಮಗಳಿಗೆ ಸರ್ಕಾರಿ ಅಧಿಕಾರಿಗಳು ಬರುತ್ತಿರಲಿಲ್ಲ. ಏಕೆಂದರೆ ಬ್ರಿಟಿಷರು ಅವರೆಲ್ಲ ತಮ್ಮ ವಿರುದ್ಧದ ದೇಶಾಭಿಮಾನಿಗಳೆಂದು ತಿಳಿದು ಕ್ರಮಕೈಕೊಳ್ಳುತ್ತಿದ್ದರು. ಆದರೆ ಅವರ ಬೆದರಿಕೆಯನ್ನು ಲೆಕ್ಕಿಸದೆ ಅನೇಕರು ಬರುತ್ತಿದ್ದರು. ಹೊಸಕೆರೆ ಚಿದಂಬರಯ್ಯನವರು, ಅ.ನ.ಕೃಷ್ಣರಾಯರು ವೈ. ಸುಬ್ಬರಾವ್ ಮೊದಲಾದವರು ಇರುತ್ತಿದ್ದರು.

"ಪಂಡಿತ ತಾರಾನಾಥರು ಗೀತೆಯ ಮೇಲೆ ಹತ್ತು ಭಾಷಣಗಳನ್ನು ಗಾಂಧೀ ಮೈದಾನದಲ್ಲಿ ಮಾಡಿದಾಗ, ಹೊಸಕೆರೆ ಚಿದಂಬರಯ್ಯ, ವೈ. ಸುಬ್ಬರಾಯರು, ಕೆ.ವಿ. ಕೃಷ್ಣಸ್ವಾಮಿ ಅಯ್ಯರ್ ಬರುತ್ತಿದ್ದರು. ಮೂವರೂ ಘನವಿದ್ವಾಂಸರು, ದಾರ್ಶನಿಕರು ಎಂದು ಅನಕೃ ತಮ್ಮ, ಬರಹಗಾರನ ಬದುಕು, ಎಂಬ ಆತ್ಮಕಥೆಯಲ್ಲಿ ಹೇಳಿದ್ದಾರೆ.

ದೇಶೀಯ ವಿದ್ಯಾಶಾಲೆಯಲ್ಲಿ ಅಧ್ಯಾಪಕರಾಗಿದ್ದ ಕಾಲದಲ್ಲೇ ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಮಿತಿಯವರು **ಆರ್ಯಧರ್ಮ ಪ್ರದೀಪ ಪರಿಚಯ**ವೆಂಬ ಬೃಹತ್ ಗ್ರಂಥವನ್ನು ವಿದ್ಯಾರ್ಥಿಗಳಿಗೆ ಭಾರತೀಯ ಸಂಸ್ಕೃತಿ ಪರಿಚಯ ಮಾಡಿಸಿಕೊಡುವ ದೇಶಾಭಿಮಾನ ಉಕ್ಕಿಸುವ ಪಠ್ಯವನ್ನು ಹೊಸಕೆರೆ ಚಿದಂಬರಯ್ಯನವರ ಕೈಯಲ್ಲಿ ಬರೆಸಿದರು. ಈ ಗ್ರಂಥ ಕುಳಿತು ಬರೆದುದ್ದಲ್ಲ, ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಾ ಹೇಳುತ್ತಾ ಬರೆದ ಗ್ರಂಥ.

ಈ ಗ್ರಂಥದ ಪ್ರಕಾಶಕರು ಹೇಳಿದ ಮಾತು, ಗಮನಾರ್ಹವಾಗಿದೆ. "ಸ್ವಧರ್ಮ ಸ್ವಸಂಸ್ಕೃತಿಗಳಿಗನುಗುಣವಾದ ಪಠ್ಯ ಒದಗಿಸುವುದು. ನೈತಿಕ ಶಿಕ್ಷಣವನ್ನೂ ಧಾರ್ಮಿಕ ಶಿಕ್ಷಣವನ್ನು ಕೊಟ್ಟು ಭಾವನಾತ್ಮಕವಾದ ಅಂತಃಕರಣವನ್ನು ವಿಕಾಸಗೊಳಿಸುವುದು. ಇದು ಬಿಟ್ಟು ಇಂಗ್ಲಿಷ್ ಭಾಷೆಗೆ ಕೊಡತಕ್ಕ ಬೆಲೆಯನ್ನು ಕೊಟ್ಟು ವ್ಯವಹಾರದ ಮಟ್ಟಿಗೆ ಬೇಕಾಗುವಷ್ಟು ನಿಸ್ಸಂಶಯವಾಗಿ ಕಲಿಸಬಹುದು. ಆದರೆ ಇಂಗ್ಲಿಷನ್ನು ಅಟ್ಟಕ್ಕೇರಿಸಿ ಮಾತ್ರ ಕುಳ್ಳಿರಿಸಬಾರದು. ಇಲ್ಲಸಲ್ಲದ ಪ್ರಾಶಸ್ತ್ಯವನ್ನು ಕೊಟ್ಟು ಅದರ ದ್ವಾರದಿಂದಲೇ ಎಲ್ಲ ಶಿಕ್ಷಣವನ್ನು ಒದಗಿಸಿ ನಮ್ಮ ಸಂಸಾರವನ್ನೆಲ್ಲ ಇಂಗ್ಲಿಷ್‌ಮಯವಾಗಿ ಮಾಡುವುದು ಸರ್ವಥಾ ಯೋಗ್ಯವಲ್ಲ. ಮಾತೃಭಾಷೆಯಾದ ಕನ್ನಡದ ದ್ವಾರದಿಂದಲೇ ಎಲ್ಲ ಶಿಕ್ಷಣ ಕೊಡುವುದೂ, ಅದಕ್ಕೂ ದೇವಭಾಷೆಯಾದ ಸಂಸ್ಕೃತಕ್ಕೂ ರಾಷ್ಟ್ರಭಾಷೆಯಾದ ಹಿಂದಿಯ ಮಹತ್ವದ ಸ್ಥಾನವನ್ನು ಕೊಡುವುದು ಯೋಗ್ಯವೇ ಸರಿ" (ಆರ್ಯಧರ್ಮ ಪ್ರದೀಪ ಪ್ರಕಾಶಕರ ಬಿನ್ನಹ) ಈ ಹಿನ್ನೆಲೆಯಲ್ಲಿ ದೇಶಾಭಿಮಾನಿ ವಿದ್ವಾಂಸರಾದ ಚಿದಂಬರಯ್ಯನವರು ಅನೇಕ ಗ್ರಂಥಗಳನ್ನು ಶಿಕ್ಷಕರಾಗಿದ್ದಾಗ ರಚಿಸಿದವರು.

ಹೊಸಕೆರೆ ಚಿದಂಬರಯ್ಯನವರು ಆದರ್ಶ ಶಿಕ್ಷಕರಾಗಿದ್ದರು. ಕೇವಲ ಶಾಲೆಯಲ್ಲಿ ಪಾಠ ಹೇಳು ಮನೆಕಡೆ ಓಟ ಕೀಳು ಮೇಷ್ಟ್ರರಾಗಿರಲಿಲ್ಲ. ಶಾಲಾಕರ್ತವ್ಯಗಳ ಜತೆಗೆ

ಉಪಾಧ್ಯಾಯರ ಸಂಘ ಕಟ್ಟಿದ್ದರು. ಪಾಠ ಹೇಳುವವ ಕ್ರಮದ ಬಗ್ಗೆ ಉಪನ್ಯಾಸ ವ್ಯವಸ್ಥೆ ಮಾಡಿದರು ಶಿಕ್ಷಣಕ್ಕೆ ಸಂಬಂಧಿಸಿದಂತೆ "ಗಣಿತಾಬ್ಜಭಾಸ್ಕರ, ಚರಿತ್ರ ಚಿಂತಾಮಣಿ ಉಪಾಧ್ಯಾಯರ ಯೋಗ್ಯತೆಗಳು, ಮನಶ್ಶಿಕ್ಷಣ, ಬೋಧನಾಕ್ರಮ ವಸ್ತು ಪ್ರದರ್ಶನ ಇತ್ಯಾದಿ ಏಳು ಶಿಕ್ಷಣ ಗ್ರಂಥಗಳನ್ನು ಬರೆದಿದ್ದಾರೆ, ಪ್ರಕಟಿಸಿದ್ದಾರೆ.

ಸು. ೧೯೦೮ರಲ್ಲಿ ಕಡೂರಿನ ಶಾಲೆಯಲ್ಲಿದ್ದಾಗ ಅಲ್ಲಿ ವಿದ್ಯಾಭ್ಯಾಸದ ವಸ್ತು ಪ್ರದರ್ಶನವೊಂದನ್ನು ಏರ್ಪಡಿಸಿದ್ದರು. ಅದನ್ನು ನೋಡಲು ಶಿಕ್ಷಣಾಧಿಕಾರಿಗಳು ಇಡೀ ಜಿಲ್ಲೆಯ ಶಾಲೆಗಳಿಗೆ ರಜೆ ಘೋಷಿಸಿ ಆ ವಸ್ತು ಪ್ರದರ್ಶನ ನೋಡಲು ರಜೆ ಘೋಷಿಸಿದ್ದರು. ಅಷ್ಟೊಂದು ಉಪಯುಕ್ತ ವಸ್ತುಪ್ರದರ್ಶನವನ್ನು ವಿದ್ಯಾರ್ಥಿಗಳಿಂದ ಏರ್ಪಡಿಸಿದ್ದರು.

ಹೊಸಕೆರೆ ಚಿದಂಬರಯ್ಯನವರು ಎಂಥಾ ಶಿಕ್ಷಣತಜ್ಞರಾಗಿದ್ದರು ಎಂದರೆ ಅವರಿಗೆ ಟೀಚರ್ಸ್ ಟ್ರೈನಿಂಗ್ ಆಗಿರಲಿಲ್ಲ. ೧೯೦೬ರಲ್ಲಿ ಅವರ ಪತ್ನಿ ನಿಧನರಾದಾಗ (ಕಡೂರಿನಲ್ಲಿ ಶಿಕ್ಷಕರಾಗಿದ್ದರು) ಅಲ್ಲಿರಲು ಇಷ್ಟಪಡದೆ ವರ್ಗಾವಣೆ ಕೇಳಿದರು. ಆಗ ಅವರನ್ನು ಟ್ರೈನಿಂಗ್ ಕಾಲೇಜಿನ ತರಬೇತಿಗೆ ಕಳಿಸಿದರು. ಅಲ್ಲಿಗೆ ಹೋಗಿ "ನಾ ಟ್ರೈನಿಂಗ್ ಕಾಲೇಜಿಗೆ ವಿದ್ಯಾರ್ಥಿಯಾಗಿ ಬರೆದಿದ್ದೇನೆ" ಎಂದಾಗ ಅಲ್ಲಿದ್ದ ಮುಖ್ಯೋಪಾಧ್ಯಾಯ ಅವರು ಕಡೂರಿನ ಶಾಲೆಯಿಂದ ಬಂದಿದ್ದಾರೆ ಎಂದು ತಿಳಿದು "ನಿಮಗೆ ಹೊಸಕೆರೆ ಚಿದಂಬರಯ್ಯನವರು ಗೊತ್ತೇ ಅವರು ನಮ್ಮೆಲ್ಲರ ಆದರ್ಶ ಅಧ್ಯಾಪಕರು ಎಂದಾಗ" ನಾನೇ ಹೊಸೆಕರೆ ಚಿದಂಬರಯ್ಯ" ಅಂದಾಗ, "ನಿಮಗೆ ನಾವಲ್ಲ ತರಬೇತಿ ನೀಡುವುದು ನೀವೇ ನಮಗೆ ತರಬೇತಿ ನೀಡಬೇಕು" ಎಂದು ಹೇಳಿ ಸರ್ಕಾರಕ್ಕೆ ಅವರ ಬಗ್ಗೆ ಪ್ರಶಂಸೆ ಮಾಡಿ ಬರೆದಾಗ ಸರ್ಕಾರದವರು ಅವರಿಗೆ ಬಡ್ತಿ ನೀಡಿ ದಾವಣಗೆರೆ ವಿದ್ಯೆ ಶಾಲೆಗೆ ಹೆಡ್ಮಾಸ್ಟರಾಗಿ ವರ್ಗಾಯಿಸಿದರು.

**ಕರ್ನಾಟಕ ಕವಿರತ್ನ ಬಿರುದು ಗಳಿಸಿ**

ಕಾಲಟಿಯಲ್ಲಿ ೧೯೧೦ರಲ್ಲಿ ಶಂಕರಾಚಾರ್ಯರ ಪ್ರತಿಮೆ ಸ್ಥಾಪನೆ ಮಾಡುವ ಸಂದರ್ಭದಲ್ಲಿ ಶ್ರೀ ಸಚ್ಚಿದಾನಂದ ಶಿವಾಭಿನವನರಸಿಂಹ ಭಾರತೀಸ್ವಾಮಿಗಳು ಇದ್ದಾಗ ಅವರಿಂದ ಭಾಷ್ಯಶಾಂತಿಯನ್ನು ಚಿದಂಬರಯ್ಯನವರು ಮತ್ತು ಸುಬ್ಬರಾಯರು ಒಟ್ಟಿಗೆ ಪಡೆದರು. ಅನಂತರ ಮಹಾಭಾಗವತರು ಜಗದ್ಗುರುಗಳ ಅನುಮತಿ ಪಡೆದು ಅನಂತರ ಕುರ್ತಕೋಟಿಯಲ್ಲಿ ಪಂಡಿತರ ಸಭೆ ನಡೆಸಿದಾಗ ಉಪನಿಷತ್ ಪಾಠ ಮಾಡಿದ ವಿರೂಪಾಕ್ಷ ಶಾಸ್ತ್ರಿಗಳು, ದೊಡ್ಡಬೆಲೆ ನಾರಾಯಣಶಾಸ್ತ್ರಿ, ಜೆಟಗೇರಿಕೃಷ್ಣಶಾಸ್ತ್ರಿ ಮೊದಲಾದ ವಿದ್ವಾಂಸರ ಸಭೆಯಲ್ಲಿ ಚಿದಂಬರಯ್ಯನವರಿಗೆ "ಕರ್ನಾಟಕ ಕವಿರತ್ನ" ಎಂಬ ಬಿರುದನ್ನು ನೀಡಿದರು.

ಚಿದಂಬರಯ್ಯನವರಿಗೆ ಈ ಪ್ರಶಸ್ತಿ ಬಂದಾಗ, ಹೊಸಕೆರೆ ಚಿದಂಬರಯ್ಯನವರು ಕಾವ್ಯ ಯಾವುದನ್ನೂ ಬರೆಯದಿರುವಾಗ ಬೇರೆ ಬೇರೆ ಗದ್ಯ, ನಾಟಕ ಪ್ರಬಂಧ ಜೀವನಚರಿತ್ರ ಇತ್ಯಾದಿ ಬರೆದವರಿಗೆ ಇಂಥ ಬಿರುದು ಕೊಡಬಹುದೇ ಇವರಲ್ಲಿ ನಿಜಕ್ಕೂ ಪಾಂಡಿತ್ಯವಿದೆಯೇ ಎಂಬ ಸಂದೇಹವನ್ನು ಹಲವರು ವ್ಯಕ್ತಪಡಿಸಿರಬೇಕು. ಈಗ ಅವರಿಗೆ

ಉತ್ತರವಾಗಿ ಹಳಗನ್ನಡದಲ್ಲಿ "ವಿದ್ಯಾರಣ್ಯ ಕಾವ್ಯಂ" ಎಂಬ ಚಂಪೂ ಕೃತಿಯನ್ನು ಬರೆದಂತೆ ತೋರುತ್ತದೆ. ಇದಕ್ಕೆ ನಿದರ್ಶನವಾಗಿ ಈ ಕಾವ್ಯದ ಈ ಗದ್ಯ ಗಮನಿಸಬಹುದು.

**ಕವಿರತ್ನಾಖ್ಯೆಯನಿತ್ತರಾಗ ಕೆಲಬರ್ ವಿದ್ವಾಂಸರೊಂದಾಗಿ ಸ**

**ತ್ಕವಿತಾ ಪ್ರೌಢಿಮೆ ದೋರ್ಪ್ಪಮುನ್ನಮದಸಾಗಳ್ತಾಳಲಾಂ ನಾಣ್ಚಿದೆಂ**

**ಕವಿತಾರತ್ನಮಿದೀಗಳೆಂದಿಸಿಕೊಳವೇ ಗ್ರಂಥವೇ ಮುಂದಿರಲ್**

**ಕವಿರತ್ನಾಖ್ಯೆಯದೇವತೆಂದವನು ಪೇಕ್ಷಾದೃಷ್ಟಿಗೀಡಾಗಿಪಂ** (ವಿದ್ಯಾರಣ್ಯ ಕಾವ್ಯ ಪು-೮)

೨೬ಕ್ಕೂ ಮಿಕ್ಕ ಬಗೆ ಬಗೆ ಛಂದಸ್ಸುಗಳಲ್ಲಿ ರಚಿತವಾದ ಈ ಕಾವ್ಯ ಚಿದಂಬರಯ್ಯನವರ ಕವಿತಾ ಪಾಂಡಿತ್ಯಕ್ಕೆ ಶ್ರೇಷ್ಠ ನಿದರ್ಶನವಾಗಿದೆ.

ದಾವಣಗೆರೆಯಲ್ಲಿದ್ದಾಗ ಕುರ್ತುಕೋಟಿ ಭಾಗವತರ ಪರಿಚಯವಾಗಿ ಅವರಿಂದ ಪ್ರಭಾವಿತರಾಗಿ ಅವರ ಗುರುಗಳಾದ ಗೋಂದಾವಳಿ ಬ್ರಹ್ಮಚೈತನ್ಯ ಮಹಾರಾಜರ ಶಿಷ್ಯರಾದರು. ಶಿಕ್ಷಣವೃತ್ತಿಗೆ ರಾಜೀನಾಮೆ ಇತ್ತರು. ಗೋಂದಾವಳಿ ಮಹಾರಾಜರ ಸನ್ನಿಧಿಯಲ್ಲಿ ೫ ವರ್ಷಗಳ ಕಾಲ ಶಿಷ್ಯವೃತ್ತಿ ಮಾಡಿದರು. ಅನಂತರ ಕುರ್ತುಕೋಟಿ ಭಾಗವತರ ಬಳಿ ಇದ್ದ ಅವರು ನಾಸಿಕ್‌ನಲ್ಲಿ ಭಾಗವತರು ಸ್ವಾಮಿಗಳಾದಾಗ ಚಿದಂಬರಯ್ಯನವರು ಬೆಂಗಳೂರಿಗೆ ಬಂದು ನೆಲೆಸಿದರು. ಶಂಕರಮಠದಲ್ಲಿ ಮಗ, ವಿದ್ವಾಂಸ ಅನಂತಮೂರ್ತಿಶಾಸ್ತ್ರಿಗಳ ಜತೆಯಲ್ಲಿದ್ದರು ಗ್ರಂಥರಚನೆ, ಪ್ರವಚನಗಳಲ್ಲಿ ವಿದ್ವಾಂಸರ ನಡುವೆ ಕಾಲ ಕಳೆಯುತ್ತಿದ್ದರು. ಗಳಗನಾಥರು ಬೆಂಗಳೂರಿಗೆ ಬಂದಾಗ ಇವರ ಬಳಿ ಬಂದು ಬೆಂಗಳೂರಿನಲ್ಲಿ ಇರುವ ವಿದ್ವಾಂಸರನ್ನು ಸಾಹಿತಿಗಳನ್ನು ಪರಿಚಯ ಮಾಡಿಕೊಡಿ ಎಂದು ಕೇಳಿದರು ಅಷ್ಟರಮಟ್ಟಿಗೆ ಚಿದಂಬರಯ್ಯನವರು ಸಾಹಿತಿಗಳ ವಿದ್ವಾಂಸರ ವಲಯದಲ್ಲಿ ಪ್ರಸಿದ್ಧರಾಗಿದ್ದರು.

ಭಕ್ತಬಂಧು, ಸ್ವಧರ್ಮ ಪರಮಾರ್ಥ ಪತ್ರಿಕೆಗಳ ಸಂಪಾದಕರಾಗಿ ಕೆಲಸ ಮಾಡಿದರು. ಬೆಂಗಳೂರಿನಲ್ಲಿ ದೇಶಪ್ರೇಮಿ ಜಯರಾಮಚಾರ್ಯರು ಎಂಬ ಕೀರ್ತನಕಾರರು ದೇಶೀಯ ಭಾವನೆಗಳನ್ನು ಕರ್ನಾಟಕ ಏಕೀಕರಣದ ಹಿನ್ನೆಲೆಯಲ್ಲಿ ಹರಿಕಥೆ ಮಾಡುತ್ತಿದ್ದರು. ಅವರು ಬೆಂಗಳೂರಿನಲ್ಲಿ ಕೀರ್ತನೆಕಾರರ ಸಮ್ಮೇಳನ ಮಾಡಿದಾಗ ಅವರ ಕಾರ್ಯದರ್ಶಿಗಳಾಗಿ ಚಿದಂಬರಯ್ಯನವರು ಕಾರ್ಯನಿರ್ವಹಿಸಿದರು. ಜಯರಾಮಾಚಾರ್ಯರ ಹರಿಕಥೆಗಳಿಂದ ಪ್ರಭಾವಿತರಾಗಿ ಕೀರ್ತನಕಂಠಾಭರಣವೆಂಬ ೪೮ ಹರಿಕಥೆಗಳ ಗ್ರಂಥ ರಚಿಸಿದರು. ಕನ್ನಡದಲ್ಲಿ ಮೊದಲನೆ ಮತ್ತು ಅತ್ಯಂತ ಶ್ರೇಷ್ಠ ಬೃಹದ್ ಹರಿಕಥಾ ಗ್ರಂಥ ಇದೇ ಇದರಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಎಲ್ಲಾ ಪ್ರಸಿದ್ಧ ಗ್ರಂಥಗಳನ್ನು ಅಧ್ಯಯನ ಮಾಡಿ ಜೈನ, ವೀರಶೈವ, ವೈಷ್ಣವ, ಆಧುನಿಕ ಗ್ರಂಥಗಳೆಲ್ಲರ ಸಾರವನ್ನು ಸಂಗ್ರಹಿಸಿದ್ದಾರೆ. ಈ ಬಗ್ಗೆ ಅವರು ಹೇಳಿರುವ ಮಾತಿದು:

"ಇದು ಅನೇಕ ಗ್ರಂಥಗಳನ್ನು ಒಂದೇ ಕಡೆ ಉಪಯೋಗಿಸುತ್ತ ಕರ್ನಾಟಕ ಭಾಷಾ ಪ್ರಪಂಚಕ್ಕೇ ಒಂದು ಬಗೆಯ ಹೊಸ ಸಾಹಿತ್ಯವಾಗಿದ್ದು ಇದೊಂದನ್ನು ಓದಿದರೆ ಕನ್ನಡದ ವಾಙ್ಮಯವನ್ನೆಲ್ಲ ಓದಿದಂತಾಗಿ ಹೃದಯವು ಅರಳುವುದು. ಇದೊಂದು ಜನಮಂಡಳಿಯ ಪಠ್ಯ ಪುಸ್ತಕ" ಎಂದಿದ್ದಾರೆ.

ಕೀರ್ತನ ಕಂಠಾಭರಣದ ಹರಿಕಥೆಗಳ ರಚನೆಯಲ್ಲಿ ಅನೇಕ ವೈಶಿಷ್ಟ್ಯಗಳಿವೆ. ಕೇವಲ ರಾಮಾಯಣ, ಭಾರತ, ಭಾಗವತದ ಕಥೆಗಳನ್ನು ಕಥಾರೂಪದಲ್ಲಿ ಸಂಗ್ರಹಿಸುವುದಷ್ಟೇ ಅಲ್ಲ. ಭಾರತದ ಶ್ರೇಷ್ಠ ಮಹನೀಯರ ಕಥೆಗಳನ್ನು ಹರಿಕಥೆಗಳನ್ನಾಗಿ ಮಾಡಿದ್ದಾರೆ ಪುರಂದರದಾಸ, ಕನಕದಾಸ, ವಿದ್ಯಾರಣ್ಯ, ತುಳಸೀದಾಸ ಮೊದಲಾದ ಅನೇಕ ಮಹನೀಯರ ಕಥೆಗಳನ್ನು ಹರಿಕಥೆಯಾಗಿ ಬರೆದಿದ್ದಾರೆ. ಅನೇಕ ಕೀರ್ತನೆಗಳನ್ನು ಸ್ವತಃ ರಚಿಸಿದ್ದಾರೆ. ಹಗ, ನಗ, ಹೊಗ ಧಾರ್ಮಿಕ ಕಾವ್ಯಗಳಿಂದ ಸಂಸ್ಕೃತ ಸುಭಾಷಿತ ಗ್ರಂಥಗಳಿಂದ ಉಲ್ಲೇಖಗಳನ್ನು ಕೊಟ್ಟಿದ್ದಾರೆ. ಅಪ್ರಕಟಿತ ಕೀರ್ತನೆಗಳನ್ನು ಬಳಸಿದ್ದಾರೆ. ಉದಾಹರಣೆಗೆ ಅರಸೀಕೆರೆ ತಿಮ್ಮಪ್ಪದಾಸರ ಅಪ್ರಕಟಿತ ಕೀರ್ತನೆಗಳು ಈ ಗ್ರಂಥದಲ್ಲಿದೆ. ಸಾಕಿ ದಂಡಿ ಆರ್ಯಾ ವೃತ್ತಗಳನ್ನು ಕನ್ನಡದ ಕೀರ್ತನೆಗಳಲ್ಲಿ ಮೊದಲಿಗೆ ಬಳಸಿದವರು. ಸ್ವಂತ ರಚನೆ ಮಾಡಿದವರು. ಕನ್ನಡ ಕಾದಂಬರಿ ಸಂಗ್ರಹದಲ್ಲಿ ಬರುವ ಆರ್ಯಾವೃತ್ತದ ಮಾದರಿ ನೂರಾರು ಕನ್ನಡ ಆರ್ಯೆಗಳನ್ನು ಸಾಕಿ ದಂಡಿ, ದಂಡಕ ಮೊದಲಾದುವನ್ನು ರಚಿಸಿದ್ದಾರೆ. ಈ ಗ್ರಂಥಕ್ಕಾಗಿ ಛಂದಶಾಸ್ತ್ರದ ಇತಿಹಾಸದಲ್ಲಿ ಚಿದಂಬರಯ್ಯನವರಿಗೆ ವಿಶಿಷ್ಟ ಸ್ಥಾನವಿದೆ. ವಿದ್ಯಾರಣ್ಯ ಕಾವ್ಯದಲ್ಲಿ ೨೬ಕ್ಕಿಂತ ಬಗೆಬಗೆಯ ಛಂದಗಳಲ್ಲಿ ಪದ್ಯ ರಚಿಸಿದ್ದಾರೆ. ಇನ್ನು ಕಥೆಗಳನ್ನು ವಿನೂತನ ರೀತಿಯಲ್ಲಿ ಹೇಳಿದ್ದಾರೆ. ಕೇವಲ ಧಾರ್ಮಿಕ ಪ್ರವಚನಕಾರರೂ ಗ್ರಂಥಕರ್ತರೂ ಆದ ಹೊಸಕೆರೆ ಚಿದಂಬರಯ್ಯನವರು ಕೀರ್ತನ ಸಾಹಿತ್ಯ ಧುರೀಣರಾಗಿಯೂ ಮೆರೆದಿದ್ದಾರೆ.

ಬೆಳ್ಳಾವೆ ನರಹರಿಶಾಸ್ತ್ರಿಗಳ ಹಾಗೆ, ಬಸವಪ್ಪ ಶಾಸ್ತ್ರಿಗಳ ಹಾಗೆ ಪೌರಾಣಿಕ ನಾಟಕಗಳಿಗೆ ಹಾಡು ಬರೆಯುವವರಾಗಿದ್ದರು. ೧೯೧೯ರ ವೇಳೆಗೆ ಇವರು ರಚಿಸಿದ 'ಭಕ್ತಿ ಗೀತಾವಳಿ ಎಂಬ ಕೀರ್ತನಗ್ರಂಥ.' ದಾಸಸಾಹಿತ್ಯದ ಕೀರ್ತನಸಂಗ್ರಹಗಳಲ್ಲೇ ವಿಶಿಷ್ಟವಾದುದು. ಇತರರು ಬರೆದ ಕೀರ್ತನ ಸಂಗ್ರಹಗಳೇ ಕನ್ನಡದಲ್ಲಿ ಹೆಚ್ಚು. ಸ್ವಂತ ರಚಿತ ಕೀರ್ತನೆಗಳ ಸಂಗ್ರಹ ಕೆಲವೇ ಕೆಲವು. ಕನ್ನಡದಲ್ಲಿ ಆ ಪೈಕಿ ಇವರ ಸಂಗ್ರಹ ಭಕ್ತಿ ಗೀತಾವಳಿ ಅಗ್ರಗಣ್ಯ ಕೃತಿ ಆಗಿದೆ.

ಅನೇಕ ಕೀರ್ತನ ಸಂಗ್ರಹಗಳು, ದ್ವೈತ ಅಥವಾ ಅದ್ವೈತದ ಹಿನ್ನೆಲೆಯಲ್ಲಿ ಕೀರ್ತನೆಗಳನ್ನು ಸಂಗ್ರಹಿಸಿದ ಗ್ರಂಥಗಳಾಗಿವೆ. ಆದರೆ ಇದರಲ್ಲಿ ತ್ರಿಮತಸ್ಥ ಸಂಪ್ರದಾಯದ ಕೀರ್ತನೆಗಳಿವೆ. ಭಕ್ತಿಗೀತಾವಳಿ ಸಂಗ್ರಹದಲ್ಲಿ ಗಣಪತಿ, ಶಾರದಾ, ಗುರು ಕೃಷ್ಣ, ಲಕ್ಷ್ಮೀ, ರಾಮ, ಮಾರುತಿ, ಶಿವ, ಗೌರಿ, ಗಂಗಾ, ಸೂರ್ಯ, ದತ್ತಾತ್ರೇಯ ಇವರನ್ನು ಕುರಿತು ವಿವಿಧರಾಗ ಧಾಟಿಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ.

ಪ್ರತಿ ಹಾಡಿಗೂ ಚಿದಂಬರಯ್ಯನವರು ಸೂಚಿಸಿದ ಧಾಟಿಗಳನ್ನು ಗಮನಿಸಿದಾಗ ೧೯೪೦ರ ವರೆಗೆ ಕನ್ನಡದಲ್ಲಿ ಜನಪ್ರಿಯವಾದ ನಾಟಕಗಳ ಹಾಡು, ಸಂಸ್ಕೃತ, ತೆಲುಗು, ಮರಾಠಿ, ಕನ್ನಡ ಕೀರ್ತನೆಗಳು ಯಾವುವು ಎಂಬುದು ತಿಳಿಯುತ್ತದೆ. ಇವರ ಕೀರ್ತನೆಗಳಲ್ಲಿ ಒಂದು ವಿಶೇಷವಿದೆ. ಪಲ್ಲವಿ ಅನುಪಲ್ಲವಿ ಚರಣ ಅಂಕಿತಗಳಿಂದ ಶಾಸ್ತ್ರೀಯ ಸಂಗೀತದ ಕೃತಿಗಳಾಗಿವೆ. ಇದರ ಜತೆಗೆ ಇವರೇ ಪಾಠಾಂತರಗಳನ್ನು ಇದರ ಕೊಟ್ಟಿದ್ದಾರೆ. ಕನ್ನಡ ಕೀರ್ತನ ಜಗತ್ತಿನಲ್ಲಿ ಒಂದು ಹೊಸ ಜಾಡನ್ನು ನಿರ್ಮಿಸಿದ್ದಾರೆ.

ಭಜನಮಂದಿರಗಳಲ್ಲಿ ಹರಿಕಥೆ, ನಾಟಕಗಳಲ್ಲಿ ಈ ಕೀರ್ತನೆಗಳನ್ನು ಪುರುಷರೂ ಹಾಡುತ್ತಾರೆ; ಸ್ತ್ರೀಯರೂ ಹಾಡುತ್ತಾರೆ. ಕೀರ್ತನೆಯ ಸಾಹಿತ್ಯ ಪುರುಷರಿಗೆ ಅನ್ವಯವಾಗುವಂತೆ ಇದ್ದರೆ ಸ್ತ್ರೀಯರು ಹಾಡಿದಾಗ ಅರ್ಥಾಭಾಸ ಆಗುತ್ತದೆ. ಸ್ತ್ರೀಯರಿಗೆ ಉಚಿತವಾದ ಸಾಹಿತ್ಯ ಪುರುಷರು ಹಾಡಿದಾಗ ರಸಾಭಾಸವಾಗುತ್ತದೆ. ಉದಾಹರಣೆಗೆ ಕೀರ್ತನೆಯೊಂದರಲ್ಲಿ ಸತಿಸುತರಾಬಲೆಯೆಂಬುವಾ । ಅತಿಕಷ್ಟದಿ । ಸಿಲ್ಕಿರದೆ । ಹಿತವನ್ನು ಮಾಡುವ ಸಾಧು ಸಂಗತಿಯಲ್ಲಿಯೇ ಇದು ಎಂಬುದನ್ನು ಸತಿಯೇ ಹಾಡುವಾಗ ಸತಿಸುತರಾ ಪಾಠ ಸಮಂಜಸವಾಗದು. ಅಂಥ ಸಂದರ್ಭಗಳಲ್ಲಿ ಸ್ತ್ರೀಯರು ಈ ಕೀರ್ತನೆಯನ್ನು ಹಾಡಿಕೊಳ್ಳುವಾಗ ಸತಿಸುತರಾ ಎಂಬುದಕ್ಕೆ ಬದಲಾಗಿ ಸುತಸುತೆಯರ ಎಂದು ಹೇಳಿಕೊಳ್ಳಬೇಕು ಎಂದು ಪಾಠಾಂತರ ಕೊಟ್ಟಿದ್ದಾರೆ. ಕನ್ನಡದಲ್ಲಿ ಕವಿಯೇ ಪಾಠಾಂತರ ಕೊಟ್ಟವರಲ್ಲಿ ಚಿದಂಬರಯ್ಯನವರು ಅಗ್ರಗಣ್ಯರಾಗಿದ್ದಾರೆ.

ಹೀಗೆ ಗ್ರಂಥಸಂಪಾದಕರಾಗಿಯೂ ಹೊಸಕೆರೆ ಚಿದಂಬರಯ್ಯನವರು ಕೆಲಸ ಮಾಡಿದ್ದಾರೆ. ಚಿದಂಬರಯ್ಯನವರು ಕನ್ನಡ ಗ್ರಂಥಸಂಪಾದನೆ ಇತಿಹಾಸದಲ್ಲಿ ವಿಶಿಷ್ಟ ಸ್ಥಾನಗಳಿಸಿದ್ದಾರೆ. ಅವನ್ನಾರೂ ಗಮನಿಸಿಲ್ಲ. ೧೯೩೦ರ ವೇಳೆಗೆ ಕನ್ನಡ ಗ್ರಂಥ ಸಂಪಾದನಾ ಶಾಸ್ತ್ರ ಸ್ಪಷ್ಟವಾಗಿ ಮೂಡಿರಲಿಲ್ಲ. ಕಾವ್ಯ ಕಲಾನಿಧಿ, ಕಾವ್ಯ ಮಂಜರಿ ಗ್ರಂಥಗಳು ಕಿಟೆಲ್ ಮೊದಲಾದವರು ಸಂಪಾದಿಸಿದ ಗ್ರಂಥ ಸಂಪಾದನಾ ಮಾದರಿಗಳೇ ಆದರ್ಶಪ್ರಾಯವಾಗಿದ್ದವು. ಅದೇ ಹಾದಿಯಲ್ಲಿ ಮುನ್ನಡೆದ ಹೊಸಕೆರೆ ಚಿದಂಬರಯ್ಯನವರು ಕೆಲವು ನೂತನ ಪ್ರಯೋಗಗಳನ್ನು ಮಾಡಿದ್ದಾರೆ. ಉದಾಹರಣೆಗೆ ಮಹಲಿಂಗ ರಂಗನ ಅನುಭವಾಮೃತವನ್ನು ಅವರು ತಾಳೆಗರಿ ಗ್ರಂಥಗಳನ್ನು ಅಚ್ಚಿನ ಗ್ರಂಥಗಳನ್ನು ಕೋರಿಕಾಗದದ ಕಲ್ಲಚ್ಚಿನ ಪ್ರತಿಗಳನ್ನೂ ಬಳಸಿ ಅತ್ಯುತ್ತಮವಾದ ಸರ್ವಾರ್ಥದರ್ಶಿನಿ ಎಂಬ ಟೀಕೆಯೊಡನೆ ಸಂಪಾದಿಸಿದ್ದಾರೆ. ಇಂದಿಗೂ ಅಷ್ಟು ಅಚ್ಚುಕಟ್ಟಾಗಿ ಮಹಲಿಂಗ ರಂಗನ ಅನುಭವಾಮೃತವನ್ನು ಯಾರೂ ಸಂಪಾದಿಸಿಲ್ಲ. ಆಧುನಿಕ ಗ್ರಂಥ ಸಂಪಾದಕರಲ್ಲಿ ಒಬ್ಬರಾದ ಬಿ.ಎಸ್. ಸಣ್ಣಯ್ಯನವರೂ ಅನುಭವಾಮೃತ ಕಾವ್ಯವನ್ನು ಸಂಪಾದಿಸಿದ್ದಾರೆ. ಇವರಷ್ಟು ವಿದ್ವತ್ಪೂರ್ಣವಾಗಿ ಸಂಪಾದಿಸಿಲ್ಲ.

ಅನುಭವಾಮೃತ ಗ್ರಂಥ ಸಂಪಾದನೆಯಲ್ಲಿ ಮತ್ತು ಇತರ ಗ್ರಂಥಗಳಲ್ಲಿ ಪಠ್ಯಕ್ಕೆ ಮೊದಲಿನ ಪೀಠಿಕೆ, ಪರಿವಿಡಿ, ಪ್ರಕಾಶಕರ ಮಾತು ಮೊದಲಾದುವುಗಳಿಗೆ ಸಣ್ಣ ರೋಮನ್ ಅಂಕಿಗಳನ್ನು ಬಳಸುತ್ತಾರೆ. ಪಠ್ಯಕ್ಕೆ ಕನ್ನಡ ಅಥವಾ ಇಂಗ್ಲಿಷ್ ಅಂಕಿಗಳನ್ನು ಬಳಸುತ್ತಾರೆ. ಈವತ್ತಿಗೂ ನಡೆದುಬಂದ ಪದ್ಧತಿ ಆಗಿದೆ. ಆದರೆ ಹೊಸಕೆರೆ ಚಿದಂಬರಯ್ಯ ಅವರು ತಮ್ಮ ಗ್ರಂಥದಲ್ಲಿ ರೋಮನ್ ಸಣ್ಣ ಅಂಕಿಗಳಿಗೆ ಬದಲಾಗಿ ಕನ್ನಡವರ್ಣಮಾಲೆ ಅಕ್ಷರಗಳನ್ನು ಅಆಇಈಉಊ... ಕಖಗಘಙ, ಚಛಜಝಞ ಇತ್ಯಾದಿ ಬಳಸಿದ್ದಾರೆ. ಕನ್ನಡ ಮುದ್ರಕರು ಲೇಖಕರೂ ಪ್ರಕಾಶಕರು ಯಾರೂ ಗಮನಿಸಿಲ್ಲ. ಕನ್ನಡತನಕ್ಕೆ ಹೆಚ್ಚು ಗಮನ ಕೊಟ್ಟ ಸ್ವದೇಶೀ – ಸ್ವಭಾಷಾ ಪ್ರೇಮಿಗಳು ಹೊಸಕೆರೆ ಚಿದಂಬರಯ್ಯನವರು.

ಹೊಸಕೆರೆ ಚಿದಂಬರಯ್ಯನವರು ಕೀರ್ತನ ಸಾಹಿತ್ಯದಲ್ಲಿ ಮಾಡಿದ ಇನ್ನೊಂದು ಸುಧಾರಣೆ ಅನುಸರಣೀಯವಾಗಿದೆ. ನಮ್ಮಲ್ಲಿ ಸಿನಿಮಾ, ನಾಟಕ, ಹರಿಕಥೆ, ಯಕ್ಷಗಾನಗಳಲ್ಲಿ

ದೇವತಾಸ್ತುತಿಗಳು ಭಕ್ತಿಕೀರ್ತನೆಗಳು ರಚಿತವಾಗಿವೆ. ಅವುಗಳನ್ನು ಹಾಡುಗಳೆಂದು ಕರೆಯುತ್ತೇವೆ ಕೀರ್ತನೆಗಳೆಂದು ಕರೆಯುವುದಿಲ್ಲ ಏಕೆಂದರೆ ಆಯಾ ಪಾತ್ರ, ಕಥೆಗೆ ಸಂಬಂಧಪಟ್ಟ ಮಾತುಗಳಿದ್ದು ಆ ಕೀರ್ತನೆಗಳಿಗೆ ಸಾರ್ವತ್ರಿಕ ಮೌಲ್ಯ ದಾಸರ-ಶರಣರ ಕೀರ್ತನೆಗಳಿಗೆ ಇರುವಂತೆ ಇರುವುದಿಲ್ಲ. ಆದರೆ ಆ ಕೀರ್ತನೆಯಲ್ಲಿ ಸಾರ್ವತ್ರಿಕ ಮೌಲ್ಯದ ಚರಣಗಳೂ ಇದ್ದು ಅದು ಕೀರ್ತನೆಗಳ ಸಾಲಿಗೆ ಸೇರುತ್ತದೆ. ಇದಕ್ಕೆ ತಮ್ಮ ಕೀರ್ತನೆಗಳಲ್ಲಿ ಒಂದು ಉಪಾಯ ಮಾಡಿದ್ದಾರೆ. ಸಾಂದರ್ಭಿಕ ಮೌಲ್ಯದ ಮಾತುಗಳನ್ನು ಸಾರ್ವತ್ರಿಕ ಮೌಲ್ಯದ ಮಾತುಗಳಿಂದ ಪ್ರತ್ಯೇಕಿಸಲು ಸಾಂದರ್ಭಿಕ ಸಾಲುಗಳನ್ನು ಪ್ರತ್ಯೇಕವಾಗಿ ದಪ್ಪಕ್ಷರಗಳಲ್ಲಿ ಅಚ್ಚುಮಾಡಿ, ಸ್ವತಂತ್ರವಾಗಿ ದೇವತಾಸ್ತುತಿಗಳನ್ನು ಮಾಡುವವರು ಈ ಸಾಲುಗಳನ್ನು ಬಿಟ್ಟು ಹಾಡಿ ಎಂದು ಸೂಚಿಸಿದ್ದಾರೆ. ಉದಾಹರಣೆಗೆ

"ನಾಮಭಿಕ್ಷವೀಯೋ ಪ್ರೇಮದಿರಾಮ" ಎಂಬ ಕೀರ್ತನ (ರಾಮಾಯಣದ ಹರಿಕಥೆಯಲ್ಲಿ) ಅಲ್ಲಿಯ ಕಥಾಸಂದರ್ಭಕ್ಕೆ ತಕ್ಕಾ ಸಾಲುಗಳನ್ನು ಬಿಟ್ಟು ಹಾಡಿದರೆ ಸಾರ್ವತ್ರಿಕ ಕೀರ್ತನೆ ಆಗುತ್ತದೆ.

**ವಿಷಯಂಗಳ ಮರೆಸುತ ನಿರ್ವಿಷಯಕ ಮನದಲ್ಲಿ ನಿನ್ನ**

**ಅಸದೃಶ ನಾಮಾಕ್ಷರಗಳೆ ಬೆಸೆದಿರಲೆಂದೆರಗುವೆ ನಾ**

ದೇವತಾಸ್ತುತಿ ಅಂತ ಹಾಡುವವರು ಈ ಸಾಲುಗಳನ್ನು ಬಿಟ್ಟು ಹಾಡಲು ಸೂಚಿಸಿದ್ದಾರೆ. ಹೀಗೆ ಕನ್ನಡ ಕೀರ್ತನ ಸಾಹಿತ್ಯಕ್ಕೆ ಅಮೋಘ ಕೊಡುಗೆ ಕೊಟ್ಟಿದ್ದಾನೆ.

**ಗೀತಾ ಸಾಹಿತ್ಯ ಪ್ರಸಾರಕ**

ಕನ್ನಡದಲ್ಲಿ ೫೦೦ಕ್ಕೂ ಹೆಚ್ಚು ಭಗವದ್ಗೀತೆಗಳು ಪ್ರಕಟವಾಗಿವೆ. ೩೦ಕ್ಕೂ ಹೆಚ್ಚು ಪದ್ಯಾನುವಾದಗಳಾಗಿವೆ. ಕನ್ನಡದಲ್ಲಿ ಭಗವದ್ಗೀತೆಯ ಮೊದಲ ಸಂಗ್ರಹ ಅನುವಾದ ವ್ಯಾಸರಾಯರದು. ಗೀತೆಯು ಕನ್ನಡದಲ್ಲಿ ವ್ಯಾಖ್ಯಾನ, ಅನುವಾದ, ವಿದ್ಯರೂಪ ವಿಮರ್ಶೆ ಗದ್ಯಾನುವಾದ ನಾಟಕರೂಪ ಇತ್ಯಾದಿ ನಾನಾ ರೂಪಗಳಲ್ಲಿ ಪ್ರಕಟವಾಗಿವೆ ಸ್ವತಂತ್ರ ಗ್ರಂಥಗಳು ಅನುವಾದ ಗ್ರಂಥಗಳು ಎಂದು ಕನ್ನಡದಲ್ಲಿ ಇರುವ ಗೀತಾ ಗ್ರಂಥಗಳನ್ನು ವರ್ಗೀಕರಿಸಬಹುದು. ಎರಡೂ ಬಗೆಯ ಗ್ರಂಥಗಳನ್ನು ಹೊಸಕೆರೆ ಚಿದಂಬರಯ್ಯನವರು ಬರೆದಿದ್ದಾರೆ.

ಕನ್ನಡದಲ್ಲಿ ಗೀತೆಯನ್ನು ಕುರಿತು ವಿಶೇಷ ಅಧ್ಯಯನ ಪ್ರಚಾರ ಮಾಡಿದ ಸಾಹಿತಿಗಳಲ್ಲಿ ಅಗ್ರಗಣ್ಯರು ೪ ಜನರು. ಆಲೂರು ವೆಂಕಟರಾಯರು, ದೇವುಡು ನರಸಿಂಹ ಶಾಸ್ತ್ರಿಗಳು, ರಂಗನಾಥ ದಿವಾಕರರು, ಹೊಸಕೆರೆ ಚಿದಂಬರಯ್ಯನವರು. ಹೊಸಕೆರೆ ಚಿದಂಬರಯ್ಯನವರು ಗೀತೆ ಬಗ್ಗೆ ೬ ಗ್ರಂಥ ರಚಿಸಿದ್ದಾರೆ.

೧. ೧೯೧೭ರಲ್ಲಿ ಗೀತಾರ್ಥ ವಿಮರ್ಶೆ ಎಂಬ ಬ್ರಹ್ಮಾನಂದಗಿರಿ ವ್ಯಾಖ್ಯಾನವನ್ನು ಕನ್ನಡಿಸಿದ್ದಾರೆ. ಗೀತೆಯ ತಿರುಳು, ಗೀತೆಯೇ ಕೈಗನ್ನಡಿ, ಗೀತಾರ್ಥ ಚಂದ್ರಿಕೆ, ಮಕ್ಕಳ ಕೈಗೀತೆ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳ ಪೈಕಿ ಕನ್ನಡದಲ್ಲೇ ವಿಶಿಷ್ಟ ಕೃತಿ 'ಗೀತಾರ್ಥ ಚಂದ್ರಿಕೆ'.

**ಜೀವನ ಚರಿತ್ರಕಾರ**

ಕನ್ನಡದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ನಾನಾ ಬಗೆಯ ಜೀವನಚರಿತ್ರೆಗಳನ್ನು ಬರೆದವರಲ್ಲಿ ಸುಬೋಧ ರಾಮರಾಯರು ಅಗ್ರೇಸರರು. ೨೦೦ಕ್ಕೂ ಹೆಚ್ಚು ಜೀವನಚರಿತ್ರೆ ಪುಸ್ತಕಗಳನ್ನು ವಿದ್ಯಾರ್ಥಿಗಳಿಗಾಗಿ ರಚಿಸಿದ್ದಾರೆ. ಈಚೆಗೆ 'ಭಾರತೀ ಭಾರತ' ಮಾಲಿಕೆಯಲ್ಲಿ ಹೆಚ್ಚು ಜೀವನಚರಿತ್ರೆಗಳನ್ನು ಪ್ರಕಟಿಸಲಾಗಿದೆ. ಆದರೆ ಚಿದಂಬರಯ್ಯ ನವರು ವ್ಯಕ್ತಿತ್ವ, ಕೃತಿರಚನೆ, ಜನಕ್ಕೆ ಸಲ್ಲಿಸದ ಸೇವೆ, ಸಾಧನೆ ಇತ್ಯಾದಿ ಸಂಗತಿಗಳಿಂದ ಕಣ್ಣಿಗೆ ಕಟ್ಟುವ ಹಾಗೆ ಜೀವನಚರಿತ್ರೆ ಬರೆಯುವುದರಲ್ಲಿ ಎತ್ತಿದಕೈ. ತಾರಾನಾಥ ತರ್ಕ ವಾಚಸ್ಪತಿ (೧೯೨೭), ಮಾಧವರಾವ್ ಸಿಂಧ್ಯ, ಬ್ರಹ್ಮಾನಂದರು, ಝಾಂಸೀ ಲಕ್ಷ್ಮೀಬಾಯಿ ಭರತನ ಬಂಧು ಪ್ರೇಮ, ಭರತಖಂಡದ ಜೀವಜ್ಯೋತಿಗಳು (೧೯೨೮) ಕೃತಿಗಳನ್ನು ರಚಿಸಿದ್ದಾರೆ. ಈ ಪೈಕಿ ಭರತಖಂಡದ ಜೀವನಚರಿತ್ರೆ ಸಂಗ್ರಹ ಗ್ರಂಥ ಹೊಸಗನ್ನಡ ಗದ್ಯದ ಮಾದರಿ ಗ್ರಂಥ ಆಗಿದೆ. ಪಠ್ಯ ಗ್ರಂಥವಾಗಿ ಹಲವಾರು ಮುದ್ರಣಗಳನ್ನು ಕಂಡಿರುವ ಜನಪ್ರಿಯಗ್ರಂಥ ಇದು. ಮದರಾಸಿನ ಇಂಟರ್ ಮೀಡಿಯೇಟಿಗೆ ಪಠ್ಯವಾಗಿತ್ತು.

"ನಮ್ಮ ಭರತಖಂಡದ ಇತಿಹಾಸದಲ್ಲಿ ಮುಖ್ಯವಾಗಿ ಯಾವ ಯಾವ ಜೀವಜ್ಯೋತಿಗಳು ಬೆಳಗಿದರೋ ಅಂಥವರ ಚರಿತ್ರೆಗಳನ್ನೆಲ್ಲಾ ಸಾಧ್ಯವಾದಷ್ಟು ಮಟ್ಟಿಗೆ ಇದರಲ್ಲಿ ಅಡಕ ಮಾಡಿದ್ದೇನೆ. ಈ ಗ್ರಂಥವನ್ನು ರಚನೆ ಮಾಡುವಲ್ಲಿ ಇಂದಿನವರೆಗೆ (೧೯೨೩ ವರೆಗೆ) ಪ್ರಸಾರವಾಗಿರುವ ಎಲ್ಲಾ ಪುಸ್ತಕಗಳನ್ನು ಬಹುಮಟ್ಟಿಗೆ ವಿಚಾರಕ್ಕೆ ತೆಗೆದುಕೊಂಡಿದ್ದೇನೆ."

ದೇಶಕ್ಕಾಗಿ ರಕ್ತವನ್ನು ಬಸಿದವರೇ ಆಗಬೇಕೆಂದಾಗಲಿ ದೇವರಿಗಾಗಿ ಕಣ್ಣೀರನ್ನು ಸುರಿಸಿದವರೇ ಆಗಬೇಕೆಂದಾಗಲಿ, ಸಂಕುಚಿತ ಬುದ್ಧಿಯನ್ನಿಟ್ಟುಕೊಳ್ಳದೆ ಸ್ತ್ರೀಯರಾಗಲಿ ಪುರುಷರಾಗಲಿ ಯಾವ ಜಾತಿಯಾಗಲಿ ಯಾವ ಉದ್ಯೋಗದವರಾಗಲಿ ದೇಶಾಭಿಮಾನ ದಿಂದ ಆತ್ಮಾಭಿಮಾನದಿಂದ ದಾನದಿಂದ ಭೋಗದಿಂದ ನೀತಿಯಿಂದ ಭಕ್ತಿಯಿಂದ ಸ್ವಾಭಿಮಾನದಿಂದ ಯಾರು ಇತರರಿಗೆ ಆದರ್ಶ ಸ್ವರೂಪರಾಗಿದ್ದಾರೋ ಅಂಥವರ ಚರಿತ್ರೆಗಳನ್ನು ಆರಿಸಿಕೊಂಡಿದ್ದೇನೆ ಎಂದಿದ್ದಾರೆ.

**ಹಿಂದೂ ಧರ್ಮ ಪ್ರಚಾರಕ**

"ಆರ್ಯಧರ್ಮ ಪ್ರದೀಪ ಗ್ರಂಥ" ಹೊಸಕೆರೆ ಚಿದಂಬರಯ್ಯನವರು ಬರೆದ ಗ್ರಂಥಗಳಲ್ಲಿಯೇ ವಿಶಿಷ್ಟವಾದುದು. ಅಷ್ಟೇ ಅಲ್ಲ ಕನ್ನಡದಲ್ಲಿ ಹಿಂದೂ ಧರ್ಮ ಪರಿಚಯವನ್ನು ಸಮಗ್ರವಾಗಿ ಮಾಡಿಕೊಟ್ಟ ಮೊದಲ ಗ್ರಂಥವಾಗಿದೆ. ೧೯೨೪ರಲ್ಲಿ ಪ್ರಕಟವಾದ ಈ ಗ್ರಂಥ 'ವಿದ್ಯಾರ್ಥಿಗಳಿಗಾಗಿ ಬರೆದಿದ್ದಾದರೂ ಎಲ್ಲರೂ ಓದಬೇಕಾದ ಗ್ರಂಥವಾಗಿದೆ. "ಧರ್ಮದಿಂದ ಪಡೆಯುವ ಜಯ ಪ್ರಾಪಂಚಿಕ ಸುಖಕ್ಕಾಗಿ ಪಡೆದಿದ್ದಾಗಿರ ಬಾರದು, ಪ್ರಾಪಂಚಿಕ ಸುಖವು ಬಾಳೆಯ ಎಲೆಯಂತೆ ಧರ್ಮವು ಬಾಳೆಯ ಹಣ್ಣಿನಂತೆ. ಬಾಳೆಹಣ್ಣಿಗಾಗಿ ಬಾಳೆ ಮರವನ್ನು ಬೆಳಸಿದರೆ ಬಾಳೆಎಲೆಯೂ ದೊರತೇ ದೊರೆಯುತ್ತದೆ. ಎಲೆಯನ್ನೇ ಮುಖ್ಯ ಪ್ರಯೋಜನವಾಗಿ ಭಾವಿಸುವುದು ಹೇಗೆ ಅವಿವೇಕವೋ

ಉದ್ದೇಶವನ್ನೇ ಮುಖ್ಯ ಪ್ರಯೋಜನವೆಂದು ಭಾವಿಸುವುದು ಅವಿವೇಕ. ಆದ್ದರಿಂದ ದೇಶಾಭಿಮಾನ ಹೊಂದೋಣ. ಆದರೆ ಅದು ಧರ್ಮಾಭಿಮಾನಕ್ಕೆ ಅಂಗವಾಗಿರಲಿ. ಅಖಂಡ ಶಾಂತಿಯು ಬರೀ ಸ್ವರಾಜ್ಯದಿಂದ ಸಿಕ್ಕುವುದಿಲ್ಲ..." (ಮುನ್ನುಡಿ) ನಮ್ಮ ಧರ್ಮವು ದುಡಿಯಲಾರದ ಹೇಡಿತನದಿಂದ ವೈರಾಗ್ಯವನ್ನು ಮೈಮೇಲೆ ಹಾಕಿಕೊಳ್ಳು ವಂತೆ ಮಾಡುವುದಿಲ್ಲ. ಉತ್ತರ ಕುಮಾರನಂಥವನನ್ನಾದರೂ ಜುಟ್ಟು ಹಿಡಿದೆಳೆ ತಂದು ಕಂಬಕ್ಕೆ ಕಟ್ಟಿ ಅವನ ಎದೆಯನ್ನು ಕಲ್ಲು ಮಾಡಿ ದುಡಿಸಿ ಸ್ವಾರ್ಥದ ಮೇಲೆ ಮಾತ್ರ ವೈರಾಗ್ಯವನ್ನು ವಹಿಸುವಂತೆ ಮಾಡುವುದು.

"ಪಶ್ಚಿಮ ದೇಶದ ಜನರು ಕೊಲ್ಲುವ ಚತುರತೆಯೆಂಬ ತಮ್ಮ ಮೀಸೆಯನ್ನು ಹೊಸ ಹೊಸಬಗೆಯಲ್ಲಿ ಹುರಿಮಾಡುತ್ತಾ ಪವಿತ್ರಳಾದ ಭೂದೇವಿಗೆ ಅಪವಿತ್ರವಾದ ರಕ್ತಪಾನವನ್ನು ಮಾಡಿಸುತ್ತಿರುವರು. ಇದನ್ನು ನಿರ್ಮೂಲಮಾಡುವವರೆಗೂ ನಮ್ಮ ಜನ್ಮವು ಅಸಾರ್ಥಕ ವೆನಿಸಿರುವುದು."

"ನಾವು ಈಗ ನಮ್ಮ ಕರ್ತವ್ಯವನ್ನು ಮರೆತು ಪಶ್ಚಿಮದ ಸಂಸ್ಕೃತಿಗೆ ಮೋಹಿಸಿ ಪಶ್ಚಿಮದ ಕಡೆಗೆ ಮುಖವನ್ನು ತಿರುಗಿಸಿದ್ದೇವೆ. ಪಶ್ಚಿಮ ಅಸ್ತವಾಗುವ ದಿಕ್ಕು. ನಾವು ಪಶ್ಚಿಮವನ್ನೇ ನೋಡುತ್ತಾ ಕುಳಿತರೆ ದೇಶ ಅಸ್ತವಾಗುವುದನ್ನೇ ನೋಡಬೇಕಾದೀತು. ಆದ್ದರಿಂದ ನಾವು ಪೂರ್ವಾಭಿಮುಖವಾಗಿಯೂ ನಮ್ಮ ಧರ್ಮವನ್ನು ಕಡೆಗಣಿಸಿದ್ದರಿಂದ ನಮ್ಮ ಪೂರ್ವಿಕರ ಬಗ್ಗೆ ತುಚ್ಛ ಬುದ್ಧಿ ಬಂದಿದೆ."

**ಗ್ರಂಥ ಸಂಪಾದಕ**

ಮಹಲಿಂಗರ ಅನುಭವಾಮೃತ ಕನ್ನಡದಲ್ಲಿ ಸಮಗ್ರವಾಗಿ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥ. ಜಗನ್ನಾಥ ದಾಸರ ಹರಿಕಥಾಮೃತಸಾರ ದ್ವೈತಸಿದ್ಧಾಂತ ಪ್ರತಿಪಾದಿಸುವ ಸಾಹಿತ್ಯ ಗ್ರಂಥ. ಎರಡೂ ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿವೆ. ಪ್ರಾಕ್ಕಾವ್ಯಮಾಲಿಕೆ ಮೊದಲನೇ ಕನ್ನಡ ಪದ್ಯಸಂಗ್ರಹ (ವಿದ್ಯಾರ್ಥಿಗಳಿಗೆ ಪಠ್ಯವಾದ ಗ್ರಂಥ)ದಿಂದ ಹಿಡಿದು ಇತ್ತೀಚಿನವರೆಗೂ ಪಠ್ಯಗಳಲ್ಲಿ ಸರ್ವಜ್ಞ ವಚನ, ಸೋಮೇಶ್ವರ ಶತಕ, ಕುಮಾರವ್ಯಾಸ ಭಾರತ, ದಾಸರಪದಗಳು ಮೊದಲಾದವು ಪ್ರತಿವರ್ಷ ಪ್ರತಿಪಠ್ಯದಲ್ಲಿ ಇರುತ್ತಿತ್ತು. ಈಗಿನ ಪಠ್ಯಗಳಲ್ಲಿ ಇದ್ದರೆ ಕಾಟಾಚಾರಕ್ಕೆ ಒಂದೆರಡು ಪದ್ಯ ಇದ್ದರೆ ಇತ್ತು ಇಲ್ಲದಿದ್ದರೆ ಇಲ್ಲ. ಕನ್ನಡ ಸಾಹಿತ್ಯದ ಸೊಗಸು ಹಿರಿಮೆ ತಿಳಿಸದಿರುವ ಪಠ್ಯಗಳು ಈಗಿನ ಪಠ್ಯಗಳು. ಮಹಲಿಂಗರಂಗನ ಅನುಭವಾಮೃತ ಕಾವ್ಯದ ಹಿರಿಮೆ ಎಂದರೆ ಸಂಸ್ಕೃತಕ್ಕೆ ತೆಲುಗಿಗೆ ಅನುವಾದವಾಗಿರುವುದು. ಆ ಕಾವ್ಯದಲ್ಲಿನ ಪದ್ಯಗಳು ಜನಸಾಮಾನ್ಯರ ಬಾಯಲ್ಲಿ ಇಂದಿಗೂ ಉಲಿಯುತ್ತಿವೆ. ಉದಾಹರಣೆಗೆ ಈ ಪದ್ಯ ಕೇಳದವರಾರು?

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದಿ
ಲಿಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ

ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ? ಸಂಸ್ಕೃತದಲ್ಲಿನ್ನೇನು?

ಈ ಗ್ರಂಥವನ್ನು ಅದ್ಭುತವಾಗಿ ಗ್ರಂಥ ಸಂಪಾದನೆ ಮಾಡಿದವರು ಹೊಸಕೆರೆ ಚಿದಂಬರಯ್ಯನವರು. ಅದ್ಭುತವಾದ ಟಿಪ್ಪಣಿಗಳು, ವಿಷಯ, ವಿಮರ್ಶಾಸೂಚಿ, ೩೦ಕ್ಕೆ ಹೆಚ್ಚು ಪೂರ್ವಕಥೆಗಳು ಪ್ರತಿ ಅಧ್ಯಯದ ಸಾರಸಂಗ್ರಹ ಇತ್ಯಾದಿ ನೀಡಿ ಶುದ್ಧಪಾಠದ ಪ್ರತಿ ತಯಾರಿಸಿದ್ದಾರೆ.

**ವಿಶಿಷ್ಟ ವ್ಯಕ್ತಿ**

ಚಿದಂಬರಯ್ಯನವರು ಯೋಗಸಾಧನೆ ಮಾಡಿದ್ದರು. ಅವರು ಧ್ಯಾನದ ವೇಳೆಯಲ್ಲಿ ನೆಲದಿಂದ ಒಂದಡಿ ಮೇಲೆ ಇರುತ್ತಿದ್ದರು ಎಂದು ಅವರು ಸೊಸೆ ಹೇಳುತ್ತಿದ್ದರು.

ರಾಮೋತ್ಸವ ಮತ್ತು ಇತರ ಸಂದರ್ಭಗಳಲ್ಲಿ ಸೊಗಸಾಗಿ ಪುರಾಣ ಪ್ರವಚನ ಮಾಡುತ್ತಿದ್ದರು.

ಔಚಿತ್ಯ ಪೂರ್ಣವಾಗಿ ಮಾತನಾಡುತ್ತಿದ್ದರು. ಇದಕ್ಕೊಂದು ನಿದರ್ಶನವೆಂದರೆ :

೧೯೦೭ರ ಸುಮಾರಿನಲ್ಲಿ ಶಂಕರಜಯಂತಿ ಉತ್ಸವಕ್ಕಾಗಿ ಹೊಸಕೆರೆ ಚಿದಂಬರಯ್ಯನವರು ಹುಬ್ಬಳ್ಳಿಗೆ ಹೋಗಿದ್ದರು. ಅಲ್ಲಿಗೆ ಇವರು ಹೋದ ದಿನ ಏಕಾದಶಿ ದಿನ ಆಗಿತ್ತು. ಗುರುಗಳಾದ ಹಾನಗಲ್ ವಿರೂಪಾಕ್ಷ ಶಾಸ್ತ್ರಿಗಳ ಮನೆಗೆ ಹೋದಾಗ ಅವರು ಚಿದಂಬರಯ್ಯನವರನ್ನು ಕುರಿತು "ನಿಮಗೆ ದಶಮಿ ಆಗಬಹುದೆ?" ಎಂದರು. ಅದಕ್ಕೆ ಚಿದಂಬರಯ್ಯನವರು "ಇಲ್ಲ ಏಕಾದಶಿ ಆಗಬಹುದು" ಎಂದರೆ (ನೀವು ಊಟ ಮಾಡುವಿರಾ ಎಂದಾಗ ಮಾರ್ಮಿಕವಾಗಿ ಏಕಾದಶಿ ಊಟ ಮಾಡೋಲ್ಲ ಎಂದು ಹೇಳಿದರು) ಏಕಾದಶಿ ಆಚರಣೆ ನಿಮ್ಮಲ್ಲಿ ಉಂಟೇ ಇಲ್ಲವೇ ಎಂದು ವಿರೂಪಾಕ್ಷ ಶಾಸ್ತ್ರಿಗಳು ಕೇಳಿದ ಮಾತಿನಾರ್ಥ.

ಚಿದಂಬರಯ್ಯನವರು ತಮ್ಮ ಲೇಖನವೊಂದರಲ್ಲಿ ತಾವು ಪಿಳ್ಳಜುಟ್ಟು ಬಿಟ್ಟಿರುವುದಕ್ಕೆ ಕೊಟ್ಟ ಕಾರಣ ಸ್ವಾರಸ್ಯವಾಗಿದೆ. "ಸಾಮಾನ್ಯವಾಗಿ ಸಂನ್ಯಾಸದ ಮೇಲೆ ಹೆಚ್ಚಿನ ಪ್ರೀತಿ ಇರುವುದೇ ನನ್ನ ಹುಟ್ಟುಗುಣ ಈ ಗುಣದ ಸೆಳೆತಕ್ಕೆ ಸಿಕ್ಕಿ ಒಮ್ಮೆ ನಾನೂ ನನ್ನ ತಲೆಯನ್ನು ನುಣ್ಣಗೆ ಮಾಡಿ ಕೊಳ್ಳಬೇಕೆಂದು ಯೋಚಿಸಿದ್ದೆನು. ಆದರೆ ತಲೆಯನ್ನು ನುಣ್ಣಗೆ ಮಾಡಿಕೊಂಡಿದ್ದರೂ ಮನಸ್ಸನ್ನು ನುಣ್ಣಗೆ ಮಾಡಿಕೊಳ್ಳದೆ ಇರುವ ಸಂನ್ಯಾಸಿಗಳೇ ಬಹಳವಾಗಿ ಕಂಡಿದ್ದರಿಂದ ಅವರ ಗುಂಪಿಗೆ ಸೇರಲು ಇಷ್ಟವಿಲ್ಲದೆ. ನಾನಿನ್ನು ಜುಟ್ಟನ್ನು ಇಟ್ಟುಕೊಂಡಿರುವೆನು. ಆ ಜುಟ್ಟು ನನ್ನ ವಯೋಧರ್ಮದಿಂದ ಎದ್ದು ಕಾಣುವಷ್ಟು ಇಲ್ಲದಿದ್ದರೂ ಅದರ ಚಿಹ್ನೆಯಿನ್ನು ಇರುವುದು" (೬೨ನೇ ವಯಸ್ಸಿನಲ್ಲಿ ೧೯೩೨ರಲ್ಲಿ ಬರೆದಿದ್ದು) ವೈಚಾರಿಕ ಮನೋಭಾವವನ್ನು ಚಿದಂಬರಯ್ಯನವರು ಹೊಂದಿದ್ದರು ಎಂಬುದಕ್ಕೆ ಈ ಮಾತುಗಳು ಸಾಕ್ಷಿ ಆಗಿವೆ.

"ಸ್ವಾಮಿಗಳ ಪಾದ ಪೂಜೆಯನ್ನು ನಾಣ್ಯಗಳಿಂದ ಮಾಡುವುದು ಚಿದಂಬರಯ್ಯನವರಿಗೆ ಹಿಡಿಸುತ್ತಿರಲಿಲ್ಲ. ಗಂಧಪುಷ್ಪಗಳಿಂದ ಮಾತ್ರ ಪಾದಪೂಜೆ ಮಾಡಬೇಕೆಂಬುದು

ಅವರ ಖಚಿತಾ ಅಭಿಪ್ರಾಯವಾಗಿತ್ತು ಆದ್ದರಿಂದಲೇ ಅವರು ಹೇಳುತ್ತಾರೆ. ನಾಣ್ಯಗಳಿಂದ ಪೂಜೆಯನ್ನು ಮಾಡಿದ್ದು ಯಾವ ಪುರಾಣದಲ್ಲೂ ಎಲ್ಲಿಯೂ ಕಾಣಬರಲಿಲ್ಲ. ಹೂವ ಸುವಾಸನೆಯಂತೂ ನಾಣ್ಯಗಳಲ್ಲಿ ಕಾಣುವುದಿಲ್ಲವಷ್ಟೆ. ಬರಿ ಅಷ್ಟೇ ಆದರೆ ಬಾಧಕವಿಲ್ಲ. ನಾಣ್ಯವೆಂಬುದು ತನ್ನಲ್ಲಿ ವಾಸನೆಯಿಲ್ಲದಿದ್ದರೂ ಮನಸ್ಸಿನಲ್ಲಿ ದುರ್ವಾಸನೆ ಹುಟ್ಟಿಸುವಂಥ ದ್ರವ್ಯ. ಇಂಥವನ್ನು ಪವಿತ್ರವಾದ ಪಾದಗಳ ಮೇಲೆ ಏಕೆ ಏರಿಸಬೇಕೋ ನನಗೆ ತಿಳಿಯದು."

**ಪ್ರಶಾಂತ ವಾತಾವರಣ ಪ್ರಿಯ**

ಚಿದಂಬರಯ್ಯನವರು ಸಾಕಷ್ಟು ಜನಸಂಚಾರ ಹೊಂದಿದ್ದರೂ ಪ್ರಶಾಂತ ಸ್ಥಳದಲ್ಲಿ ಏಕಾಂತವಾಗಿರಲು ಬಯಸುತ್ತಿದ್ದರು ಗ್ರಂಥ ರಚನೆ ಕಾಲದಲ್ಲಿ ಬೇರೆ ಊರಿನಲ್ಲಿ ಏಕಾಂತವಾಗಿರುತ್ತಿದ್ದುದುಂಟು ಉದಾಹರಣೆಗೆ ಹೇಳಬಹುದಾದರೆ ೧೯೩೪ರಲ್ಲಿ ವಿದುರಾಶ್ವತ್ಥದಲ್ಲಿ ದತ್ತಾತ್ರೇಯ ಆಶ್ರಮದಲ್ಲಿ ಪ್ರಸ್ಥಾನದ ತಿರುಳನ್ನು ತಿಳಿಸುವ 'ವೇದಾಂತದ ಜೀವಾಳ' ಗ್ರಂಥವನ್ನು ರಚಿಸಿದರು. ೧೯೩೬ರಲ್ಲಿ ಬ್ರಹ್ಮಸೂತ್ರಗಳ ಬೆಳಕು ಗ್ರಂಥವನ್ನು ಅಲ್ಲಿಯೇ ರಚಿಸಿದರು.

**ಒಪ್ಪೊತ್ತಿನ ಊಟದ ವ್ರತ :**

೩೬ನೇ ವರ್ಷದಲ್ಲಿ (೧೯೦೬ರಲ್ಲಿ) ಚಿದಂಬರಯ್ಯ ಅವರ ಹೆಂಡತಿ ತೀರಿಕೊಂಡ ಮೇಲೆ ಪ್ರತಿದಿನ ಒಪ್ಪತ್ತು ಊಟ ಮಾಡುತ್ತಿದ್ದರು. ಯಾರೋ ಒಬ್ಬರು ರಾತ್ರಿ ಊಟ ಬಿಟ್ಟಿದ್ದೇಕೆ ಎಂದು ಕೇಳಿದಾಗ ಹೇಳಿದರು. (ಗಂಡ ಸತ್ತರೆ ಹೆಂಡತಿ ಒಪ್ಪತ್ತು ಊಟ ಮಾಡಬೇಕೆಂಬ ನಿಯಮವಿತ್ತು ಆಕಾಲದಲ್ಲಿ.) "ಗಂಡ ಹೆಂಡತಿ ಎಂದರೆ ಸಮಾನರು ಆತ್ಮೀಯರು. ಗಂಡ ಸತ್ತರೆ ಹೇಗೆ ಹೆಂಡತಿಗೆ ಒಪ್ಪತ್ತು ಊಟವೋ ಹಾಗೆ ಹೆಂಡತಿ ಸತ್ತರೆ ಗಂಡನಿಗೂ ಒಪ್ಪತ್ತೂಟ ಎನ್ನುವುದು ನ್ಯಾಯ" ಎಂದು ಹೇಳಿ ಚಿದಂಬರಯ್ಯನವರೂ ಒಪ್ಪತ್ತೂಟವನ್ನೇ ಮಾಡುತ್ತಿದ್ದರು. ಪ್ರತಿದಿನ ಬೆಳಿಗ್ಗೆ ೧೧.೩೦ಕ್ಕೆ ಊಟ ಮಾಡುತ್ತಿದ್ದರು. ಸಾವಿನ ದಿನದಂದು ಸಹ ೧೧.೩೦ಕ್ಕೆ ಊಟ ಮಾಡಿ ಆಮೇಲೆ ಪ್ರಾಣಬಿಟ್ಟರು. ಎಷ್ಟೇ ಒತ್ತಾಯ ಬಂದರೂ ಎರಡನೇ ಮದುವೆಗೆ ಒಪ್ಪಿರಲಿಲ್ಲ ಅವರು ಹಾಗೆ ಮಾಡಿದರೆ ಮೊದಲ ಹೆಂಡತಿಗೆ ದ್ರೋಹ ಮಾಡಿದಂತೆ ಎನ್ನುತ್ತಿದ್ದರು.

**ಉಚಿತ ಸಾಹಿತ್ಯಸೇವೆ**

ಯಾರಾದರೂ ಪ್ರಕಟಿಸಲು ಗ್ರಂಥ ಕೇಳಿದರೆ ಲೇಖನ ಕೇಳಿದರೆ ಬರೆದು ಕೊಡುತ್ತಿದ್ದರು. ಅದಕ್ಕಾಗಿ ಹಣವನ್ನಾಗಲಿ ಬೇರೇನನ್ನಾಗಲಿ ಬಯಸುತ್ತಿರಲಿಲ್ಲ. "ಅಚ್ಚಾದ ಮೇಲೆ ಕೆಲವು ಪ್ರತಿಗಳನ್ನು ಕಳಿಸಿಕೊಡಿರಪ್ಪಾ" ಎನ್ನುತ್ತಿದ್ದರು.

ಮೊದಲಿನಿಂದಲೂ ಅಧ್ಯಾತ್ಮಾಸಕ್ತಿ ಹೊಂದಿದ್ದ ಅವರು ೧೯೩೬ರಲ್ಲಿ ತಿರುಮ ಕೂಡಲು ನರಸೀಪುರದಲ್ಲಿ ಸಾವಿತ್ರಮ್ಮ ಎಂಬ ಭಕ್ತೆಯೊಬ್ಬರು ಮಾಡಿಕೊಟ್ಟ ಮನೆ ಯಲ್ಲಿದ್ದರು. ೧೯೩೮–೧೯ರಂದು ಬ್ರಹ್ಮೈಕ್ಯರಾದರು. ಹೊಸಕೆರೆ ಚಿದಂಬರಯ್ಯನವರ

ಜಾತಕ ಬರೆದಿರುವರು ಹೇಳಿದ ಹಾಗೆ ೨೪ ಗಂಟೆ ಆದ ಮೇಲೆ ಸಂಸ್ಕಾರ ಮಾಡಿದರು. ಏಕೆಂದರೆ, "ಇವರ ದೇಹದಲ್ಲಿ ಉಸಿರು ಹೋದರೂ ಪ್ರಾಣ ೨೪ ಗಂಟೆಗಳ ಕಾಲ ಇರುತ್ತೆ" ಎಂದು ಹೇಳಿದ್ದರಿಂದ ಒಂದು ದಿನದ ನಂತರ ಅವರ ಸಂಸ್ಕಾರ ನಡೆಸಿದರು. ನದೀಸ್ನಾನ ಮಾಡಿಕೊಂಡು ಬಂದು ವಿಭೂತಿ ಗಂಧಾಕ್ಷತೆ ಧರಿಸಿದರು ಪಾಯಸದೂಟ ಮಾಡಿ ಮಧ್ಯಾಹ್ನ ೧೨.೩೦ಕ್ಕೆ ನಿಧನರಾದರು.

ಕನ್ನಡಕ್ಕೆ ಚಿರಸ್ಮರಣೀಯ ಕೃತಿಗಳನ್ನು ನೀಡಿರುವ ಹೊಸಕೆರೆ ಚಿದಂಬರಯ್ಯನವರ ಬಗ್ಗೆ ಪಿಎಚ್.ಡಿ. ಗ್ರಂಥ ರಚಿಸಬೇಕಾಗಿದ್ದು ಅವರ ಎಲ್ಲ ಕೃತಿ-ಲೇಖನಗಳನ್ನು ಸಂಗ್ರಹಿಸಬೇಕಾದ ಕಾರ್ಯ ಅಗತ್ಯವಾಗಿ ಆಗಬೇಕಿದೆ.

**ಹೊಸಕೆರೆ ಚಿದಂಬರಯ್ಯನವರ ಸಾಹಿತ್ಯ ಸೇವೆ**

೮೦ಕ್ಕೂ ಹೆಚ್ಚಿನ ಗ್ರಂಥಗಳನ್ನೂ, ರಚಿಸಿ ನೂರಾರು ಲೇಖನಗಳನ್ನೂ ನಾಡಿನ ನಾನಾ ಪತ್ರಿಕೆಗಳಿಗೆ (೧೯೩೮ರ ವರೆಗೆ) ಬರೆದ ಚಿದಂಬರಯ್ಯನವರ ಸಮಗ್ರ ಸಾಹಿತ್ಯವನ್ನು ಸಂಗ್ರಹಿಸಿ ವಿಮರ್ಶಿಸಬೇಕಾಗಿದೆ. ಇಲ್ಲಿ ೮೦ ಕೃತಿಗಳ ಪೈಕಿ ಅವರ ೫೦ ಪ್ರಸಿದ್ಧ ಗ್ರಂಥಗಳನ್ನು ಅತಿ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಅವರೇ ಬರೆದ ಮಾತುಗಳಲ್ಲಿ ಸಂಗ್ರಹಿಸಲಾಗಿದೆ.

**ಧಾರ್ಮಿಕ ಗ್ರಂಥಗಳು**

೧. **ಗೀತಾರ್ಥ ವಿವರಣೆ (೧೯೧೭) ಪ್ರ:** ಪಂಡಿತ ಸಾಲಿಗ್ರಾಮ ನಾರಾಯಣಶಾಸ್ತ್ರಿ ಬೆಂಗಳೂರು ಸಂಸ್ಕೃತ ಕಾಲೇಜು, ವೆಂಕಟನಾಥ ಎಂಬುವರು ಸಂಸ್ಕೃತದಲ್ಲಿ ಗೀತೆಗೆ ಬರೆದ ಬ್ರಹ್ಮಾನಂದಗಿರಿ ವ್ಯಾಖ್ಯಾನದ ಕನ್ನಡ ಸಾರ ಸಂಗ್ರಹ ಪೀಠಿಕೆಯಾಗಿ ೧೮ ಅಧ್ಯಾಯಗಳ ಸಾರಸಂಗ್ರಹವನ್ನು ಪ್ರಾರಂಭದಲ್ಲಿ ಕೊಟ್ಟಿದ್ದಾರೆ.

"ಇದರಲ್ಲಿ ಅಖಂಡ ಭೂಮಂಡಲದ ಧರ್ಮಧ್ವಜವಾದ ಭಗವದ್ಗೀತೆಯ ಮೂಲವೂ ಅದರ ಅರ್ಥವೂ ಇರುವುದಲ್ಲದೆ ಸ್ವಲ್ಪ ಓದುವುದರೊಳಗೆ ಬಹಳ ತಿಳಿಯುವಂತೆ ಮುಮುಕ್ಷುಗಳ ಹೃದಯವನ್ನು ಅರಳಿಸಿ ಬಾಯಿನೀರು ಕರೆಸುತ್ತ ಪ್ರತಿಯೊಂದು ಯೋಗದ ವಿಷಯಕ್ಕೂ ತಕ್ಕಷ್ಟು ಪ್ರಾಶಸ್ತ್ಯವನ್ನು ಕೊಟ್ಟು ಮನಸ್ಸಿಗೆ ಸಮಾಧಾನವಾಗುವ ಹಾಗೆ ಗೀತಾರ್ಥದ ಸರ್ವಸಾರವನ್ನು ಸರಳವಾಗಿಯೂ ಸಂಗ್ರಹವಾಗಿಯೂ ಸಮರ್ಪಕವಾದ ರೀತಿಯಲ್ಲಿ ತಿಳಿಸುವ ಸುಲಭವಾದ ಅಚ್ಚ ತಿಳಿಗನ್ನಡದ ಅಪೂರ್ವ ವಿವರಣೆಯೂ ಇರುವುದು. ಈ ಗ್ರಂಥವು ಪ್ರತಿಯೊಂದು ಮನೆಯಲ್ಲಿಯೂ ಅಗತ್ಯವಾಗಿ ಇರತಕ್ಕದ್ದು. ಧರ್ಮ, ನೀತಿ, ಬೋಧಕರಾದ ಉಪಾಧ್ಯಾಯರೂ ಪೌರಾಣಿಕರೂ ಇದರ ಉಪಯೋಗವನ್ನು ಪ್ರತಿದಿನವೂ ಮಾಡುವಂತೆ ಇರುವುದಲ್ಲದೆ ಆಸ್ತಿಕಬುದ್ಧಿ ಹೊಂದಿದ್ದಾರೆ. ಸ್ತ್ರೀಯರೂ ಈ ಗ್ರಂಥದಿಂದ ವೈದಿಕ ಧರ್ಮವನ್ನು ಕರತಲಾಮಲಕವಾಗಿ ತಿಳಿಯಬಹುದು."

"ದ್ವೀಪಾಂತರಗಳಲ್ಲಿರತಕ್ಕ ವರ್ಣಾಶ್ರಮ ಧರ್ಮಗಳ ಗಂಧವೇ ಇಲ್ಲದಿರುವ

ಯುರೋಪ್ ಮತ್ತು ಅಮೆರಿಕಾ ದೇಶಸ್ಥರು ನಮ್ಮ ವೇದಾಂತ ಗ್ರಂಥಗಳನ್ನು ಕುತೂಹಲದಿಂದ ಅವಲೋಕಿಸಲು ಉಪಕ್ರಮಿಸಿರುತ್ತಾರೆ. ಹೀಗಿರುವಲ್ಲಿ ಮಹರ್ಷಿಗಳ ಭೂಮಿಯಲ್ಲಿ ಜನಿಸಿ ಋಷಿಗಳ ವಂಶಕ್ಕೆ ಸೇರಿದ ಆರ್ಯರು ನಮ್ಮ ಸಿದ್ಧಾಂತಗಳನ್ನು ವಿಶದಪಡಿಸುವ ಭಗವದ್ಗೀತೆ ಮೊದಲಾದ ಗ್ರಂಥಗಳನ್ನು ಪರಿಚಯ ಮಾಡಿಕೊಳ್ಳದೇ ಇರುವುದು ಸುತರಾ ಸರಿಯಾದದ್ದಲ್ಲವು."

೨. **ಸೂಕ್ತಿ ಮಾಲೆ ೧ ಮತ್ತು ೨ನೇ ಭಾಗಗಳು :** "ದೈವಿಕ ಸ್ಫೂರ್ತಿಬಲದಿಂದ ಪೂರ್ವದ ಋಷಿಗಳು ಸಂಸ್ಕೃತದಲ್ಲಿ ಮಂತ್ರಗಳನ್ನು ಪ್ರಕಟಮಾಡಿದಂತೆ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ದೇಶಭಾಷೆಯಲ್ಲಿ ಆಡಿರುವ ಧರ್ಮವಿಚಾರವಾದ ಅಭಿಪ್ರಾಯಗಳಿವೆ. ಪ್ರ: ಎಚ್. ಚಿದಂಬರಯ್ಯ, ಶ್ರೀ ರಾಮಮಂದಿರ, ಕುರ್ತುಕೋಟ (ಧಾರವಾಡ)

೩. **ಪರಮಾರ್ಥ ಪತ್ರಿಕೆ :** "ಇದೊಂದು ತಿಳಿಗನ್ನಡ ಮಾಸಪತ್ರಿಕೆ. ಇದರಲ್ಲಿ ವೇದ ವೇದಾಂತ ಪುರಾಣ ಇತಿಹಾಸ ಅವುಗಳ ರಹಸ್ಯಾರ್ಥಗಳೂ ಭಕ್ತಿ, ನೀತಿ, ಧರ್ಮ, ಜ್ಞಾನ, ವೈರಾಗ್ಯ ಇವುಗಳನ್ನು ಬೋಧಿಸುವ ಉಪನ್ಯಾಸಗಳೂ ಸುಲಭವಾಗಿ ತಿಳಿಯುವಂತೆ ಪರಿಚಿತರಿಂದ ಲೇಖಿಸಲ್ಪಟ್ಟು ಪ್ರತಿತಿಂಗಳೂ ಹೊರಡಿಸಲ್ಪಡುತ್ತದೆ. ಪಾರಮಾರ್ಥಿಕ ವಿಚಾರ ಮಾಡಲಪೇಕ್ಷಿಸುವ ಮುಮುಕ್ಷುಗಳಿಗೆ ಅತ್ಯಂತ ಉಪಯೋಗವಾಗಿದೆ."

ವರ್ಷಕ್ಕೆ ಚಂದಾ ೧ ರೂ. ೪ ಆಣೆ. ಪ್ರಸಾರಣ: ಪರಮಾರ್ಥ ಕಾರ್ಯಾಲಯ ಅವಿನ್ಯೂರೋಡ್, ಬೆಂಗಳೂರು.

೪. **ಭಕ್ತ ಬಂಧು ಮಾಸಪತ್ರಿಕೆ :** ೧೯೧೯ನೇ ಇಸವಿ ಮೊದಲ ಭಾಗದಲ್ಲಿ ಕುರ್ತುಕೋಟಿಯಿಂದ ಮಹಾಭಾಗವತರ ಜತೆ ಸಂಚಾರ ಮಾಡಿದ್ದರಿಂದ ಆದ ದೇಹಶ್ರಮ ಮನಃಶ್ರಮ ನಿವಾರಣೆಗಾಗಿ ಬೆಂಗಳೂರಿಗೆ ಹಿಂದಿರುಗಿದರು. ಆಗ ಕೊಪ್ಪಳದ ಜಯರಾಮಾಚಾರ್ಯರೆಂಬ ದೇಶಾಭಿಮಾನಿ ಕೀರ್ತನಕಾರರು ಹರಿಕೀರ್ತನ ಸಮ್ಮೇಳನವೊಂದನ್ನು ಬೆಂಗಳೂರಿನಲ್ಲಿ ಏರ್ಪಡಿಸಿದಾಗ ಅದರಲ್ಲಿ ಸಕ್ರಿಯವಾಗಿ (ಕಾರ್ಯದರ್ಶಿಗಳಾಗಿ) ಚಿದಂಬರಯ್ಯನವರು ಭಾಗವಹಿಸಿದರು. ಆ ಸಂದರ್ಭದಲ್ಲಿ ಆ ಸಮ್ಮೇಳನದಿಂದ ಪ್ರೇರಿತರಾಗಿ ಭಕ್ತಬಂಧು ಎಂಬ ಮಾಸಪತ್ರಿಕೆ ಹೊರಡಿಸಿದರು. ಪರಮಾರ್ಥ ಪತ್ರಿಕೆಯನ್ನು ೩ ವರ್ಷ ನಡೆಸಿದ ಮೇಲೆ ಸಾಲಗ್ರಾಮದ ನಾರಾಯಣಶಾಸ್ತ್ರಿಗಳಿಗೆ ವಹಿಸಿದ್ದರು. ಭಕ್ತಬಂಧು ಪತ್ರಿಕೆಯನ್ನು ಕೊನೆಯವರೆಗೂ ಚಿದಂಬರಯ್ಯನವರೇ ನಡೆಸಿದರು. ಬೆಂಗಳೂರಿನ ಬಸವನ ಗುಡಿಯಲ್ಲಿ ಇದರ ಕಾರ್ಯಾಲಯವಿತ್ತು. ಕೀರ್ತನಕಾರರ ಚಿತ್ರಣದ ಹರಿಕಥೆಗಳು ಭಕ್ತಬಂಧುವಿನಲ್ಲಿ ಪ್ರಕಟವಾಯಿತು. ಆಮೇಲೆ ಸಮಗ್ರ ಸಂಪುಟವಾಗಿ ಪ್ರಕಟಗೊಂಡಿತು (೧೯೩೭ರಲ್ಲಿ)

೫. **ಆರ್ಯಧರ್ಮ ಪ್ರದೀಪ :** ಚಿದಂಬರಯ್ಯನವರ ಪ್ರಸಿದ್ಧ ಗ್ರಂಥಗಳಲ್ಲಿ ಒಂದು ಧಾರವಾಡದ ನ್ಯಾಷನಲ್ ಸ್ಕೂಲಿನಲ್ಲಿ ಅಧ್ಯಾಪಕರಾದಾಗ ರಚಿಸಿದ್ದ ಹಲವಾರು ಮುದ್ರಣಗಳನ್ನು ಕಂಡಿದೆ. ಹಿಂದೂಧರ್ಮದ ಕೈಪಿಡಿ ಎನಿಸಿದೆ. "ಧರ್ಮಭೂಮಿ

ಯೆಂದು ಪ್ರಸಿದ್ಧವಾದ ಈ ದೇಶದಲ್ಲಿ ಧರ್ಮಜ್ಞಾನವು ಹುಡುಗರ ಮನಸ್ಸಿನಲ್ಲಿ ಕೂಡ ಚೆನ್ನಾಗಿ ಬಿಂಬಿಸುವಂತೆ ದೇವರು, ಧರ್ಮ, ಜಗತ್ತು, ಅವಾಂತರ ಮತ್ತು ಜನ್ಮಾಂತರ, ವಿದ್ಯಾರ್ಥಿ ವೃತ್ತಿ, ಗೃಹಸ್ಥವೃತ್ತಿ ಕರ್ಮಯೋಗ ಭಕ್ತಿಯೋಗ ಮತ್ತು ಜ್ಞಾನಯೋಗ ಮೊದಲಾದ ವಿಚಾರಗಳನ್ನು ಚೆನ್ನಾಗಿ ವಿವರಿಸಿ ಅವುಗಳಿಗೆ ಪ್ರಾಚೀನ ಶಾಸ್ತ್ರೋಕ್ತಿಗಳನ್ನೂ, ಬೇರೆ ಬೇರೆ ಪಂಥಗಳ ಈಚೀಚಿನ ಸಾಧುಸಂತರ ವಚನ ವಿಶೇಷಗಳನ್ನೂ, ಅನೇಕ ಕವಿಗಳ ಉದ್ಗಾರಗಳನ್ನು ಪ್ರಮಾಣವಾಗಿಕೊಟ್ಟು ಅನೇಕ ಯುಕ್ತಿಗಳಿಂದಲೂ ಅವುಗಳನ್ನು ಪರಿಪುಷ್ಟಿಗೊಳಿಸಿ ಆ ತತ್ತ್ವಾರ್ಥಗಳನ್ನು ಆಚರಣೆಯಲ್ಲಿ ತೋರಿಸಿದ ಪುರಾಣಪುರುಷರ ದೃಷ್ಟಾಂತಗಳನ್ನು ಮುಂದು ಮಾಡಿ ವೈದಿಕಧರ್ಮದ ಸಾರ್ವಜನಿಕ ಧರ್ಮಸ್ವರೂಪವನ್ನು ವೀರ್ಯವತ್ತಾದ ಭಾಷೆಯಿಂದ ಮನಗಾಣಿಸುವ ಗ್ರಂಥ.”

ಹುಡುಗರ ಮನಸ್ಸಿನಲ್ಲಿ ಕೂಡ ಬಿಂಬಿಸುವಂತೆ ಹಿಂದೂ ಮತದ ಧರ್ಮಸೂಕ್ಷ್ಮಗಳನ್ನು ಚೆನ್ನಾಗಿ ವಿವರಿಸುವ ಈ ಗ್ರಂಥ ಹಿಂದೂಧರ್ಮದ ಕೈಗನ್ನಡಿ ಆಗಿದೆ. ಎರಡೂ ವಿದ್ಯಾವರ್ಧಕ ಸಂಘದಲ್ಲಿ ಬಹುಮಾನ ಪಡೆದಿದೆ.

೬. **ಅನುಭವಾಮೃತ (ಸರ್ವಾರ್ಥ ಸಂದರ್ಶಿನೀ ಟೀಕೆಯೊಂದಿಗೆ) :** ಮಹಲಿಂಗರಂಗನ ಪ್ರಸಿದ್ಧ ಅದ್ವೈತಸಿದ್ಧಾಂತ ಗ್ರಂಥ ಭಾಮಿನೀಷಟ್ಪದಿಯಲ್ಲಿ ರಚಿತವಾಗಿದೆ. ತಾಳೆಗರಿ ಗ್ರಂಥಗಳನ್ನು ಕೋರಿ ಕಾಗದ ಪ್ರತಿಗಳನ್ನು ಮತ್ತು ಅಚ್ಚಿನ ಗ್ರಂಥಗಳನ್ನು ಸಂಶೋಧಿಸಿ 'ಶುದ್ಧಾಪಾಠ'ವನ್ನು ನಿರ್ಣಯಿಸಿದ ಗ್ರಂಥವಿದು. ಶ್ರುತಿಸ್ಮೃತಿ ವಾಕ್ಯಗಳ ಆಧಾರಕೊಟ್ಟು ಗ್ರಂಥದ ಮರ್ಮಗಳನ್ನೆಲ್ಲ ಚೆನ್ನಾಗಿ ವಿವರಿಸುತ್ತ ಕಠಿಣಶಬ್ದಗಳ ಅರ್ಥಗಳನ್ನು ಗಹನವಾದ ಕಡೆಯಲ್ಲಿ ತಾತ್ಪರ್ಯವನ್ನು ಹೇಳಿ ಕಠಿಣ ಶಬ್ದಗಳ ಅರ್ಥವನ್ನೂ ವಾಚಕರ ಜ್ಞಾನ ಪ್ರಾಪ್ತಿಗಾಗಿ ಬೇಕಾದ ಸೌಕರ್ಯಗಳನ್ನೆಲ್ಲ ಸೂರೆ ಮಾಡಿ ಎಂದರೆ ವಿಸ್ತಾರವಾದ ಕವಿಕಾವ್ಯ ಪೀಠಿಕೆ, ಅಧ್ಯಾಯಗಳ ಸಾರಸಂಗ್ರಹ, ಪೂರ್ವಕಥೆಗಳು, ದುರಂತಗಳನ್ನು ಉಲ್ಲೇಖಿತ ಗೀತೋಪನಿಷತ್ತುಗಳ ಉಲ್ಲೇಖ ವಿವರ ಇತ್ಯಾದಿಗಳನ್ನು ಒಳಗೊಂಡು ಆದರ್ಶಪ್ರಾಯವಾಗಿ ಬರೆದ ಗ್ರಂಥ. ಮೈಸೂರು ಸರ್ಕಾರದ ದೇವರಾಜ ಬಹದ್ದೂರ್ ನಿಧಿಯ ಬಹುಮಾನ ಪಡೆದಿದೆ.

೭. **ಆತ್ಮಶಕ್ತಿಯ ತೇಜಸ್ಸು :** "ಮನುಷ್ಯನಲ್ಲಿ ಅಪ್ರತಿಮ ಸಾಮರ್ಥ್ಯವು ಅವಿರ್ಭವಿಸುವಂತೆ ಮಾಡಿ ಕೀರ್ತಿ ಶರೀರರೂಪವಾದ ಚಿರಂಜೀವಿತ್ವವನ್ನು ತಂದುಕೊಡುವಂಥ ಸ್ವದೇಶಭಕ್ತಿ, ಗೋಭಕ್ತಿ, ಮಾತೃಭಕ್ತಿ, ಮಾತೃಭಾಷಾಭಕ್ತಿ, ರಾಜಭಕ್ತಿ, ಬ್ರಹ್ಮಚರ್ಯ, ಧೈರ್ಯ, ಉದ್ಯೋಗ, ಧರ್ಮನಿಷ್ಠೆ, ಪರಮಾರ್ಥವೃತ್ತಿ ಮೊದಲಾದ ಆತ್ಮಶಕ್ತಿಯ ವಿವಿಧ ವಿಚಾರ ವಿಶೇಷಗಳನ್ನು ವಿವರಿಸಿ ಆರ್ಯ ಸಂಸ್ಕೃತಿಯ ದೃಷ್ಟಿಯಿಂದ ಅವುಗಳೆಲ್ಲಾ ಕೃತಿ ಸಾಧ್ಯಗಳೆಂದು ಮನಗಾಣಿಸುವುದಕ್ಕಾಗಿ ಇತಿಹಾಸ ಪ್ರಸಿದ್ಧರಾದ ಲೋಕೋತ್ತರ ವಿಭೂತಿಗಳ ಆಚರಣೆಗಳನ್ನು ಉದಾಹರಿಸುವ ಉತ್ತಮಗ್ರಂಥ. ಮದ್ರಾಸಿನ ವಿದ್ವತ್ ಪರೀಕ್ಷೆಗೆ ಅಂಗೀಕೃತ ಪಠ್ಯವಾಗಿದೆ.

೮. **ಭರತಖಂಡದ ಜೀವಜ್ಯೋತಿಗಳು :** ಜೀವನಚರಿತ್ರೆಯ ಗ್ರಂಥ. ಹಿಂದೂಸ್ಥಾನದ ದಿಗಂತಗಳನ್ನೆಲ್ಲ ತಮ್ಮ ತಮ್ಮ ಪ್ರತಿಭೆಯಿಂದ ಪ್ರಕಾಶಗೊಳಿಸಿ ಪ್ರಸಿದ್ಧರಾಗಿರುವ ಐತಿಹಾಸಿಕ ಮಹನೀಯರ ಅನೇಕ ಚರಿತ್ರೆಗಳ ತಿರುಳನ್ನು ಅನೇಕ ಕಡೆಗಳಿಂದ ಸಂಗ್ರಹಿಸಿ ಸುಲಭವಾದ ಮತ್ತು ರಸವತ್ತಾದ ಭಾಷೆಯಿಂದ ವಿಚಿತ್ರವಾಗಿ ವಿವರಿಸಿರುವ ಸಚಿತ್ರಗ್ರಂಥ. ವಿದ್ಯಾವರ್ಧಕ ಸಂಘದಿಂದ ಬಹುಮಾನವನ್ನು ಪಡೆದಿದ್ದು, ಮದರಾಸಿನ ಇಂಟರ್ ಮೀಡಿಯೇಟ್ ಪರೀಕ್ಷೆಗೆ ಅಂಗೀಕೃತ ಪಠ್ಯವಾಗಿದೆ.

೯. **ಭರತನ ಬಂಧುಪ್ರೇಮ :** ಶ್ರೀ ತುಳಸೀ ರಾಮಾಯಣದ ಸರಣಿಯನ್ನು ಹಿಡಿದು ಪ್ರೇಮರಸವನ್ನು ಸೂರೆ ಮಾಡುತ್ತಾ ಪ್ರಾಚೀನ ಸಂಪ್ರದಾಯಗಳನ್ನು ಆಧುನಿಕ ದೃಷ್ಟಿಯಿಂದ ಸಕಾರಣವಾಗಿ ವಿವರಿಸುತ್ತ ಬರೆದಿರುವ ಭರತನ ಕಥೆ. ವಿದ್ಯಾವರ್ಧಕ ಸಂಘದವರ ಬಹುಮಾನಕ್ಕೆ ಪಾತ್ರವಾಗಿ ಮೈಸೂರು ಸರ್ಕಾರದವರಿಂದ ಒಂದು ವರ್ಷ ಪಠ್ಯಪುಸ್ತಕವಾದುದು.

೧೦. **ನವೀನಕಲ್ಪ ನಾಟಕ :** ಈಗಿನ ಸಾಮಾಜಿಕ ಪರಿಸ್ಥಿತಿಯು ಪಾಶ್ಚಾತ್ಯ ಪದ್ಧತಿಯನ್ನೆಲ್ಲಾ ನಾಗರಿಕತೆಯೆಂದು ಭ್ರಮಿಸಿ ಮೋಸಹೋಗುತ್ತಿರುವುದರಿಂದ ಭಾರತೀಯತ್ವವು ನೀರು ಪಾಲಾಗುತ್ತಿರುವ ದುಷ್ಪರಿಣಾಮವನ್ನು ಚಿತ್ರಿಸಿ ನಮ್ಮ ಪೂರ್ವಪದ್ಧತಿಯೇ ನಿಜವಾದ ನಾಗರಿಕತೆಯೆಂಬುದನ್ನು ಮನಗಾಣಿಸುವ ಕಲ್ಪಿತ ನಾಟಕ.

೧೧. **ಪರಮಾತ್ಮಸ್ತುತಿ (ಷಟ್ಪದಿಕಾವ್ಯ) :** ಪರಮಾತ್ಮನ ಮಹಿಮಾ ವಿಶೇಷಗಳು ಮನಸ್ಸಿನಲ್ಲಿ ಮೂಡುವಂತೆ ಮೃದುಮಧುರ ಶೈಲಿಯಿಂದ ಮನೋಹರವಾಗಿರುವ ಷಟ್ಪದಿಗ್ರಂಥ ವಿದ್ಯಾವರ್ಧಕ ಸಂಘದವರಿಂದ ಬಹುಮಾನ ಪಡೆದದ್ದು.

೧೨. **ರಾಸಕ್ರೀಡೆ (ಕಥೆ) :** ಪಶ್ಚಿಮದ ಬಿರುಗಾಳಿಯಿಂದ ಬುಡಮೇಲಾಗುತ್ತಿರುವ ಶ್ರದ್ಧೆಯ ಮೂಲಸ್ತಂಭವನ್ನು ಆಕ್ಷೇಪ ಸಮಾಧಾನ ರೂಪವಾದ ವಿಚಾರ ವಿಶೇಷಗಳಿಂದ ಗಟ್ಟಿಗೊಳಿಸುವ ಶ್ರೀಮದ್ಭಾಗವತದ ಕಥಾಭಾಗ.

೧೩. **ಶ್ರೀರಾಮನ ಮತ್ತು ರಾಮನಾಮದ ಮಹಿಮೆ :** ಶ್ರೀ ತುಳಸೀ ರಾಮಾಯಣವನ್ನು ಹಿಡಿದು ಬರೆದ ಭಕ್ತಿರಸದ ದೇವಗಂಗಾಸ್ವರೂಪವಾದ ಪವಿತ್ರ ವಿಚಾರ.

೧೪. **ಗಣಪತಿ ಸ್ವಯಂವರ** (ಹರಿಕಥೆ)

೧೫. **ಅನಸೂಯಾಖ್ಯಾನ** (ಹರಿಕಥೆ)

೧೬. **ಧ್ರುವಾಖ್ಯಾನ** (ಹರಿಕಥೆ)

೧೭. **ಶ್ರೀ ಶಂಕರಾಚಾರ್ಯರ ಆಖ್ಯಾನ (ಹರಿಕಥೆ) :** ಈ ನಾಲ್ಕೂ ಗ್ರಂಥಗಳು ಪುರಾಣದ ಕಥೆಗಳಲ್ಲಿರುವ ಧರ್ಮನೀತಿಗಳನ್ನು ಕಣ್ಣಿಗೆ ಕಟ್ಟಿದ ಹಾಗೆ ಚೆನ್ನಾಗಿ ಬಿಚ್ಚಿ ತೋರಿಸಿ ಧರ್ಮಪೀಠದಲ್ಲಿ ನಿಂತು ಪ್ರತಿಪಾದಿಸುವುದಕ್ಕೆ ತಕ್ಕ ಪದಪದ್ಯಗಳೊಡನೆ ಸಮಗ್ರವಾಗಿ ಸಿದ್ಧಗೊಳಿಸಿರುವ ಕೀರ್ತನ – ಹರಿಕಥೆಗಳು.

೧೮. **ಮಾಂಡೂಕ್ಯಸಂವಾದ (ಉಪನಿಷತ್ತು) :** ಇದು ವೇದಾಂತವೆಂಬ ಅರಮನೆಯ ಶಿಖರದ ಮೇಲಿನ ಕಲಶದಂತಿರುವ ಮಾಂಡೂಕ್ಯೋಪನಿಷತ್ತಿನ ಶಾಂಕರಭಾಷ್ಯದ ಸರಳಾನುವಾದ. ಗುರುಶಿಷ್ಯರ ಮಾತುಗಾರಿಕೆಯ ರೂಪದಲ್ಲಿದೆ. ವೇದಾಂತದ

ವಿಚಾರದಲ್ಲಿ ಸಾವಿರಾರು ಗ್ರಂಥಗಳನ್ನು ಓದಿದರೂ ಇದರ ವಿಚಾರ ಸರಣಿಗೆ ಶರಣುಬಂದ ಹೊರತು ಗತ್ಯಂತರವಿಲ್ಲ.

೧೯. **ವೇದಾಂತ ಜೇವಾಳ (ಧಾರ್ಮಿಕ ಗ್ರಂಥ) :** ಇನ್ನೊಬ್ಬರ ಅಭಿಪ್ರಾಯದ ಬೆರಕೆ ಇಲ್ಲದೆ ಶ್ರೀ ಶಾಂಕರಭಾಷ್ಯವನ್ನು ಮಾತ್ರ ಓದಿಸು ನೇರವಾಗಿ ಶ್ರುತಿಸ್ಮೃತಿಸೂತ್ರ (ಪ್ರಸ್ಥಾನತ್ರಯ)ಗಳಿಂದಲೇ ಆರಿಸಿದ ಸಂಗತಿಗಳ ಹೊಂದಿಕೆಯಿಂದ ವೇದಾಂತದ ಮೂಲಸ್ವರೂಪದ ಮುದ್ದನ್ನು ಕನ್ನಡಿಗರ ಮುಖದ ಮುಂದಿಡುವುದಕ್ಕೆ ಇದೇ ಮೊದಲು. ಬಹುಬೆಲೆಯುಳ್ಳ ವಿಚಾರಗಳ ಎಲ್ಲ ಸೊಗಸೂ ಇದರಲ್ಲಿ ಸರಳವಾದ ರೀತಿಯಲ್ಲ ಮನಸ್ಸಿನಲ್ಲಿ ಒಡೆದು ಮೂಡುವಂತೆ ಬಳಕೆಯಾದ ಮಾತುಗಳಲ್ಲಿ ರೂಪುಗೊಂಡಿದೆ. ಸ್ವಲ್ಪದರಲ್ಲಿ ವೇದಾಂತದ ಎಲ್ಲ ಮುಖ್ಯ ತತ್ವಗಳ ಸಂಪೂರ್ಣ ಸ್ವರೂಪವನ್ನು ಕಣ್ಣಿಗೆ ಕಟ್ಟಿದ ಹಾಗೆ ಮಾಡುವ ಇದರಲ್ಲಿ ಯುಕ್ತಿಗಳ ಸೂರೆ! ಅನುಭವದ ಮಾತುಗಳ ಸುಗ್ಗಿ.

೨೦. **ಗೀತೆಯ ತಿರುಳು :** ಗೀತೆಯೊಳಗೆ ಆಳದಲ್ಲಿರುವ ಅರ್ಥವಿಶೇಷಗಳನ್ನೆಲ್ಲ ಮೇಲಕ್ಕೆ ತಂದು ಪಿಗ್ಗಿಸಿರುವ ಒಳ್ಳೆ ಸವಿಕಟ್ಟಾದ ಮಾತುಗಾರಿಕೆ. ಸ್ವಲ್ಪದರಲ್ಲಿ ಬಹಳವನ್ನು ತಿಳಿಸುವುದು.

೨೧. **ಗೀತೆಯ ಕೈಗನ್ನಡಿ :** ಪ್ರತಿಯೊಂದು ಶ್ಲೋಕ ಅದರ ಕೆಳಗೆ ಅದರ ಸೊಗಸನ್ನೆಲ್ಲ ಥಟ್ಟ ಇಳಿಸಿದ ಕನ್ನಡ ತಾತ್ಪರ್ಯ.

೨೨. **ಮಕ್ಕಳ ಕೈಗೀತೆ :** ಮೂಲದ ಅರ್ಥವನ್ನೆಲ್ಲ ಮಕ್ಕಳಿಗೆ ಕೂಡ ತಿಳಿಯುವ ಮಾತಿನ ರೂಪಕ್ಕೆ ಇಳಿಸಿರುವುದು. ಕಥೆಯ ಸಾರಾಂಶವೂ ಅಡಕವಾಗಿದೆ. ಕೆಲವು ಚಿತ್ರಗಳೂ ಇವೆ.

೨೩. **ಶ್ರೀವಿದ್ಯಾರಣ್ಯ ಕಾವ್ಯ :** ಹೊಸಬಗೆಯ ಕಲ್ಪನೆಗಳೂ ಹೊಸ ಬಗೆಯ ವರ್ಣನೆಗಳೂ ಇದ್ದು ಶಬ್ದಾರ್ಥ ಚಮತ್ಕಾರಗಳಿಂದ ಕೂಡಿ ವಿವಿಧ ವೃತ್ತರೂಪದಲ್ಲಿ ಧರ್ಮಾಭಿಮಾನವನ್ನೂ, ದೇಶಾಭಿಮಾನವನ್ನೂ, ಹುರಿಮುಂಬಿಸುವ ಲಲಿತವಾದ ಚಂಪೂಕಾವ್ಯ ಮದ್ರಾಸಿನ ವಿದ್ವತ್ ಪರೀಕ್ಷೆಗೆ ಅಂಗೀಕೃತ ಪಠ್ಯ.

೨೪. **ಭಗವದ್ಗೀತಾರ್ಥಸಾರ ವಿಚಾರ :** ಭಗವದ್ಗೀತೆಯ ಗೂಢಾರ್ಥಗಳ ಸರ್ವಸಾರವೂ ಇದರಲ್ಲಿ ತುಂಬಿ ತುಳುಕುತ್ತ ತಿಳಿವನ್ನು ಹೆಚ್ಚಿಸುವವು.

೨೫. **ಗೀತಾರ್ಥಚಂದ್ರಿಕೆ :** ಇದರಲ್ಲಿ ಅನ್ವಯಕ್ರಮವಾಗಿ ಪ್ರತಿಪದದ ಅರ್ಥದೊಡನೆ ಹಿತವೂ ಮಿತವೂ ಆದ ವಿವರಣೆಯು ರತ್ನಕ್ಕೆ ಕುಂದಣವನ್ನು ಕೆತ್ತಿದಂತೆ ಹೊಂದಿಕೊಂಡಿರುವುದು. ತೂಕದ ವಿಚಾರಗಳು ಮನಸ್ಸಿನಲ್ಲಿ ಒಡೆದು ಮೂಡುವಂತೆ ಯುಕ್ತಿಗಳೂ ಅನುಭವದ ಮಾತುಗಳೂ ಬೇಕಾದಷ್ಟಿರುವುದು ಅರ್ಥವಿಶೇಷಗಳೂ ಪಾಠಾಂತರಗಳೂ ಆಧಾರವಾಕ್ಯಗಳೂ ಕೂಡ ಸಮೃದ್ಧಿಯಾಗಿದ್ದು, ಇದು ಕಣ್ಣಿಗೂ ಮನಸ್ಸಿಗೂ ಕೂಡ ಆನಂದವನ್ನು ಸೂರೆಮಾಡುವುದು.

೨೬. **ಪಂಚದಶೀತತ್ತ್ವಾರ್ಥ :** ವೇದಾಂತವೆಂಬ ಸಮುದ್ರದ ತಲದಲ್ಲಿರುವ ದೊಡ್ಡ ದೊಡ್ಡ ಮುತ್ತುರತ್ನಗಳನ್ನೆಲ್ಲ ಇದು ಅಂಗೈಯೊಳಕ್ಕೆ ಬರಿಸುವುದು. ಮನಸ್ಸಿಗೆ ನುರಿಯುವಂಥ

ಗಡುಸಾದ ವಿಚಾರಗಳೆಂಬ ಉಕ್ಕಿನಕಡಲೆಗಳನ್ನೆಲ್ಲ ಇದು ಯುಕ್ತಿಗಳ ಉದಾಹರಣೆಗಳ ಮತ್ತು ಅನುಭವದ ಮಾತುಗಳ ಹೆಣಿಗೆಯೊಳಗೆ ಒತ್ತೆ ಹಾಕಿ ರಸವನ್ನು ಚಿಮ್ಮುವ ದ್ರಾಕ್ಷಿಯ ಹಣ್ಣುಗಳನ್ನಾಗಿ ಮಾರ್ಪಡಿಸಿರುವ ಸರಳವಾದ ವಚನರೂಪ.

೨೭. **ಕೀರ್ತನಕಂಠಾಭರಣ (ಹರಿಕಥೆ)** :. ಕರ್ನಾಟಕ ಭಾಷಾ ಪ್ರಪಂಚಕ್ಕೆ ಹೊಸಬಗೆಯ ಸಾಹಿತ್ಯವಾಗಿ ಕೀರ್ತನಕಾರರನ್ನು ಸಜೀವಗ್ರಂಥ ಭಂಡಾರವೆನಿಸುವ ಕೀರ್ತನೆ – ಹರಿಕಥೆಗಳು. ಆಯಾಕಥೆಗಳಿಗೆ ತಕ್ಕ ಧರ್ಮನೀತಿಗಳ ಪ್ರತಿಪಾದನೆಯ ಬೇರೆ ಬೇರೆ ಪೀಠಿಕೆಗಳೊಡನೆ ಸಂಪೂರ್ಣ ರಾಮಾಯಣ (ಕಥೆಗಳು) (೧೦), ಭಾರತದ ಕಥೆಗಳು (೧೦), ಭಾಗವತದ ಕಥೆಗಳು (೧೦), ಉಪನ್ಯಾಸಗಳು (೯), ಸತ್ಪುರುಷರ ಕಥೆಗಳು (೯), ಒಟ್ಟು ೫ ಭಾಗಗಳಲ್ಲಿ ೪೮ ಹರಿಕಥೆಗಳನ್ನು ಪ್ರಕಟಿಸಿದೆ.

೨೮. **ತಾರಾನಾಥ ತರ್ಕವಾಚಸ್ಪತಿ (ಜೀವನಚರಿತ್ರೆ)** : ಅಪ್ರತಿಮ ಪಂಡಿತನಾಗಿ ಉದ್ಯೋಗ ಬಲದಿಂದ ತನ್ನ ಜೀವಿಕೆಯನ್ನು ಉನ್ನತಸ್ಥಿತಿಯಲ್ಲಿಟ್ಟುಕೊಂಡು ಧರ್ಮಾರ್ಥವಾಗಿ ವಿದ್ಯೆಯನ್ನು ಪ್ರಚಾರಮಾಡಿ ಪರೋಪಕಾರದಿಂದ ಸಮಸ್ತರಾಜರನ್ನು ಬೆರಗು ಮಾಡಿದ ಚರಿತ್ರೆ.

೨೯. **ವಾಲ್ಮೀಕಿಯ ಜಯ (ಕಾದಂಬರಿ)** : ಜ್ಞಾನಬಲಕ್ಕಿಂತ ಮತ್ತು ಬಾಹುಬಲಕ್ಕಿಂತ ಪ್ರೇಮಬಲವೇ ಜಗತ್ತಿನ ನೆಮ್ಮದಿಗೆ ಕಾರಣವೆಂದು ತೋರಿಸುವ ಬಹು ಆಶ್ಚರ್ಯಕರವಾದ ಬಂಗಾಳೀ ಕಾದಂಬರಿಯ ಅನುವಾದ.

೩೦. **ಗುಣನಿರೂಪಣೆ** : ಇತಿಹಾಸದಿಂದ ಉದಾಹರಿಸಿ ಗುಣಗಳನ್ನೆಲ್ಲ ವೀರ್ಯವತ್ತಾಗಿ ಬಣ್ಣಿಸಿ ಅದರ ಏಳಿಗೆಯನ್ನು ತೋರಿಸುವ ಪ್ರಬಂಧಗಳು. ಮೈಸೂರು ದೇಶದ IV ಫಾರಮ್ಮಿಗೆ ಪಠ್ಯವಾಗಿ ಅಂಗೀಕೃತವಾದದ್ದು.

೩೧. **ನೀತಿಗಳ ನೆಲಗಟ್ಟು (ಪ್ರಬಂಧಗಳು)** : ಪುರಾಣೇತಿಹಾಸಗಳಲ್ಲಿರುವ ಒಂದೊಂದು ನೀತಿಯ ಅನೇಕ ಉದಾಹರಣೆಗಳನ್ನು ಒಂದೇ ಕಡೆಗೆ ತಂದು ಅವುಗಳನ್ನು ಬೇರೆ ಬೇರೆ ಮೆಟ್ಟಿಲುಗಳನ್ನಾಗಿ ಮಾಡಿ ನೀತಿವಿಚಾರಕ್ಕೆ ಹೊಳಪುಕೊಟ್ಟಿದೆ.

೩೨. **ಚೂಡಾಲೆ (ನಾಟಕ)** : ದಾಂಪತ್ಯ ಸಂಬಂಧವು ಪರಮಾರ್ಥಕ್ಕೆ ಸಾಧಕವಾದದ್ದನ್ನು ತೋರಿಸುವ ಮನೋಹರವಾದ ಸಣ್ಣ ನಾಟಕ.

೩೩. **ಸುಧರ್ಮಪ್ರಭಾವ (ನಾಟಕ)** : "ನಾಟಕರಚನೆಯಲ್ಲಿ ಇದು ನನ್ನ ಮೂರನೇ ಗ್ರಂಥವು: ಮೊದಲನೇದು ಸುಶೀಲಾ ಪರಿಣಯವೆಂಬ ಕಲ್ಪಿತಕಥೆಯು, ಎರಡನೆಯದು ಕೃಷ್ಣಮಹೀಶ್ವರೀ ಎಂಬ ಹೆಸರಿನ ಮೈಸೂರು ಚರಿತ್ರೆಯ ನಾಟಕ, ಮೂರನೆಯದಾದ ಈ ನಾಟಕದಲ್ಲಿ ಸಂದರ್ಭಾಂತರಗಳಿಂದ ಜನರ ಮನಸ್ಸಿನಲ್ಲಿ ಭಕ್ತಿಜ್ಞಾನವೈರಾಗ್ಯಗಳೂ ಉಜ್ಜೀವಿತವಾಗಬೇಕೆಂದು ಯತ್ನಿಸಿರಬೇಕು."

ಇದರ ಹಸ್ತಪ್ರತಿಗೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು ಸಂಭಾವಿಸಿರುವರು (ಬಹುಮಾನಿಸಿದ್ದಾರೆ.)

೩೪. **ಮಲ್ಲಾರಿಮಹಾತ್ಮೆ (ಷಟ್ಪದೀಕಾವ್ಯ)** : ವಿರೂಪಾಕ್ಷಶಾಸ್ತ್ರಿಗಳು ಕ್ರಿ.ಶ. ೧೮೭೫ರಲ್ಲಿ ಪ್ರಕಟಿಸಿದ ಗ್ರಂಥಕ್ಕೆ ಚಿದಂಬರಯ್ಯನವರು ಸೌಂದರ್ಯದರ್ಶಿನಿ ಎಂಬ ಟಿಪ್ಪಣಿ ಯೊಡನೆ ಪ್ರಕಟಿಸಿದ್ದಾರೆ. ವಿದ್ವತ್ಪೂರ್ಣವಾಗಿ ಸಂಪಾದಿಸಿದ್ದಾರೆ. ೬೪ ವರ್ಷಗಳ ಹಿಂದೆ (೧೯೩೫ಕ್ಕೆ ಮುಂಚೆ) ಸಾಂಪ್ರದಾಯಿಕ ಕವಿತ್ವದ ತಲಪರಿಗೆಯು ಎಷ್ಟು ಸಜೀವವಾಗಿತ್ತೆಂಬುದಕ್ಕೆ ಈ ಗ್ರಂಥ ಒಳ್ಳೆ ನಿಲುಗನ್ನಡಿಯಾಗಿದೆ.

೩೫. **ಮನಸ್ಸಿಗುಪದೇಶ ಮತ್ತು ಹರೇನಾಮ ಮಂತ್ರ ಪ್ರಶಂಸೆ** : ಶ್ರೀ ಸಮರ್ಥರಾಮದಾಸ ಸ್ವಾಮಿಗಳು ತಮ್ಮ ದೇಶಭಾಷೆಯಾದ ಮಹಾರಾಷ್ಟ್ರದಲ್ಲಿ ಬರೆದಿರುವ ಮನಾಚೇಶ್ಲೋಕ ಎಂಬ ಗ್ರಂಥವು ಇಲ್ಲಿರುವ ಮನಸ್ಸಿಗುಪದೇಶಕ್ಕೆ ಮೂಲ ವಾಗಿರುವುದು. ಶ್ರೀ ಸಮರ್ಥ ರಾಮದಾಸರ ಗ್ರಂಥಗಳಲ್ಲಿ ಹರೇರಾಮ ಮಹಾಮಂತ್ರ ಸೋಪಾಜಪಾರೇ ಎಂಬ ಕೊನೆಯ ಚರಣವುಳ್ಳ ಕೆಲವು ಪದ್ಯಗಳಿವೆ. ಈ ಮುದ್ದಾದ ಎರಡು ಚಿಕ್ಕಗ್ರಂಥಗಳೂ ಆತ್ಮೋನ್ನತಿಯನ್ನು ಬಯಸುವವರಿಗೆ ಅಂದವಾದ ಎರಡು ಕಣ್ಣುಗಳಂತಿರುವವು. ಇವುಗಳನ್ನು ನಾವು ಹಾಡುತ್ತಾ ಹೋದಹಾಗೆಲ್ಲಾ ನಮ್ಮ ಹೃದಯದಲ್ಲಿ ಸ್ಫೂರ್ತಿಮೂಡುತ್ತದೆ. ಸಾಂಗತ್ಯದ ರೂಪದಲ್ಲಿ ಸರಳವಾಗಿ ಕನ್ನಡಿಗರಿಗಾಗಿ ಅನುವಾದಿಸಲಾಗಿದೆ.

೩೬. **ಶಾಂತಾದೇವಿಯ ಸಂಸಾರ (ಸಾಮಾಜಿಕ ನಾಟಕ)** : ೩೮ ಪುಟಗಳು ೧೯೩೨. ಬರುಬರುತ್ತ ಜನರು ವಿಷಯಾಸಕ್ತಿಯ ಸೆಳೆತಕ್ಕೆ ಸಿಕ್ಕಿ ಮನಸ್ಸನ್ನು ಧರ್ಮದ ಕಡೆಗೆ ಎಳೆಯುವುದಕ್ಕೆ ಈಗಿನ ಕಾಲಕ್ಕೆ ನಾಟಕವೇ ಒಳ್ಳೆಯ ಉಪಕರಣ. ಇದುವರೆಗೆ ಬರೆದ ನಾಟಕಗಳೆಲ್ಲ ವೈರಾಗ್ಯಮಯ. ಈ ನಾಟಕದಲ್ಲಿ ಸ್ತ್ರೀಪಾತ್ರಕ್ಕೆ ಪ್ರಾಶಸ್ತ್ಯ ನೀಡಲಾಗಿದೆ. ಈಗಿನ ಕಾಲದಲ್ಲಿ ಹೊಸ ಹೊಸ ಬಗೆಯ ಕತೆಗಳು ಹೊಸಹೊಸ ಬೆಡಗನ್ನು ಬೀರುತ್ತಿದೆ. ಈ ನಾಟಕದಲ್ಲಿ ಹೆಂಗಸರ ಮನಸ್ಸು ಹಿಡಿತಕ್ಕೆ ದಕ್ಕಿ ಪತಿಯನ್ನು ಆತ್ಮೋನ್ನತಿ ಮಾಡಿಕೊಳ್ಳುವ ಕತೆ ಹೃದಯಂಗಮವಾಗಿ ಮೂಡಿದೆ.

೩೭. **ಗುರುಸ್ತುತಿ ಕುಸುಮಾಂಜಲಿ (ಕುಸುಮ ಷಟ್ಪದಿ ಶತಕ)** : ಪರಮಾತ್ಮನ ಲೋಕ ಕುಟುಂಬತ್ವವನ್ನು ಸಾಕ್ಷತ್ತಾಗಿ ತೋರಿಸುವಂತೆ ಅಸಂಖ್ಯಾತರಾದ ಆತ್ಮರಿಗೂ ಜಿಜ್ಞಾಸು ಗಳಿಗೂ ಅರ್ಥಾರ್ಥಿಗಳಿಗೂ ಜ್ಞಾನಿಗಳಿಗೂ ಆಶ್ರಯದಾತರಾಗಿ ಸತಾರಾ ಡಿಸ್ಟ್ರಿಕ್ಟು ಗೋಂದಾವಳಿಯನ್ನು ಭೂವೈಕುಂಠವಾಗಿ ಮಾಡಿದ್ದ ಶ್ರೀ ಬ್ರಹ್ಮಚೈತನ್ಯದ ಪರತತ್ವವನ್ನು ಅಮಾನುಷ ಲೀಲೆಗಳನ್ನು ನಿರೂಪಿಸುವ ೧೦೮ ಪದ್ಯಗಳ ಶತಕ ಕಾವ್ಯ.

೩೮. **ಜಗದ್ಗುರು ಶಂಕರಾಚಾರ್ಯ ಸ್ತೋತ್ರಮಾಲೆ** : ಭಜಗೋವಿಂದಂ ಧಾಟಿಯಲ್ಲಿ ರಚಿತವಾದ ೨೪ ಚೌಪದಿಗಳ ಪುಟ್ಟಗ್ರಂಥ. ಶಂಕರಾಚಾರ್ಯರ ಜೀವನವನ್ನು ಕುರಿತ ಈ ಸ್ತೋತ್ರವನ್ನು ಗೃಹಿಣಿಯರು ನಿತ್ಯದಲ್ಲಿ ಹಾಡಿಕೊಳ್ಳಲು ರಚಿಸಲಾಗಿದೆ.

೩೯. **ಸ್ತ್ರೀಧರ್ಮಸಂಗ್ರಹ (ಷಟ್ಪದಿಕಾವ್ಯ)** : ವಿವೇಕೋದಯ ಪತ್ರಿಕೆಯಲ್ಲಿ ಪ್ರಕಟವಾಗಿ ಪ್ರತ್ಯೇಕ ಗ್ರಂಥವನ್ನಾಗಿ ಪ್ರಕಟಿಸಿದೆ. ದೇಶೋನ್ನತಿಗೆ ಸ್ತ್ರೀಯರ ಏಳಿಗೆಯು ಅತ್ಯಗತ್ಯ ವಾದುದು ಎಂದು ಎಲ್ಲರೂ ಒಪ್ಪುವರಷ್ಟೆ. ಓದುವುದಕ್ಕೆ ಸರಾಗವಾಗಿ ಸುಲಭವಾಗಿ

ಅರ್ಥವಾಗುವ ಹೊಸಗನ್ನಡ ಷಟ್ಪದಿಗಳಲ್ಲಿ ರಚಿತವಾಗಿದೆ. ಅಗತ್ಯವಾದ ಸ್ತ್ರೀಧರ್ಮಗಳು ಬಹುಚೆನ್ನಾಗಿರುವ ಹೋಲಿಕೆಗಳು ಮತ್ತು ಸರ್ವ ಸಮ್ಮತವಾದ ದೃಷ್ಟಾಂತಗಳಿಂದ ಕೂಡಿದೆ.

೪೦. **ಶಂಕರ ಕಥಾಮೃತ** : ಅದ್ವೈತಮತ ಸ್ಥಾಪಕರಾದ ಶ್ರೀಮಚ್ಛಂಕರ ಭಗವತ್ಪಾದರುಗಳ ಅಮಾನುಷ ಚರಿತ್ರೆಯನ್ನು ಸುಲಭವಾಗಿಯೂ ಸಂಕ್ಷೇಪವಾಗಿಯೂ ಸರಳವಾಗಿಯೂ ತಿಳಿಸುವ ಸಣ್ಣ ಪುಸ್ತಕ.

೪೧. **ಮಾಧವರಾವ್ ಸಿಂಧ್ಯ** : ಮೊದಲೊಬ್ಬ ಸಾಧಾರಣವಾಗಿದ್ದು ತನ್ನ ಸಹಜವಾದ ಶೌರ್ಯಧೈರ್ಯಾದಿ ಗುಣಗಳಿಂದ ಅತ್ಯಂತ ಪ್ರಖ್ಯಾತಿಯನ್ನು ಹೊಂದಿ ದೇಶ ಹಿತಕ್ಕಾಗಿ ಹೋಗಿ ರಾಜನೀತಿಯಲ್ಲಿ ಇಂಗ್ಲಿಷರನ್ನು ಕೂಡ ಮೆಚ್ಚಿಸಿ ಹಿಂದೂ ಸ್ಥಾನವನ್ನು ಆಳಿದ ಮರಾಠಾ ಸರದಾರನ ಸಂಕ್ಷಿಪ್ತ ಚರಿತ್ರೆ.

೪೨. **ಕಾಲಾಂತರ (ಕಾದಂಬರಿ)** : ಇದೊಂದು ಪ್ರಪಂಚ ವ್ಯವಹಾರದ ಮರ್ಮವನ್ನು ತಿಳಿಸುವ ತಿಳಿಗನ್ನಡದ ಹೊಸಕಥೆ. ಓದುವುದಕ್ಕೆ ಪ್ರಾರಂಭಿಸಿದವರು ಮುಗಿಸುವವರೆಗೂ ಕೈ ಬಿಡುವುದಿಲ್ಲ.

೪೩. **ಮನಶ್ಶಿಕ್ಷಣೆ (೧೯೦೫)** : ಕಡೂರಿನ ಉಪಾಧ್ಯಾಯರ ಸಂಘದಲ್ಲಿ ಮಾಡಿದ ಉಪನ್ಯಾಸ ಶ್ರೀ ಕೃಷ್ಣಸೂಕ್ತಿ ಪತ್ರಿಕೆಯಲ್ಲಿ ಅಚ್ಚಾಗಿ ಪ್ರತ್ಯೇಕವಾಗಿ ಪರಿಷ್ಕರಿಸಲ್ಪಟ್ಟಿದ್ದು. ೧೯೦೮ರಲ್ಲಿ ಪ್ರಕಟಿತ. ಮನಶ್ಶಿಕ್ಷಣ (ಟ್ರೈನಿಂಗ್ ದಿ ಮೈಂಡ್) ಎಂಬ ಮಾತಿನ ಅಭಿಪ್ರಾಯ – ಮನಶಿಕ್ಷಣೆಗೂ ವಿದ್ಯಾಭ್ಯಾಸಕ್ಕೂ ಸಂಬಂಧ – ಮನಶ್ಶಿಕ್ಷಣೆಯು ಕೌಶಲ್ಯದ ಹೆಚ್ಚುಗಾರಿಕೆ ಬೋಧಕರ ವಿಷಯದಲ್ಲಿ ಪೂರ್ವಿಕರ ಅಭಿಪ್ರಾಯ – ಮನಶಿಕ್ಷಣಕ್ಕಾಗಿ ಇರಬೇಕಾದ ಪಾಠಕ್ರಮದ ಅಗತ್ಯ – ಸ್ವಶಿಕ್ಷಣೆಯ ಕೆಲವು ನಿಯಮಗಳು ಇತ್ಯಾದಿ ವಿಷಯಗಳಿವೆ.

೪೪. **ಭಕ್ತಿಗೀತಾವಳಿ (ಕೀರ್ತನೆಗಳು)** : ಗಾನರೂಪದಲ್ಲಿ ಭಕ್ತಿಜ್ಞಾನ ವೈರಾಗ್ಯ ಪ್ರಧಾನವಾದ ಪರಮಾತ್ಮನ ಗುಣಗಳೂ ಲೀಲೆಗಳೂ ಸರ್ವದೇವತಾ ಸ್ವರೂಪವೂ ವಾಚಕರಲ್ಲಿ ಬಿಂಬಿಸಿ ಮನಸ್ಸು ತನ್ಮಯವಾಗಿ ಹೃದಯದಲ್ಲಿ ಬತ್ತಿಕೊಂಡು ಎಲ್ಲಿಯೋ ತಳಕ್ಕೆ ಹತ್ತಿ ಕೊಂಡು ಹೋಗಿರುವ ಆನಂದ ರಸವು ಉಕ್ಕಿ ಹೊರಸೂಸಲೆಂದು ಈ ಗ್ರಂಥ ರಚಿಸಿದೆ.

೪೫. **ಕೃಷ್ಣಮಹೀಶ್ವರಿ (೧೯೧೦) (ನಾಟಕ)** : ಪುರಾಣ ಕಥೆಗಳಿಗಿಂತಲೂ ಐತಿಹಾಸಿಕವಾದ ಸಂಗತಿಗಳೇ ಈಗಿನ ಜನರಿಗೆ ವಿಶೇಷವಾಗಿ ಆದರಣೀಯವಾಗಿಯೂ ಜನಾಂಗದ ಅಭ್ಯುದಯಕ್ಕೆ ಅತ್ಯಗತ್ಯವಾಗಿಯೂ ಇರುವುದೆಂದು ಕಂಡುಬಂದುದರಿಂದ ಅಂತಹ ಐತಿಹಾಸಿಕವಾದ ನಾಟಕವೊಂದನ್ನು ಬರೆಯಬೇಕೆಂದು ಅಪೇಕ್ಷಿಸಿ ಮಾತೃಭೂಮಿ ಯಾದ ಮೈಸೂರು ದೇಶದ ಚರಿತ್ರ ಸೂಚಿತವಾದ ಸಂಗತಿಗಳನ್ನೆಲ್ಲಾ ಅಡಕಮಾಡಿ ಹೊಸಬಗೆಯ ಸಂವಿಧಾನದಿಂದ ಸಾಲಂಕೃತವಾಗಿರುವಂತೆ ರಚಿಸಲಾಗಿದೆ.

೪೬. **ನೀತಿಸಾರ (ಕಂದಪದ್ಯಗಳು)** : ಪ್ರಪಂಚದ ಧರ್ಮವನ್ನು ತಿಳಿಯುವುದು ಮುಖ್ಯವಲ್ಲವೇ? ಇದರಲ್ಲಿ ಸುಲಭವಾದ ಕಂದಪದ್ಯಗಳು, ಸರಳವಾದ ಶೈಲಿ ಬಳಕೆ

ಯಿಂದ ಉಪಮಾನಗಳು, ಅವಶ್ಯಕವಾದ ನೀತಿಗಳು, ಕರ್ನಾಟಕ ವಿದ್ಯಾವರ್ಧಕ ಸಂಘದಿಂದ ಪ್ರಕಟಿತವಾಗಿದೆ.

೪೭. **ವಿದ್ಯಾರಣ್ಯಾಖ್ಯಾನ (ಹರಿಕಥೆ)** : ವಿದ್ಯಾರಣ್ಯರ ಜೀವನ ಮತ್ತು ಸಾಧನೆಗಳನ್ನು ಕೀರ್ತನಾ ರೂಪದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಸ್ವಧರ್ಮ ಪತ್ರಿಕೆಯಲ್ಲಿ ಮೊದಲು ಪ್ರಕಟವಾಗಿದೆ.

೪೮. **ಉತ್ತರಗೋಗ್ರಹಣ (ಹರಿಕಥೆ)** : ಮಹಾಭಾರತದ ಕಥೆಯನ್ನು ಕೀರ್ತನೆ ದೃಷ್ಟಾಂತಗಳಿಂದ ಕೀರ್ತನರೂಪವಾಗಿ ಬರೆಯಲಾಗಿದೆ.

೪೯. **ಶ್ರೀ ಶಂಕರಾಚಾರ್ಯರ ಆಖ್ಯಾನ (೧೯೨೬) (ಹರಿಕಥೆ)** : ವಿಶೇಷವಾಗಿ ಮಾಧವೀಯ ಶಂಕರ ವಿಜಯವನ್ನೇ ಹಿಡಿದು ಆಖ್ಯಾನ ರಚಿಸಲಾಗಿದೆ. ಈ ಗ್ರಂಥವನ್ನು ಕೀರ್ತನಕಾರರಿಗೋಸ್ಕರವಾಗಿ ಬರೆದಿದ್ದಾದರೂ ಇದರ ಉಪಯೋಗವು ಕೀರ್ತನಕಾರರಿಗೆ ಮಾತ್ರವೇ ಅಲ್ಲದೆ, ಎಲ್ಲರೂ ಓದುವ ಹಾಗೆ ತಿಳಿಗನ್ನಡದ ಕಾವ್ಯವಾಗಿ ಬರೆಯಲಾಗಿದೆ. ನಡುನಡುವೆ ವಿಷಯಗಳ ವಿವರಣೆಯನ್ನು ಬರೆಯಲಾಗಿದೆ. ಎಲ್ಲರೂ ಸ್ವಕಂಠದಿಂದ ಹಾಡಿ ಆನಂದವನ್ನು ಪಡೆಯುವ ಗ್ರಂಥ.

೫೦. **ಷಟ್ಪದಿ ಝೇಂಕಾರ (ಸ್ತೋತ್ರ)** : ಶ್ರೀಶಂಕರಾಚಾರ್ಯರ ವಿಷ್ಣುಷಟ್ಪದೀ ಸ್ತೋತ್ರದ ಆರು ಶ್ಲೋಕಗಳ ಅನುವಾದದ ಕಿರುಹೊತ್ತಿಗೆ, ತಾತ್ಪರ್ಯದೊಡನೆ ಶ್ರೀಶಂಕರ ಜಗದ್ಗುರು ಸೇವಾಸಂಘ ಹೊನ್ನವಳ್ಳಿ ಇವರು ಪ್ರಕಟಿಸಿದ್ದಾರೆ. ೧೯೨೯ರಲ್ಲಿ ಪ್ರಕಟಿತ.

(ಈ ಲೇಖಕನಿಗೆ ಉಳಿದ ಪುಸ್ತಕಗಳ ವಿವರ ಸಿಕ್ಕಿಲ್ಲ)

---

* ದಿನಾಂಕ ೨೮-೧೨-೨೦೧೩ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲೂ ನೀಡಿದ ಉಪನ್ಯಾಸ.

ಅನುಬಂಧ – ೧

# ಹೊಸಕೆರೆ ಚಿದಂಬರಯ್ಯನವರು ರಚಿಸಿದ ಗ್ರಂಥಗಳು

೧. **ಕಾದಂಬರಿ (೩)**

೧) ಕಾಲಾಂತರ, ೨) ಮೈತ್ರೇಯಿ, ೩) ವಾಲ್ಮೀಕಿಯ ಜಯ

೨. **ನಾಟಕ (೮)**

೧) ಸುಶೀಲಾ ಪರಿಣಯ, ೨) ಕೃಷ್ಣಮಹೀಶ್ವರೀ. ೧೯೧೦, ೩) ಸುಧರ್ಮ ಪ್ರಭಾವ, ೪) ಕಲಿಸಂತರಣ, ೫) ನವಿನಕಲ್ಪ, ೬) ಹಣ್ಣಾದ ಹಂಬಲಿಕೆ, ೭) ಚೂಡಾಲೆ, ೮) ಶಾಂತಾದೇವಿಯ ಸಂಸಾರ.

೩. **ನೀತಿ ಗ್ರಂಥ (೫)**

೧) ಗುಣ ನಿರೂಪಣೆ, ೧೯೨೬
೨) ನೀತಿಗಳ ನೆಲಗಟ್ಟು, (ಭಾಗ–೧ ಮತ್ತು ೨) ೧೯೨೬ ೧೯೫೪ ಎ.ಮು.)
೩) ರಾಮಕೃಷ್ಣ ಪರಮಹಂಸರ ಸೂಕ್ತಿಮಾಲೆ ಭಾಗ ೧, ೨ (ಗದ್ಯ)
೪) ಸ್ತ್ರೀಧರ್ಮ ಸಂಗ್ರಹ (೧೯೦೬) (ಪದ್ಯ)
೫) ನೀತಿಸಾರ, ೧೯೦೬

೪. **ಧಾರ್ಮಿಕ ಗದ್ಯ ಗ್ರಂಥಗಳು (೧೫)**

೧) ಜೀವನ್ಮುಕ್ತಿ ವಿವೇಕ (ಗದ್ಯ), ೧೯೧೮, ೧೯೨೬ (ಎ.ಮು)
೨) ವೇದಾಂತ ವಿಚಾರದ ಗುಟ್ಟು (ಗದ್ಯ)
೩) ರಾಮನಾಮದ ಮಹಿಮೆ (ಗದ್ಯ)
೪) ಆರ್ಯಧರ್ಮ ಪ್ರದೀಪ (ಗದ್ಯ)
೫) ಆತ್ಮಶಕ್ತಿಯ ತೇಜಸ್ಸು (ಗದ್ಯ)
೬) ಪಂಚದಶಿ ತತ್ವಾರ್ಥ (ಗದ್ಯ)
೭) ಈಶಸಾರ
೮) ಆರ್ಯ ಮತಸಾರ
೯) ರಾಜಭಕ್ತಿ

೧೦) ಶ್ರೀಶಂಕರ ಕಥಾಮೃತ
೧೧) ವೇದಾಂತದ ಜೀವಾಳ (ಗದ್ಯ), ೧೯೩೪
೧೨) ರಾಸಕ್ರೀಡೆ
೧೩) ಮಾಂಡೂಕ್ಯ ಸಂವಾದ ೧೯೨೮
೧೪) ವೇದಾಂತ ರೂಪರೇಖೆ
೧೫) ಬ್ರಹ್ಮಸೂತ್ರಗಳ ಬೆಳಕು (೧೯೩೭)

**೫. ಶಿಕ್ಷಣ ಗ್ರಂಥ (೭)**

೧) ಗಣಿತಾಬ್ಜಭಾಸ್ಕರ
೨) ಚರಿತ್ರ ಚಿಂತಾಮಣಿ
೩) ಉಪಾಧ್ಯಾಯರ ಯೋಗ್ಯತೆಗಳು
೪) ಮನಶ್ಶಿಕ್ಷಣ
೫) ಬೋಧನಾಕ್ರಮ
೬) ಬೋಧನೆಯ ಸ್ವಭಾವ
೭) ವಸ್ತು ಪ್ರದರ್ಶನ

**೬. ಗೀತಾಸಾಹಿತ್ಯ (೬)**

೧) ಭಗವದ್ಗೀತಾಸಾರ ವಿಚಾರ, ೧೯೨೮, ೧೯೬೫ (೧೯೨೬ ಎ.ಮು), ೧೯೧೭ (ಮೊ.ಮು)
೨) ಗೀತಾರ್ಥವಿವರಣೆ
೩) ಗೀತೆಯ ಕೈಗನ್ನಡಿ (೧೯೮೮)
೪) ಮಕ್ಕಳ ಕೈಗೀತೆ
೫) ಗೀತೆಯ ತಿರುಳು ೧೯೩೨ (೧೯೪೯)
೬) ಗೀತಾರ್ಥಚಂದ್ರಿಕೆ (೧೯೨೯)

**೭. ಜೀವನ ಚರಿತ್ರೆ (೭)**

೧) ತಾರಾನಾಥ ತರ್ಕ ವಾಚಸ್ಪತಿ, ೧೯೨೭
೨) ಮಾಧವರಾವ ಸಿಂಧ್ಯ
೩) ಬ್ರಹ್ಮಾನಂದರು
೪) ಝಾಂಸಿ ಲಕ್ಷ್ಮೀಬಾಯಿ, ೧೯೬೫ (ಮೂ.ಮು)
೫) ಭರತನ ಬಂಧುಪ್ರೇಮ
೬) ಭರತಖಂಡದ ಜೀವಜ್ಯೋತಿಗಳು, ೧೯೨೮ (೨ನೇ ಮು) ೨೦೧೦ (೬ನೆ ಮು) (೧೯೨೩ ಮೊ.ಮು) ಭಾಗ ೧ ಮತ್ತು ೨
೭) ಮಾರುತಿಯ ಚರಿತ್ರೆ

೮. **ಕಾವ್ಯ (೩)**

೧) ಶ್ರೀ ವಿದ್ಯಾರಣ್ಯ ಕಾವ್ಯಂ (ಸ್ವರಚಿತ)
೨) ಅನುಭವಾಮೃತ ಟೀಕೆ (ಸಂಪಾದನೆ)
೩) ಮಲ್ಲಾರಿ ಮಹಾತ್ಮೆ ಟೀಕೆ (ಸಂಪಾದನೆ)

೯. **ಸ್ತೋತ್ರ ಸಾಹಿತ್ಯ (೧೧)**

೧) ಪರಮಾತ್ಮಸ್ತುತಿ (ಪದ್ಯ – ಅನುವಾದ)
೨) ಗುರುಸ್ತುತಿ ಕುಸುಮಾಂಜಲಿ (ಷಟ್ಪದಿ)
೩) ನೀತಿಸಾರ
೪) ಹರೇರಾಮ ಮಂತ್ರ ಪ್ರಶಂಸೆ (ಸಾಂಗತ್ಯ)
೫) ಉಪದೇಶ ಪಂಚಕ
೬) ಷಟ್ಪದೀ ಝೇಂಕಾರ (ಶಂಕರಸ್ತುತಿ)
೭) ಭಕ್ತಿ ಗೀತಾವಳಿ (ಕೀರ್ತನೆಗಳು)
೮) ಭಕ್ತಿ ದೀಪಿಕೆ (ಕವಿತಾ ಸಂಗ್ರಹ) ೧೯೧೦
೯) ಶ್ರೀ ಶಂಕರ ಸ್ತೋತ್ರಮಾಲೆ (ಪದ್ಯ)
೧೦) ಮನಸ್ಸಿಗೆ ಉಪದೇಶ (ಮರಾಠಿಯಿಂದ ಅನುವಾದ) (ಸಾಂಗತ್ಯ)
೧೧) ಅದ್ವೈತರಸಮಂಜರಿ (ಶ್ರೀನಲ್ಲಾ ಕವಿಯ ಸಂಸ್ಕೃತ ಗ್ರಂಥದ ಅನುವಾದ ಪದ್ಯಗಳು, ಅಧ್ಯಾತ್ಮ ಪ್ರಕಾಶದಲ್ಲಿ ಪ್ರಕಟಿತ)

೧೦. **ಕೀರ್ತನ ಸಾಹಿತ್ಯ ಬಿಡಿ ಪ್ರಕಟಣೆಗಳು (೫)**

೧) ಶ್ರೀ ಶಂಕರಾಚಾರ್ಯರ ಆಖ್ಯಾನ, ೧೯೨೮
೨) ಧ್ರುವಾಖ್ಯಾನ
೩) ಉತ್ತರ ಗೋಗ್ರಹಣ
೪) ಶ್ರೀ ವಿದ್ಯಾರಣ್ಯಾಖ್ಯಾನ
೫) ಅನಸೂಯಾಖ್ಯಾನ

ಕೀರ್ತನಕಂಠಾಭರಣ – ೫ ಭಾಗಗಳು

೬) ಸಂಪೂರ್ಣ ರಾಮಾಯಣ (೧೦ ಕಥೆಗಳು), ೧೯೨೮, ಭಾಗ – ೧
೭) ಭಾರತದ ಕೆಲವು ಕಥೆಗಳು (೯ ಕಥೆಗಳು), ೧೯೩೦, ಭಾಗ – ೨
೮) ಭಾಗವತದ ಕೆಲವು ಕಥೆಗಳು (೧೦ ಕಥೆಗಳು), ೧೯೩೧, ಭಾಗ – ೩
೯) ಕೆಲವು ಉಪಾಖ್ಯಾನಗಳು (೯ ಕಥೆಗಳು), ೧೯೩೧, ಭಾಗ – ೪
೧೦) ಕೆಲವು ಸತ್ಪುರುಷರ ಕಥೆಗಳು (೯ ಕಥೆಗಳು), ೧೯೩೧, ಭಾಗ – ೫

ಒಟ್ಟು ಅಚ್ಚಾದ ಗ್ರಂಥಗಳು (೭೫)

❊ ❊

## ಅನುಬಂಧ – ೨

# ಹೊಸಕೆರೆ ಚಿದಂಬರಯ್ಯನವರ ಲೇಖನಗಳು

(ಅಧ್ಯಾತ್ಮಪ್ರಕಾಶ ಮಾಸಪತ್ರಿಕೆ)

೧. ಭರತಖಂಡದ ಮುಖ್ಯಧನ (ಪ್ರಬಂಧ), ೧೯೨೩, ಪುಟ ೧೯–೨೪.

೨. ಅಪ್ಪಯ್ಯನವರ ವೃತ್ತಾಂತ (ಜೀವನ ಚರಿತ್ರೆ), ೧೯೨೩ ಮೇ ಮತ್ತು ಜುಲೈ, ಪುಟ ೫೪–೫೬, ೮೬–೮೮.

೩. ಸಮಸ್ಯಾ ಪೂರಣ (ಕವಿತೆ), ೧೯೨೩ ಮೇ, ಪುಟ ೮೦.

೪. ಕಾವೇರಿ ಸ್ತೋತ್ರ (ಕವಿತೆ), ೧೯೨೩ ಸೆಪ್ಟೆಂಬರ್, ಪ್ರ ೧೩೩–೧೩೪.

೫. ಪಂಪಾವಿರೂಪಾಕ್ಷಸ್ತೋತ್ರ (ಕವಿತೆ), ೧೯೨೩ ನವೆಂಬರ್, ಪುಟ ೨೨೮.

೬. ದಾಸಬೋಧಸಾರ (ಗ್ರಂಥಪರಿಚಯ), ೧೯೨೩ ಅಕ್ಟೋಬರ್, ನವೆಂಬರ್, ೧೯೨೪ ಜನವರಿ, ಫೆಬ್ರವರಿ ಸಂಚಿಕೆಗಳು, ಪುಟ. ೧೬೯–೧೭೨, ೧೮೪–೧೮೮, ೨೪೦–೨೪೨, ೨೬೬–೨೬೮.

೭. ಜಗತ್ತಿನಲ್ಲಿರುವ ದೇವರಸ್ವರೂಪ (ಪ್ರಬಂಧ), ೧೯೩೧ ಸೆಪ್ಟೆಂಬರ್, ಪುಟ ೮–೧೨.

೮. ಸಂಸಾರವಲ್ಲೇನು ಸಾರ (ಪ್ರಬಂಧ), ೧೯೩೩ ಅಕ್ಟೋಬರ್, ಪುಟ ೫೭–೫೯, ೧೯೩೩ ನವೆಂಬರ್, ಪುಟ ೯೮–೧೦೧.

೯. ಶಾಂತಾದೇವಿಯ ಸಂಸಾರ (ನಾಟಕ), ೧೯೩೨ ಮಾರ್ಚ್, ಏಪ್ರಿಲ್, ಮೇ, ಜೂನ್, ಜುಲೈ ಸಂಚಿಕೆಗಳಲ್ಲಿ.

೧೦. ಕಾಲಮಹಿಮೆ (ಕವಿತೆ), ೧೯೩೧ ಅಕ್ಟೋಬರ್, ಪುಟ ೪೭.

೧೧. ತಿಳುವಳಿಕೆಯ ಮಾತು (ಕವಿತೆ), ೧೯೩೧ ಡಿಸೆಂಬರ್, ಪುಟ ೧೨೭.

೧೨. ಮೂಢಜನರ ಮೂತತ್ವ (ಕವಿತೆ), ೧೯೨೩ ಏಪ್ರಿಲ್, ಪುಟ ೧೫.

೧೩. ಗಮನ ಮತ್ತು ಮನನ (ಪ್ರಬಂಧ), ೧೯೩೨ ಜನವರಿ, ಪುಟ ೧೭೬–೧೮೧.

೧೪. ಶ್ರೀಮದವಧೂತಾನಂದಸರಸ್ವತೀ ಸ್ವಾಮಿ (ಜೀವನ ಚರಿತ್ರೆ), ೧೯೩೨ ಫೆಬ್ರವರಿ.

೧೫. ರಂತಿದೇವ (ಜೀವನಚರಿತ್ರೆ), ೧೯೩೧ ಅಕ್ಟೋಬರ್, ನವೆಂಬರ್.

(ಶ್ರೀ ರಾಮಮೋಹನ್ ಅವರು ಲೇಖನ ವಿವರ ನೀಡಿದ್ದಾರೆ)

(ಕನ್ನಡನಾಡಿನ ಪತ್ರಿಕೆಗಳಿಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ಸಂಗ್ರಹಿಸಬೇಕಾಗಿದೆ)

❊ ❊

ಅನುಬಂಧ – ೩

# ಹೊಸಕೆರೆ ಚಿದಂಬರಯ್ಯನವರು ಗ್ರಂಥ ರಚಿಸಿದ ಸಂಚರಿಸಿದ–ವಾಸಿಸಿದ ಸ್ಥಳಗಳು

೧. ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಹೋಬಳಿಯ ಹೊಸಕೆರೆ ಜನ್ಮಸ್ಥಳ, ಜನನ ೨೮–೧೨–೧೮೭೦.

೨. ಬಾಲ್ಯ : ಹೊಸಕೆರೆ ಮತ್ತು ಹಿರಿಯೂರು.

೩. ಸಂಸ್ಕೃತಾಭ್ಯಾಸ : ಹಿರಿಯೂರು, ಬೆಂಗಳೂರು ಊರುಗಳಲ್ಲಿ.

೪. ಶಿಕ್ಷಕವೃತ್ತಿ : ಕಡೂರು, ದಾವಣಗೆರೆ, ಧಾರವಾಡ.

೫. ಗುರುಸೇವೆ : ಕುರ್ತುಕೋಟಿ, ಗೋಂದಾವಳಿ ಮಹಾರಾಜರ ಬಳಿ ಮತ್ತು ಮಹಾಭಾಗವತರಲ್ಲಿ

೬. ಗ್ರಂಥರಚನೆ : ಬೆಂಗಳೂರು, ವಿದುರಾಶ್ವತ್ಥ, ಟಿ. ನರಸೀಪುರ, ತುಮಕೂರು, ದಾವಣಗೆರೆ, ಕಡೂರು, ಧಾರವಾಡ, ಹಾವೇರಿ, ಹಿರಿಯೂರು ಕುರ್ತುಕೋಟಿ (ಗ್ರಂಥಗಳಲ್ಲಿ ಉಲ್ಲೇಖಿಸಿದ ಪ್ರಕಾರ)

೭. ನಿಧನ : ಟಿ. ನರಸೀಪುರ (೧೯–೪–೧೯೩೮)

೮) ಉಪನ್ಯಾಸಗಳು : ನಾಡಿನ ನಾನಾ ಭಾಗಗಳಲ್ಲಿ ವಿಶೇಷವಾಗಿ ದಾವಣಗೆರೆ, ಕಡೂರು, ಹೊಳೆನರಸೀಪುರ, ಬೆಂಗಳೂರು, ತುಮಕೂರು, ಹೊನ್ನವಳ್ಳಿ (ತಿಪಟೂರು).

**ಕೆಲವು ವಿಳಾಸಗಳು**

(ಚಿದಂಬರಯ್ಯನವರ ಬಗ್ಗೆ ಸಂಶೋಧನೆ ನಡೆಸುವವರ ಗಮನಕ್ಕಾಗಿ) ಪರಮಾರ್ಥ ಗ್ರಂಥಮಾಲೆ (ಪರಮಾರ್ಥ ಪತ್ರಿಕೆಯಲ್ಲಿ ಪ್ರಕಟವಾದ ಗ್ರಂಥಗಳು) ಯಲ್ಲಿ ೧೩ ಗ್ರಂಥಗಳನ್ನು ಪ್ರಕಟಿಸಿದವರ ವಿಳಾಸ

೧) ಪರಮಾರ್ಥ ಕಾರ್ಯಾಲಯ, ೧೪೫, ಸುಲ್ತಾನಪೇಟೆ, ಬೆಂಗಳೂರು.

೨) ಎಚ್. ಚಿದಂಬರಯ್ಯ, ಶ್ರೀ ರಾಮಮಂದಿರ, ಕುರ್ತುಕೋಟಿ, ಧಾರವಾಡ ಜಿಲ್ಲೆ.

೩) ಬೆಂಗಳೂರಿನಲ್ಲಿ ವಾಸವಿದ್ದ ಸ್ಥಳ : ಎಚ್. ಚಿದಂಬರಯ್ಯ, ೨೭, ಶಂಕರಮಠದ ಬೀದಿ, ಶಂಕರಪುರ, ಬೆಂಗಳೂರು (೧೯೧೮ ರಿಂದ ೧೯೨೬ರ ವರೆಗೆ)

೨) ಶಾಲಾ ವಿದ್ಯಾಭ್ಯಾಸದ ಕಾಲದಲ್ಲಿ : ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿ ಜೋಬ್ಬೂರುರಂಗನ ಮನೆತನದವರ ಮನೆಯಲ್ಲಿ ವಾಸ.

**ಲೇಖನಗಳನ್ನು ಬರೆದ ಪತ್ರಿಕೆಗಳು**

ಅಧ್ಯಾತ್ಮಪ್ರಕಾಶ (ಮಾಸಪತ್ರಿಕೆ), ಸ್ವಧರ್ಮ (ಮಾಸ), ಭಕ್ತಬಂಧು (ಮಾಸ), ಪರಮಾರ್ಥ (ಮಾಸ) – ವಿವೇಕಾಭ್ಯುದಯ (ಮಾಸ), ವಿದ್ಯಾದಾಯಿನಿ (ಮಾಸ ಪತ್ರಿಕೆ), ಕೃಷ್ಣಸೂಕ್ತಿ ಇತ್ಯಾದಿ ನಾಡಿನ ನಾನಾ ಪತ್ರಿಕೆಗಳಿಗೆ ಲೇಖನ ಕೊಟ್ಟಿದ್ದಾರೆ.

* *

ಅನುಬಂಧ – ೪

## ಹೊಸಕೆರೆ ಚಿದಂಬರಯ್ಯನವರ ಬಗ್ಗೆ ಆಕರ ಸಾಹಿತ್ಯ


೧. ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳ (ಸ್ವಹಸ್ತ) ಆತ್ಮಚರಿತ್ರೆ ಮತ್ತು ಕಾರ್ಯಾಲಯ ಇತಿಹಾಸ ಭಾಗ – ೧ (ಗ್ರಂಥ)
೨೦೦೬, (ಮೊ.ಮು) ೫೦೧ ಪುಟಗಳು, ೩೦೦ ರೂ. ಪ್ರ: ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.

೨. ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳ (ಸ್ವಹಸ್ತ) ಆತ್ಮಚರಿತ್ರೆ ಮತ್ತು ಕಾರ್ಯಾಲಯ ಇತಿಹಾಸ ಭಾಗ – ೨ (ಗ್ರಂಥ) ೨೦೦೭, (ಮೊ.ಮು) ೩೫೦ ಪುಟಗಳು, ಪ್ರ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.

೩. ಆಧ್ಯಾತ್ಮ ಪ್ರಕಾಶ ಕಾರ್ಯಾಲಯದ ಇತಿಹಾಸ, ೧೯೭೩ (ಮೊ.ಮು) (ಗ್ರಂಥ) (ಇದೇ ಗ್ರಂಥ ಶ್ರೀ ಗುರುಚರಣಾಮೃತ ಎಂಬ ಹೆಸರಿನಲ್ಲಿ ಎರಡನೇ ಮುದ್ರಣವಾಗಿ ೧೯೯೭ರಲ್ಲಿ ಪ್ರಕಟವಾಗಿದೆ)
ಲೇ: ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ, ಪ್ರ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.

೪. ಶ್ರೀ ಗುರುಚರಿತಾಮೃತ – ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ (ಗ್ರಂಥ) ಪ್ರ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, ೧೯೯೭.

೫. ಕೆಲ್ಲಂಗೆರೆ ತಿಮ್ಮಪ್ಪದಾಸರು (ಜೀವನ ಮತ್ತು ಕೃತಿಗಳು) (ಗ್ರಂಥ)
೨೦೦೭ (ಮೊ.ಮು), ಪುಟ ೧೮೪
ಸಂ: ಪ್ರೊ. ಜಿ. ಅಶ್ವತ್ಥ ನಾರಾಯಣ ಮತ್ತು ಇತರರು
ಪ್ರ: ಶ್ರೀನಿವಾಸ ಪುಸ್ತಕ ಪ್ರಕಾಶನ, ಬಸವನಗುಡಿ, ಬೆಂಗಳೂರು – ೪

೬. ಕರ್ಣಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯನವರು (ಲೇಖನ) ಲೇ: ಟಿ.ಆರ್. ಅನಂತರಾಮು
ಆಕರ : ಸ್ವರ್ಣಮಹೋತ್ಸವ ಸಂಚಿಕೆ (ಪ್ರಕಟಣೆ ೧೦–೩–೧೯೯೬)
ಉಲುಚುಕಮ್ಮೆ ಬ್ರಾಹ್ಮಣ ಮಹಾಸಭಾ (ರಿ) ವಿಲ್ಸನ್ ಗಾರ್ಡನ್, ಬೆಂ. (ಪುಟ ೬೫–೬೭, ೩ ಪುಟಗಳು)

೭. ಸುವರ್ಣ ಮಹೋತ್ಸವ ಸಂಸ್ಮರಣ ಸಂಚಿಕೆ
ಹೊನ್ನವಳ್ಳಿ ಶ್ರೀ ಶಂಕರಜಗದ್ಗುರು ಸೇವಾ ಸಂಘ, ತಿಪಟೂರು ಪ್ರಕಟಣೆ: ೧೯೭೫.

೮. ಮರೆಯಲ್ಲುಳಿದ ಮಹಾನ್ ಲೇಖಕ – ಹೊಸಕೆರೆ ಚಿದಂಬರಯ್ಯ (ನೆನಪು) (ಲೇಖನ)
ಲೇ : ಎಂ.ಎಸ್. ರಜನೀಕಾಂತ್
ಆಕರ : ಹಿರಿಯ ಪ್ರಜೆಗಳು (ಮಾಸಪತ್ರಿಕೆ)
ಸಂ. ೩– ಸಂ. ೧೨, ಮೇ ೨೦೦೪ ವಿಶೇಷ ಸಂಚಿಕೆ
ಪುಟ ೧೨–೧೩, ೨ ಪುಟಗಳು
೯. ಉಲುಚುಕಮ್ಮೆ (ಲೇಖನ)
ಲೇ: ಸುರೇಶ ಮೂನ
ಆಕರ : ಸ್ವರ್ಣಮಹೋತ್ಸವ ಸಂಚಿಕೆ, ಉಲುಚಕಮ್ಮೆ ಬ್ರಾಹ್ಮಣ ಮಹಾಸಭಾ
ವಿಲ್ಸನ್‌ಗಾರ್ಡನ್, ಪುಟ ೭೧–೭೨, ೨ ಪುಟಗಳು.
೧೦. ಹೊಸಕೆರೆ ಚಿದಂಬರಯ್ಯ (ಲೇಖನ)
ಸಂ: ಡಾ. ಬಿ. ನಂಜುಂಡಸ್ವಾಮಿ
ಆಕರ : ಅಖಿಲಭಾರತ ೭೯ನೇ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು
೨೦೦೨ ವಿಶೇಷ ಸಂಚಿಕೆ ಕಲ್ಪಸಿರಿ, ಪುಟ ೪೭೭ – ೪೭೯
(ಕನ್ನಡ ವಿಷಯ ವಿಶ್ವಕೋಶದ ಲೇಖನವೇ ಇಲ್ಲಿ ಪುನರ್ ಮುದ್ರಿತ)
೧೧. ಬರಹಗಾರನ ಬದುಕು (ಆತ್ಮಕಥನ) ಅನಕೃ (ಟಿಪ್ಪಣಿ)
೧೯೭೨ (೧), ಪುಟ ೩೨–೩೩, ರೂ. ೬೦
ಪ್ರ: ವಿಶ್ವಭಾರತಿ ಪ್ರಕಾಶನ
ಸಾಹಿತ್ಯ ಸದನ ಖಾರೆಬಾಂದ – ಮಡಗಾಂವ, ಗೋವಾ
೧೨. ಕರ್ನಾಟಕ ವಿಷಯ ವಿಶ್ವಕೋಶ (ಲೇಖನ)
ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ. ೧೯೭೯
ಲೇ : ಚಿದಂಬರಯ್ಯ ಹೊಸಕೆರೆ (೧೮೭೦–೧೯೩೮)
ಪುಟ ೬೧೭ – ೬೧೮
೧೩. ಶ್ರೇಷ್ಠ ಪತ್ರಿಕೋದ್ಯಮ : ಮ. ಗೋವಿಂದರಾವ್ (ಟಿಪ್ಪಣಿ) ೧೯೯೬
ಸಂ: ಶ್ರೀನಿವಾಸ ಹಾವನೂರು,
ಪ್ರ: ಸಾಹಿತ್ಯ ಭಂಡಾರ, ಬಳೇಪೇಟೆ, ಬೆಂಗಳೂರು – ೫೩
೧೪. ಆಳುವ ಮಹಾಸ್ವಾಮಿ ಅವರು (ಜೀವನ ಚರಿತ್ರೆ) (ಟಿಪ್ಪಣಿ)
ಲೇ: ಸಿ.ಕೆ. ವೆಂಕಟರಾಮಯ್ಯ ೧೯೪೧, ಪುಟ ೪೮೫
೧೫. ಅಧ್ಯಾತ್ಮ ಪ್ರಕಾಶ (ಕ್ರೋಧ್ಯ – ವೈಶಾಖ) (ಗ್ರಂಥ ವಿಮರ್ಶೆ) ಆರ್ಯಧರ್ಮ ಪ್ರದೀಪ
೧೬. ಬಹುಮುಖ ಪ್ರತಿಭೆಯ ಹೊಸಕೆರೆ ಚಿದಂಬರಯ್ಯ (ಲೇಖನ)
ಲೇ: ಡಾ. ಎನ್.ಕೆ. ರಾಮಶೇಷನ್
ಕಸ್ತೂರಿ ಮಾಸಪತ್ರಿಕೆ, ಪುಟ ೯೪–೯೬, ಫೆಬ್ರವರಿ ೨೦೦೪
ಪ್ರ: ಲೋಕಶಿಕ್ಷಣ ಟ್ರಸ್ಟ್, ಬೆಂಗಳೂರು.
೧೭. ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು (ಜೀವನ ಚರಿತ್ರೆ) (ಗ್ರಂಥ)
ಲೇ: ಎನ್.ಎಸ್. ರಾಮಪ್ರಸಾದ್
ಪ್ರ: ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೮. ಮುಲಕನಾಡು ಬ್ರಾಹ್ಮಣರು (ಸಮುದಾಯ ಸಂಸ್ಕೃತಿ) (ಟಿಪ್ಪಣಿ)
೨೦೦೦, ರ. ೨೫೦, ಪುಟ ೫೦೦
ಲೇ: ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ
ಪ್ರ: ಮುಲಕನಾಡು ಮಹಾಸಂಘ, ೫೧೨, ೪೭ನೇ ಕ್ರಾಸ್, ೫ನೇ ಬ್ಲಾಕ್, ಜಯನಗರ, ಬೆಂಗಳೂರು – ೪೫.

೧೯. ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ (ಸಂ. ೨೩, ಸಂಚಿಕೆ ೧) (ಲೇಖನ) ಜನವರಿ – ಮಾರ್ಚ್ ೧೯೩೮, ಸಂಪಾದಕೀಯ ಟಿಪ್ಪಣಿಗಳು.
ಪ್ರ: ಕಸಾಪ ಬೆಂಗಳೂರು

೨೦. ಎಂದಿಗೂ ಮರೆಯಲಾಗದ ಮಹಾಭಾಗವತರು (ಜೀವನ ಚರಿತ್ರೆ) ಲೇ: ಡಾ.ರಾ.ಅ. ಜಾಲಿಹಾಳ, ಗದಗ, ಪ್ರ: ಸಾಹಿತ್ಯಸಿಂಧು ಪ್ರಕಾಶನ, ಬೆಂಗಳೂರು – ೧, ೨೦೧೦, ರೂ. ೯೦, ಪುಟ.೧೮೦.

೨೧. ಕಥಾಕೀರ್ತನ ಕಲೆ – ಲಕ್ಷ್ಮಣದಾಸವೇಲಣಕರ್
ಪ್ರ: ಕರ್ನಾಟಕ ಸಂಗೀತ ಅಕಾಡೆಮಿ, ಬೆಂಗಳೂರು, ೧೯೯೪, ಪುಟ ೧೯೬.

೨೨. ಕರ್ನಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯ (ಜೀವನ ಚರಿತ್ರೆ)
ಲೇ: ಪ್ರೊ. ಜಿ. ಅಶ್ವತ್ಥನಾರಾಯಣ
ಪ್ರ: ಉಲುಚಿಕಮ್ಮೆ ಬ್ರಾಹ್ಮಣ ಮಹಾಸಭಾ, ಬೆಂಗಳೂರು – ೨೦೧೦.

೨೩. ಕರ್ನಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯ ಗ್ರಂಥ ಪರಿಚಯ
ಲೇ: ಪ್ರೊ. ಎಸ್. ಬಿಳಿಗಿರಿವಾಸನ್
ಪ್ರ: ಕರ್ನಾಟಕ ಲೋಚನ (ಜ. ಡಿ ೨೦೧೨ ಸಂ– ೨೬ ಸಂ–೧೨)
ಪ್ರ: ಬಿಎಂಶ್ರೀ ಸಂಘದ ಪ್ರತಿಷ್ಠಾನ

❊ ❊

## ಅನುಬಂಧ – ೫

# ಸಂದರ್ಶನಗಳು

೧. ಹೊಸಕೆರೆ ಚಿದಂಬರಯ್ಯನವರ ಸೊಸೆ ಗುಂಡಮ್ಮ
(ಮಗ ಹೊಸಕೆರೆ ಅನಂತಶಾಸ್ತ್ರಿಗಳ ಪತ್ನಿ)
ಸಂದರ್ಶನ ದಿನಾಂಕ : ೧೫-೬-೧೯೯೭
ಸಂದರ್ಶನ ಸ್ಥಳ : ಚಿದಂಬರಯ್ಯನವರ ಮೊಮ್ಮಗ ಚಿದಂಬರ
ಅವರ ಮನೆ, ನೆಲಮಂಗಲ, ಸುಭಾಷ್‌ನಗರ

೨. ಹೊಸಕೆರೆ ಚಿದಂಬರಯ್ಯನವರನ್ನು ಕಂಡವರು ಭೇಟಿ ರಂಗನಾಥಶರ್ಮಾ, ಶೇಷಾಚಲಶರ್ಮ, (ಪ್ರಸಿದ್ಧ ಸಂಸ್ಕೃತ ವಿದ್ವಾಂಸರು) ಶ್ರೀನಿವಾಸಮೂರ್ತಿ (ಕೆಲ್ಲಂಗೆರೆ ತಿಮ್ಮಪ್ಪನವರ ಮೊಮ್ಮಕ್ಕಳು)
ನಿಟ್ಟೂರು ಶ್ರೀನಿವಾಸರಾಯರು (ಕನ್ನಡದ ಹಿರಿಯರು)
ಬೆಳಗೆರೆ ಕೃಷ್ಣಶಾಸ್ತ್ರಿ (ಹಿರಿಯ ಸಾಹಿತಿ)

೩. ಡಿ. ವೆಂಕಟರಮಣನ್ (ಗೋಖಲೆ ಸಾರ್ವಜನಿಕ ಸಂಸ್ಥೆ)
ವೈ. ಸುಬ್ಬರಾವ್ – ಚಿದಂಬರಯ್ಯನವರ ಬಗ್ಗೆ ಪ್ರಸಂಗವೊಂದನ್ನು ಹೇಳಿದರು

೪. ಶ್ರೀನಿವಾಸರಾವ್ ಅವರ ಸೊಸೆ ಸಾವಿತ್ರಮ್ಮ
ಸಂದರ್ಶನ ದಿನಾಂಕ : ೬-೪-೨೦೧೦; ಸ್ಥಳ : ಅಂಜನಾಪುರ, ಬೆಂಗಳೂರು

೫. ನಿಖಿಲಾನಂದಗುಪ್ತಾ (ಹೊಸಕೆರೆ ಚಿದಂಬರಯ್ಯನವರ ಗೀತಾರ್ಥ ಚಂದ್ರಿಕೆ ಪ್ರಚಾರ ಆಂಧ್ರದಲ್ಲಿ ಮಾಡಿದವರು), ಕನ್ನಡ ಮತ್ತು ತೆಲುಗಿನಲ್ಲಿ

೬. ಎಚ್. ಚಿದಂಬರ (ಹೊಸಕೆರೆ ಅನಂತಮೂರ್ತಿಶಾಸ್ತ್ರಿ ಅವರ ಮಗ) (ಚಿದಂಬರಯ್ಯನವರ ಬಗ್ಗೆ ವಂಶವೃಕ್ಷ ನೀಡಿದರು. ಲೇಖಕನ ಜೀವನಚರಿತ್ರೆ ಓದಿ ಕೆಲವು ಮಾಹಿತಿ ನೀಡಿದರು. ದಿ. ೨೭-೯-೨೦೧೦ರಲ್ಲಿ ನಿಧನರಾದರು)

❊ ❊

ಅನುಬಂಧ – ೬

## ನಾಡಿನ ಹಿರಿಯರ ದೃಷ್ಟಿಯಲ್ಲಿ ಚಿದಂಬರಯ್ಯನವರು

೧. ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ರಚಿಸಿ ಪ್ರಖ್ಯಾತರಾಗಿದ್ದ ಶ್ರೀಮಾನ್ ಹೊಸಕೆರೆ ಚಿದಂಬರಯ್ಯನವರು ತಾರೀಖು ೧೯-೪-೧೯೩೪ರಲ್ಲಿ ತಿರುಮಕೂಡಲು ನರಸೀಪುರದಲ್ಲಿ ದೈವಾಧೀನರಾದುದು ಕನ್ನಡ ಪ್ರಪಂಚಕ್ಕೇ ದೊಡ್ಡ ನಷ್ಟವಾಗಿದೆ.

*ಸಂಪಾದಕರು*
*ಕನ್ನಡ ಸಾಹಿತ್ಯ ಪರಿಷತ್‌ಪತ್ರಿಕೆ*

೨. ಕರಾಳ ಕಾಲನ ವಶದಿಂದ ಅವರು ಕಳೆದ ಚೈತ್ರ ಬಹುಳ ತದಿಗೆಯ ದಿನ ಇಹಲೋಕವನ್ನು ಬಿಟ್ಟು ತೆರಳಿದ್ದು ಇವುಗಳಿಂದ ನನ್ನ ಮನದಲ್ಲುಂಟು ಮಾಡಿರುವ ಮೆಚ್ಚುಗೆಯೂ ಮೈತ್ರಿಯ ಹೊರಹೊಮ್ಮುಗೆಯೂ ವಿರಹಶೋಕವೂ ಒಳತೋಟಿ ಆಡುತಿರುವುವು. ಕಷ್ಟ ಸಹಿಷ್ಣುಗಳಾಗಿ ನಿರಂತರ ವಿದ್ಯಾಭ್ಯಾಸಿಗಳಾಗಿ ಇಹಕ್ಕೂ ಪರಕ್ಕೂ ಬೇಕಾದ ಹೆಗ್ಗುರಿಯನ್ನು ನಡೆಯಿಂದಲೂ ನೀತಿಯಿಂದಲೂ ತೋರಿಕೊಡಬಲ್ಲ ಇಂಥ ಚಿದಂಬರಯ್ಯನವರುಗಳು ಕನ್ನಡ ನಾಡಿನಲ್ಲಿ ಹೇರಳವಾಗಿ ಉದಯಿಸಲಿ. ಜಯ ಚಿದಂಬರ!

*ಶ್ರೀ ಸಚಿದ್ಧಾನಂದೇಂದ್ರ ಸರಸ್ವತಿ ಸ್ವಾಮಿಗಳು*
*ಆಧ್ಯಾತ್ಮ ಪ್ರಕಾಶ ಪತ್ರಿಕೆ*

೩. ಕರ್ನಾಟಕದಲ್ಲಿ ನಾನು ಕಂಡ ಪವಿತ್ರ ಜೀವಿಗಳಲ್ಲಿ ಇವರೊಬ್ಬರು.

*ಪಂಡಿತ ತಾರಾನಾಥ*
*ಕನ್ನಡ ಸಾಹಿತಿ*

೪. ತಮ್ಮ ಜೀವಿತಕಾಲದಲ್ಲಿ ಅರೆ ನಿಮಿಷವೂ ವ್ಯರ್ಥವಾಗದಂತೆ ಕೇವಲ ಅಧ್ಯಾತ್ಮ ವಿಚಾರದಲ್ಲಿ ಕನ್ನಡ ಸಾಹಿತ್ಯ ಸೇವೆಯಲ್ಲಿ ತಮ್ಮ ಆಯುಷ್ಯವನ್ನು ಸವೆಯಸಿದವರು. ಕನ್ನಡದಲ್ಲಿ ಆಧ್ಯಾತ್ಮಿಕ ಸಾಹಿತ್ಯ ಗ್ರಂಥಗಳನ್ನು ಹೆಚ್ಚಾಗಿ ಬರೆದಿರುವವರಲ್ಲಿ ಮೊದಲನೆಯವರು.

*ದ.ಕೃ. ಭಾರದ್ವಾಜ*
*ಪ್ರಸಿದ್ಧ ಕನ್ನಡ ಸಾಹಿತಿ*

೫. ನನ್ನನ್ನು ವಿದ್ಯಾಭ್ಯಾಸದ ಇಲಾಖೆಗೆ ಸೇರಿಸಿ ಆಗಾಗ್ಗೆ ಉಪಯುಕ್ತವಾದ ಸಲಹೆಗಳನ್ನು ನಡೆನುಡಿಗಳಿಂದ ಕೊಡುತ್ತ ಏಕದೇಹ ನ್ಯಾಯದಿಂದ ದೀರ್ಘಕಾಲದವರೆಗೆ ಇದ್ದುಕೊಂಡಿದ್ದು, ನನ್ನ ಬಾಳಿಗೆ ಸುಖದ ಹೊಯ್ನೀರನ್ನು ಎರೆಯುತ್ತಿದ್ದರು.

*ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು*
*ಹೊಳೆನರಸೀಪುರ*

೬. ನೋಡಿದರೆ ಬಿಡದೆ ಇರುವ ಪುಸ್ತಕಗಳನ್ನು ಬರೆದಿರುವವರೂ ನನ್ನ ಅತ್ಯಂತ ಬಾಲ್ಯವಯಸ್ಸಿನಲ್ಲಿ ಪೂಜ್ಯರೂ ಹಿರಿಯರೂ ಆಗಿದ್ದ ಶ್ರೀ ಚಿದಂಬರಯ್ಯನವರನ್ನು ತುಮಕೂರು ಜಿಲ್ಲೆಯ ಹೊಸಕೆರೆ ಗ್ರಾಮದಲ್ಲಿ ನೋಡಿದ ನೆನಪು ನನ್ನಲ್ಲಿ ಇಂದಿಗೂ ಹಸಿರಾಗಿದೆ

*ಶೇಷಾಚಲಶರ್ಮಾ*
*ಪ್ರಸಿದ್ಧ ಹಿರಿಯ ಸಂಸ್ಕೃತ ವಿದ್ವಾಂಸರು*

೭. ನಮ್ಮ ತಂದೆ ತಮ್ಮ ಮಧ್ಯವಯಸ್ಸಿನಲ್ಲಿ ಅವರು ದಿನವೂ ಸಂಜೆ ಭಗವದ್ಗೀತೆಯನ್ನು ಓದುತ್ತಿದ್ದರು. ಅದರಿಂದ ಮನಸ್ಸಿಗೆ ಶಾಂತಿ ಲಭಿಸುತ್ತದೆ ಎಂದು ಹೇಳುತ್ತಿದ್ದರು. ಅವರು ಬಳಸುತ್ತಿದ್ದ ಪ್ರತಿಯನ್ನು ಹೊಸಕೆರೆ ಚಿದಂಬರಯ್ಯನವರ ಅನುವಾದದೊಡನೆ ಈಗಲೂ ನಾನು ಬಳಸುತ್ತೇನೆ.

*ಡಾ. ಹಾಮಾನಾಯಕ*
*ಪ್ರಸಿದ್ಧ ಅಂಕಣಕಾರರು*

೮. ಗಾಂಧೀ ಮೈದಾನದ (ಈಗ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇರುವ ಸ್ಥಳ) ಭಾಷಣಗಳನ್ನು ಕೇಳಲು ಸಮಾಜದ ಪ್ರತಿಷ್ಠಿತ ವ್ಯಕ್ತಿಗಳು, ವಿದ್ವಜ್ಜನರು, ಸಾಮಾನ್ಯವಾಗಿ ಬರುತ್ತಿರಲಿಲ್ಲ. ಅವರಿಗೆ ಸಿಐಡಿಗಳ ಭಯ. ಪಂಡಿತ ತಾರಾನಾಥರು ಗೀತೆಯ ಮೇಲೆ ಹತ್ತು ಭಾಷಣಗಳನ್ನು ಗಾಂಧೀ ಮೈದಾನದಲ್ಲಿ ಮಾಡಿದಾಗ ತಪ್ಪದೆ ಹೊಸಕೆರೆ ಚಿದಂಬರಯ್ಯನವರು, ವೈ. ಸುಬ್ಬರಾಯರು, ಕೆ.ವಿ. ಕೃಷ್ಣಸ್ವಾಮಿ ಅಯ್ಯರ್ ಅವರು ಬರುತ್ತಿದ್ದರು. ಮೂವರೂ ಘನವಿದ್ವಾಂಸರು, ದಾರ್ಶನಿಕರು.

*ಅನ.ಕೃ, ಬರಹಗಾರನ ಬದುಕು, ಪುಟ ೩೨–೩೩*

೯. ಹೊಸಕೆರೆ ಚಿದಂಬರಯ್ಯನವರ ಗೆಳತನದಿಂದಾಗಿ ಕುರ್ತುಕೋಟಿ ಭಾಗವತರ ಸೇವೆಯೂ ಗೋಂದಾವಳಿ ಶ್ರೀ ಬ್ರಹ್ಮಚೈತನ್ಯಸದ್ಗುರು ಮಹಾರಾಜರಿಂದ ಮಂತ್ರೋಪದೇಶವೂ ದೊರೆತವು.

*ಸಾ.ಕೃ. ರಾಮಚಂದ್ರರಾವ್, ಪ್ರಸಿದ್ಧ ವಿದ್ವಾಂಸರು*

೧೦. ೧೯೪೮ರಲ್ಲಿ ಸ್ವದೇಶಾಭಿಮಾನಿಯಲ್ಲಿ ಪ್ರಕಟಿತವಾದ ನನ್ನ ಕೆಲವು ಲಘು ಬರಹಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದ್ದೇನೆ. ಅದರಲ್ಲಿ ಒಂದು ಸಂಗ್ರಹದ ಹೆಸರು 'ದೇಹಜ್ಯೋತಿಗಳು ಮತ್ತು ಪ್ರಾಣಿ ಪ್ರಬಂಧಗಳು' ಎಂದು. ಅದಕ್ಕಿಂತ ಹಿಂದಣ ದಶಕದಲ್ಲಿ ಹೊಸಕೆರೆ ಚಿದಂಬರಯ್ಯನವರು 'ಭರತಖಂಡದ ಜೀವಜ್ಯೋತಿಗಳು' ಎಂಬ ಒಂದು ಗ್ರಂಥದಲ್ಲಿ ಪ್ರಸಿದ್ಧ ವ್ಯಕ್ತಿಗಳ ಜೀವನ ಚಿತ್ರಗಳನ್ನು ಪ್ರಕಟಿಸಿದ್ದರು. ಅವರ ಪುಸ್ತಕದ ಆಖ್ಯೆ ನನಗೆ ಪ್ರೇರಣೆಯನ್ನು ಕೊಟ್ಟಿತ್ತು.

*ಶಿವರಾಮ ಕಾರಂತರು, ಸಾಹಿತ್ಯ ಮತ್ತು ನಾನು*
*ಸ್ಮೃತಿಪಟಲ – ೨ರಲ್ಲಿ, ಪು. ೨೮, ೧೯೭೮*

೧೧. ೧೯೨೦ರಲ್ಲಿ ಧಾರವಾಡದ ರಾಷ್ಟ್ರೀಯ ವಿದ್ಯಾಲಯದಲ್ಲಿ ಇಪ್ಪತ್ತನೇ ಶತಮಾನದ ವಿಭೂತಿ ಪುರುಷರ ಚರಿತ್ರೆಗಳಲ್ಲಿಯ ಮುಖ್ಯಾಂಶಗಳನ್ನು ಹೇಳುತ್ತಿದ್ದರು. ನಾವೆಲ್ಲರೂ ಇದರಿಂದ ಪ್ರಭಾವಿತರಾದವರೇ.

*ಕಡಲಬಾಳು ಪ್ರಹ್ಲಾದಾಚಾರ್ಯ*
*ಮ. ಗೋವಿಂದಾರಾವ್ ವಿದ್ಯಾರ್ಥಿಗಳು*

* *









ಸಾಹಿತ್ಯೋಪಾಸಕರು

'ಸಾಹಿತ್ಯೋಪಾಸಕರು'
ಲೇಖನಮಾಲೆಯಡಿ ಉಪನ್ಯಾಸಗಳನ್ನು
ನೀಡಿ ಅವನ್ನು ಬರೆವಣಿಗೆಯ
ರೂಪದಲ್ಲಿ ನೀಡಿ ಉಪಕರಿಸಿದ
ಡಾ. ಪ್ರಮೀಳಾ ಮಾಧವ್,
ಡಾ. ವಿಜಯಾ ಸುಬ್ಬರಾಜ್,
ಪ್ರೊ. ಎಸ್. ಬಿಳಿಗಿರಿವಾಸನ್ ಮತ್ತು
ಪ್ರೊ. ಜಿ. ಅಶ್ವತ್ಥನಾರಾಯಣ ಅವರುಗಳ
ಸಹಕಾರದಿಂದ ಈ ಕೃತಿಯನ್ನು
ಪ್ರತಿಷ್ಠಾನವು ಪ್ರೀತಿಯಿಂದ
ಹೊರತರುತ್ತಿದೆ.

ಡಾ. ಪಿ.ವಿ.ನಾರಾಯಣ
ಅಧ್ಯಕ್ಷರು



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು - ೫೬೦ ೦೧೯